ಶ್ರೀ

...ವರ್ಯ

# ಪ್ರಸನ್ನವೆಂಕಟರ ಭಾಗವತ

ದಶಮಸ್ಕಂದ

ಪೂರ್ವಾರ್ಧವು

ಶ್ರೀ

# ಪ್ರಸನ್ನವೆಂಕಟದಾಸರ ಭಾಗವತ

## ದಶಮಸ್ಕಂದ

## ಪೂರ್ವಾರ್ಧವು


ಸಂಪಾದಕರು:

ಕವಿಭೂಷಣ ಬೆಟಗೇರಿ ಕೃಷ್ಣರಾಯರು

ಮತ್ತು

ಕೌಜಲಗಿ ಬಂಡೇರಾಯರು



ಪ್ರಕಾಶಕರು:

ಕರ್ಮವೀರ ಪುಸ್ತಕಾಲಯದ ಒಡೆಯರು

ಮೊದಲು ಸಲ ೧೦೦೦ ಪ್ರತಿಗಳು

ಜಾನೆವರಿ ೧೯೩೮. ] [ ಪೌಷ್ಯ ೧೮೫೯.

ಬೆಲೆ ೧-೦-೦

# ಪದಗಳ ಪಟ್ಟಿ

# ಪ್ರಕಾಶಕರ ಆಕ್ರೋಶವು

ಶ್ರೀಪುರಂದರಪ್ರಸನ್ನವೆಂಕಟದಾಸರೇ ಮೊದಲಾದ ಭಗವದ್ಭಕ್ತರು ತಮ್ಮ ಹೃದಯದಲ್ಲಿ ಸ್ಫೂರ್ತಿ ಹೊಂದಿದ ಭಕ್ತಿರಸದಿಂದ ತುಂಬಿ ತುಳುಕುತ್ತಿರುವ ಅನೇಕ ಅಮೃತಕುಂಡಗಳನ್ನು ನಿರ್ಮಿಸಿದ್ದಾರೆ. ಈ ಅಮೃತಕುಂಡಗಳ ಕಡೆಗೆ ಹೋಗಲಿಕ್ಕೆ ಪುರಾಣ, ಕೀರ್ತನ, ಜಾಗರಣ ಮೊದಲಾದವುಗಳು ಪ್ರಾಚೀನ ಕಾಲದಿಂದ ಪ್ರಸಿದ್ಧವಾದ ಮಾರ್ಗಗಳಾಗಿರುತ್ತವೆ. ಇತ್ತಿತ್ತಲಾಗಿ ಈ ಮಾರ್ಗಗಳು ಅಷ್ಟು ಉಪಯೋಗದಲ್ಲಿಲ್ಲದ್ದರಿಂದ ಮುಚ್ಚಿ ಹೋಗಹತ್ತಿವೆ. ಇಂದು ನಾವು ಈ ಅಮೃತಕುಂಡಗಳ ಕಡೆಗೆ ಹೋಗಬೇಕಾದರೆ ನಮಗೆ ಮುದ್ರಣಾಲಯಗಳು, ಪ್ರಕಾಶಕರು ಎಂಬ ಉಗಿಬಂಡಿಗಳು ಮೋಟಾರಗಳು ಅವಶ್ಯವಾಗಿ ಬೇಕು. ಯಾವನೊಬ್ಬ ವ್ಯಕ್ತಿಯು ಈ ಅಮೃತಮಯವಾದ ಸಂಪತ್ತು ಇಂಥಲ್ಲಿ ಉಂಟೆಂದು ಮತ್ತೊಮ್ಮೆ ಶೋಧಮಾಡಿಕೊಂಡು ಬರಬಹುದು. ಮತ್ತು ಆ ಸುಧಾಶಯದೊಳಗಿಂದ ಒಂದೆರಡು ತಂಬಿಗೆ ಅಮೃತವನ್ನು ತನ್ನ ಕಾವಡಿಯಲ್ಲಿ ತುಂಬಿ ಸಹ ತಂದಿರಬಹುದು. ಆ ಬಳಿಕ ಮತ್ತೊಬ್ಬ ವ್ಯಕ್ತಿಯು ಆ ಅಮೃತವನ್ನು ಪ್ರಾಶನ ಮಾಡಿ " ಅಹಹ! ಈ ಅಮೃತವು ಎಷ್ಟು ಮಧುರವಾಗಿರುವದು! " ಎಂದು ಅದರ ಗುಣವನ್ನು ಪರಿಪರಿಯಿಂದ ವರ್ಣಿಸಬಹುದು. ಆದರೆ ಈಗಿನ ಕಾಲಕ್ಕೆ ಈ ಆನಂದಪೂರ್ಣವಾದ ಸುಧಾಕರಗಳಿಗೆ ಹೋಗಲಿಕ್ಕೆ ಮುದ್ರಕರು, ಪ್ರಕಾಶಕರು ಉತ್ತಮವಾಹ ಪ್ರಸಿದ್ಧ ರಾಜಮಾರ್ಗಗಳನ್ನು ಮಾಡಿಕೊಡುವವರಾಗಿರುತ್ತಾರೆ. ಮತ್ತೆ ಇವರ ಕೆಲಸಗಳು ಸುಲಭವಾಗಿ ಸಾಗುವಂತೆ ಮಾಡುವವರೆಂದರೆ ರಸಿಕರಾದ ವಾಚಕರು, ಅಥವಾ ನಿಷ್ಠುರತನದಿಂದಲೂ, ಸ್ಪಷ್ಟೋಕ್ತಿಯಿಂದಲೂ ಹೇಳಬೇಕಾದರೆ, ದುಡ್ಡು ಕೊಟ್ಟು ಪುಸ್ತಕವನ್ನು ಕೊಳ್ಳತಕ್ಕ ಗ್ರಾಹಕರೆಂದು ಖಂಡಿತವಾಗಿ ಹೇಳಬಹುದು. ಈ ಪ್ರಕಾರ ಆನಂದದಿಂದ ತುಂಬಿ ತುಳುಕುತ್ತಿರುವ ಅಮೃತಮಯ ಸಂಪತ್ತುಗಳು ನಮ್ಮ ವಾಙ್ಮಯದಲ್ಲಿ ಅಲ್ಲಲ್ಲಿಗೆ ಉಂಟೆಂದು ನಮಗೆ ಗೊತ್ತಾಗಿದ್ದರೂ ಅವುಗಳನ್ನು ದೊರಕಿಸಿ ಪ್ರಸಿದ್ಧಮಾಡುವದು ಕಷ್ಟಸಾಧ್ಯವಿರುವದು. ಅಸ್ತು!

ಇನ್ನು ಈ ಅಲಂಕಾರಿಕ ಭಾಷೆಯನ್ನು ಬಿಟ್ಟು, ಈ ಪುಸ್ತಕದ ವಿಷಯವಾಗಿ ಸರಳವಾಗಿ ನಾಲ್ಕು ಮಾತುಗಳನ್ನು ಹೇಳುವೆವು. ಈ ಪುಸ್ತಕದಲ್ಲಿ ಸಂಗ್ರಹಿಸಿದ ಪದ್ಯಗಳು ಭಕ್ತಿರಸದಿಂದ ತುಂಬಿರುವವೆಂಬ ಸಂಗತಿಯು ಎಷ್ಟೋ ವರ್ಷಗಳಿಂದ ನಮ್ಮ ಕೇಳಿಕೆಯಲ್ಲಿತ್ತು. ಮತ್ತು ಆ ಪದ್ಯಗಳನ್ನು ಅಚ್ಚುಹಾಕಿಸಿ ಪ್ರಸಿದ್ಧಮಾಡ

ಬೇಕೆಂಬ ನಮ್ಮ ಇಚ್ಛೆಯಾದರೂ ಅಷ್ಟೇ ಹಳೆಯದಾಗಿದೆ. ಆದರೆ ಮೇಲೆ ಹೇಳಿದ
ಕಾರಣಗಳ ಮೂಲಕ, ಈ ಪುಸ್ತಕವು ಪ್ರಸಿದ್ಧವಾಗದೆ ಇಂದಿನ ವರೆಗೆ ಹಾಗೇ ಉಳಿ
ಯಿತು. ಈಗ ೫–೬ ವರ್ಷಗಳ ಹಿಂದೆ ನಾವು ಶ್ರೀಯುತ ಮುದವೇಡಿ ಕೃಷ್ಣರಾವ
ಇವರೊಡನೆ ಸ್ವರಾಜ್ಯಾಶ್ರಮದಲ್ಲಿ ಇರುತ್ತಿರುವಾಗ ಅವರು ಈ ಪದ್ಯಗಳನ್ನು
ಆಗಾಗ್ಗೆ ಅನ್ನುತ್ತಿದ್ದರು. ಆಗ ಈ ಪದ್ಯಗಳನ್ನು ಅಚ್ಚುಹಾಕಿಸಿ ಪ್ರಸಿದ್ಧ ಮಾಡ
ಬೇಕೆಂಬ ವಿಚಾರವು ಹೆಚ್ಚು ಬಲವತ್ತರವಾಯಿತು. ಇರಲಿ.

ಪ್ರಕೃತ ಪುಸ್ತಕದಲ್ಲಿ ಮುದ್ರಿಸಿದ ಪದ್ಯಗಳನ್ನು ಶ್ರೀ. ಕೌಜಲಗಿ ಬಂಡೇರಾ
ಯರು ಸಂಗ್ರಹಿಸಿದರು, ಮತ್ತು ಅವುಗಳಿಗೆ ಟಿಪ್ಪಣಿಗಳನ್ನು ಬರೆದರು. ನಮ್ಮ
ಸ್ನೇಹಿತರಾದ ಆಲೂರ ವೆಂಕಟರಾಯರು ಈ ಪದ್ಯಗಳೊಳಗಿನ ಮಾಧುರ್ಯವನ್ನು
ಸವಿದರು. ನಮ್ಮ ವ್ಯವಸಾಯಬಂಧು ಮತ್ತು ಸ್ನೇಹಿಗಳಾದ ಕರ್ನಾಟಕ ವಾಙ್ಮ
ಯಕ್ಕಾಗಿ ತಮ್ಮ ವ್ಯವಸಾಯದಲ್ಲಿಯೇ ಮೂಕವೃತ್ತಿಯಿಂದ ಬಹು ದಿವಸಗಳಿಂದ
ಕಷ್ಟಪಡುತ್ತಿರುವ ಕರ್ನಾಟಕ ಪ್ರಿಂಟಿಂಗ ವರ್ಕ್ಸ ಎಂಬ ಮುದ್ರಣಾಲಯದ ಒಡೆ
ಯರಾದ ಶ್ರೀ. ಜತಾರ ಯಶವಂತರಾಯರು ಮುದ್ರಣದ ಕಾರ್ಯಕ್ಕೆ ನಮಗೆ ಅನು
ಕೂಲ ಮಾಡಿಕೊಟ್ಟರು. ಮತ್ತು ಆ ಮುದ್ರಣಾಲಯದ ಚಾಲಕರಾದ ಶ್ರೀ.
ಕೃಷ್ಣಾಜಿ ಹರಿ ದೀಕ್ಷಿತ ಇವರು ಯಥಾಪ್ರಕಾರವಾಗಿ ಮುದ್ರಣದ ಕಾರ್ಯವನ್ನು
೧೦–೧೫ ದಿವಸಗಳಲ್ಲಿ ಅತಿತ್ವರೆಯಿಂದ ನೆರವೇರಿಸಿ ಪುಸ್ತಕಗಳನ್ನು ಸಿದ್ಧಮಾಡಿ
ಕೊಟ್ಟರು. ಕಟ್ಟಕಡೆಗೆ ಹೇಳತಕ್ಕ ಇನ್ನೊಂದು ಮಹತ್ವದ ಸಂಗತಿಯು ಉಳಿ
ದಿರುವದು. ಅದು ಯಾವದೆಂದರೆ:— ವಾಚಕರು ಈ ಪುಸ್ತಕವನ್ನು ಕೊಂಡು
ಕೊಳ್ಳುವದು. ಭಕ್ತರ ಹೃದಯದಲ್ಲಿ ಇದ್ದುಕೊಂಡು ಅವರಿಗೆ ಭಕ್ತಿಯ ಸಲು
ವಾಗಿ ನಾನಾಪ್ರಕಾರದ ಪ್ರೇರಣೆಯನ್ನು ಮಾಡುತ್ತಿರುವಂಥ ಭಗವಂತನು ನಮ್ಮ
ಕರ್ನಾಟಕದೊಳಗಿನ ರಸಿಕ ವಾಚಕವೃಂದಕ್ಕೆ ಈ ಪುಸ್ತಕವನ್ನು ಓದುವ ಸ್ಫೂರ್ತಿ
ಯನ್ನು ಉಂಟುಮಾಡಿ, ಗ್ರಂಥಪ್ರಕಾಶಕರಿಗೆ ಈ ಬಗೆಯ ಕೆಲಸಗಳನ್ನು ಪುನಃ
ಮಾಡಲಿಕ್ಕೆ ಉತ್ತೇಜನವನ್ನು ಕೊಡಬೇಕೆಂದು ಬೇಡಿಕೊಳ್ಳುವೆವು. ಹಾಗೆ ಆದರೆ
ಮನುಷ್ಯನು ಜನ್ಮಕ್ಕೆ ಬಂದು ತೀರಿಸಬೇಕಾಗಿರುವ ಋಣಗಳಲ್ಲಿ ಪೂರ್ವಜರ ಋಣ
ವನ್ನು ತೀರಿಸಿ ಕರ್ನಾಟಕ ಮಾತೆಯ ಸೇವೆಯನ್ನು ಮಾಡಿದ ಸಮಾಧಾನವು ಉಂಟಾ
ಗುವದು. ಮತ್ತು ಮುಂದಣ ಕಾರ್ಯವನ್ನು ಮಾಡಲಿಕ್ಕೆ ಹೆಚ್ಚಿನ ಉಲ್ಲಾಸ
ನಮಗೆ ಬರುವದು. **क्लेशः फलेन हि पुनर्नवतां विधत्ते ।**

— ಪ್ರಕಾಶಕರು

# ಮುನ್ನುಡಿ

ದಾಸವರ್ಯ ಶ್ರೀ ಪ್ರಸನ್ನವೆಂಕಟರು ಪರವಶರಾಗಿ ಹಾಡಿದ ಕನ್ನಡ ಭಾಗವತ ದಶಮಸ್ಕಂದವು ಕನ್ನಡ ವೈಷ್ಣವ ಸಮಾಜದೊಳಗೆ ಬಹು ಜನ ಪ್ರಿಯವಾಗಿರುವದು. ಪ್ರಾಯಶಃ ನಮ್ಮ ಭಗಿನೀಜನರೊಳಗಂತೂ ಅದರ ಪ್ರಚಾರ ಅಷ್ಟಿಷ್ಟೆಂದು ಹೇಳಲಿಕ್ಕಾಗದು; ಈಗಿನಂಥ ಮುದ್ರಣ ಸೌಕರ್ಯವುಳ್ಳ ಕಾಲದಲ್ಲಿ ಇಂಥ ಗ್ರಂಥಗಳು ಮುದ್ರಣ ಹೊಂದದೆ ಕೈಬರಹದಲ್ಲಿಯೇ ಅಡಗಿರವದರಿಂದಲೂ, ಈ ಪದಗಳನ್ನು ಅನ್ನುವವರಿಗೆ ಬಹುತರವಾಗಿ ಕನ್ನಡ ವ್ಯಾಕರಣಜ್ಞಾನವಿಲ್ಲದಿರುವದರಿಂದಲೂ, ಅನ್ನುವಾಗ್ಗೆ ಅನೇಕ ತಪ್ಪುಗಳಾಗುವದುಂಟು. ಈ ಮೇರೆಗೆ ನನ್ನ ಅನೇಕ ಅಕ್ಕ ತಂಗಿಯರು ಶ್ರೀಪ್ರಸನ್ನವೆಂಕಟರ ಭಾಗವತವನು ಅನ್ನುತ್ತಿರುವದನ್ನು ನಾನು ಕೇಳಿದೆ. ಆಗ ದಾಸರ ವಾಣಿಯ-ಮಾಧುರ್ಯ, ಶ್ರೀಕೃಷ್ಣಲೀಲೆಯನ್ನು ಜನರಾಡುವ ಭಾಷೆಯಲ್ಲಿ ವರ್ಣಿಸುವ ಅವರ ಶಬ್ದಸಂಪತ್ತು, ಮತ್ತು ಅದನ್ನು ಕಣ್ಣಿಗೆ ತಂದು ಕಟ್ಟುವಹಾಗೆ ಹೇಳುವ ರೀತಿ, ಅವರ ಅಗಾಧವಾದ ಭಕ್ತಿ, ಇವೆಲ್ಲವುಗಳನ್ನು ಕಂಡು, "ಇಂಥ ಗ್ರಂಥರತ್ನವನ್ನು ತಿದ್ದಿ ಮುದ್ರಿಸುವಂಥ ಕಾಲವು ನಮಗಿನ್ನೂ ಬರಬಾರದೇ" ಎಂದು ನಾನು ಅನೇಕ ಸಲ ನಮ್ಮ ಮಿತ್ರರಲ್ಲಿ ಆಡಿ ತೋರಿಸಿದ್ದೆ; ಆದರೆ ಹೀಗೆ ಅಂದಾಕ್ಷಣಕ್ಕೆಂದಾದರೂ ಕಾರ್ಯವಾಗುವದುಂಟೇ ? ಅದಕ್ಕೆ ತಕ್ಕ ಕಾಲ ಬೇಕು.

ಒಂದು ಸಾರೆ ಶ್ರೀ ಮುರನಾಳ ಮಧ್ವರಾಯರು ತಮ್ಮಲ್ಲಿದ್ದ ಭಾಗವತ ದಶಮಸ್ಕಂದದ ಪ್ರತಿಯನ್ನು ನನಗೆ ತೋರಿಸಿ, ಅದರ ಮಹತ್ವವನ್ನು ಕುರಿತು ಬಲು ಹೊಗಳಿದರು; ಇದೇ ಕಾಲಕ್ಕೆ ಶ್ರೀ. ಮುದವೀಡು ಕೃಷ್ಣರಾಯರು ಒಮ್ಮೆ ಶ್ರೀ ಭಾಗವತವನ್ನು ಕುರಿತು ಮನಸಿನಲ್ಲಿ ಮೂಡುವಂತೆ ವರ್ಣಿಸಿದ್ದಲ್ಲದೆ, ಪರವಶರಾಗಿ ಅನೇಕ ಪದಗಳನ್ನುನನಗೆ ಅಂದು ತೋರಿಸಿದರು; ಆದರೇನು ಮಾಡುವದು ! ಕೈಬರಹದ ಓಲೆಗಳು ಹಲವು ತಪ್ಪುಗಳಿಂದ ತುಂಬಿದಂಥವು ! ಅವುಗಳನ್ನೆಲ್ಲ ತಿದ್ದಿ ತಿಳಿಯುವಂತೆ ಮಾಡುವದೊಂದು ಘನವಾದ ಕೆಲಸವೇ ಇತ್ತು; ಇದೆಲ್ಲ ನನ್ನೊಬ್ಬನಿಂದ ನೀಗುವದೆಂತು ! ಎಂದು ಯೋಚಿಸುತ್ತಿರುವಲ್ಲಿ ಕರ್ನಾಟಕ ರಾಷ್ಟ್ರೀಯ ಶಾಲೆಯಲ್ಲಿ ಶಿಕ್ಷಕರಾಗಿ ನನ್ನೊಡನೆ ಕೆಲಸ ಮಾಡುತ್ತಿದ್ದ ಶ್ರೀ. ಕವಿಭೂಷಣ ಬೆಟಗೇರಿ ಕೃಷ್ಣರಾಯರಿಗೂ ನನಗೂ ಈ ವಿಷಯವಾಗಿ ಮಾತು ನಡೆದು ಅದನ್ನು ತಿದ್ದುವ ಕೆಲಸಕ್ಕೆ ಕೈಕಟ್ಟಬೇಕೆಂದು ನಿಶ್ಚಯಿಸಿ, ನಾವು ಶ್ರೀ ಪ್ರಸನ್ವೆಂಕಟರ ಭಾಗವತದ ೩-೪ ಕೈಬರಹದ ಪ್ರತಿಗಳನ್ನು ಸರಿಪಡಿಸಿಕೊಂಡು ೨-೩ ತಿಂಗಳ ವರೆಗೆ ದುಡಿದು ಯಥಾಮತಿ ತಿದ್ದಿ, ಅರ್ಥ, ಟಿಪ್ಪಣಿಗಳನ್ನು ಬರೆಯುವ ಕೆಲಸ ಮಾಡಿಟ್ಟೆವು.

ಬೆಳಗಾವಿಯ ರಾಮತತ್ವಪ್ರಕಾಶ ಮುದ್ರಾಲಯದವರು ಕೇವಲ ಹಾಡು ಗಳನ್ನು ಬಾಲಬೋಧಲಿಪಿಯಲ್ಲಿ 'ದಾಸರ ಗ್ರಂಥವು ಹೊರಬಿದ್ದರೆ ಸಾಕು' ಎಂಬ ಸದುದ್ದೇಶದಿಂದಲೇ ಹೋದವರ್ಷ ವಿಶೇಷ ಪರಿಶೋಧನೆಯನ್ನು ಮಾಡದೆ ಮುದ್ರಿಸಿಬಿಟ್ಟಿರುವರೆಂದೂ ನನಗೆ ಹಿಂದಿನಿಂದ ತಿಳಿಯಿತು. ಅದನ್ನೂ ಓದಿ ನೋಡಿದೆ. ಆಗ ನಾನು ಮಾಡಿದ ಸೇವೆಯು ಸಕಾಲವೆಂದು ಅನಿಸಿತು.

ನಮ್ಮ ಕೈಯಲ್ಲಿದ್ದ ಕೆಲಸವನ್ನಂತೂ ಮಾಡಿಟ್ಟಂತಾಯಿತು. ಮುಂದಿನ ಅಂದರೆ ಮುದ್ರಣ ಕೆಲಸವು ಯಾರ ಕೈಯೊಳಗಿನ ಮಾತು ! ಈ ವರೆಗೆ ಕೆಲಸ ಮಾಡಿಸಿದ ಶ್ರೀ ಪ್ರಸನ್ವೆಂಕಟರೇ ಅದನ್ನೂ ಯಾರ ಮನಸಿನಲ್ಲಾದರೂ ಹೊಕ್ಕು ಸೇವೆಗೊಂಬುವರೆಂದು ಮನಸಿನಲ್ಲೊಂದು ಹುಚ್ಚು ವಿಶ್ವಾಸ. ಈ ವಿಶ್ವಾಸ ವನ್ನೂ ಶ್ರೀ. ಹುಕ್ಕೇರಿ ರಾಮರಾಯರೇ ಭಗವತ್‌ಪ್ರೇರಣೆಯಿಂದಲೇ ನೆರವೇರಿ ಸಲು ತಾವಾಗಿ ಒಪ್ಪಿಕೊಂಡದ್ದರಿಂದಲೂ ಧಾರವಾಡ ಕರ್ನಾಟಕ ಪ್ರಿಂಟಿಂಗ ಪ್ರೆಸ್‌ದ ಒಡೆಯರಾದ ಶ್ರೀ. ಜತಾರ ಬಳವಂತರಾಯರೂ ಮುದ್ರಣ ಕೆಲಸ ವನ್ನು ಹುರುಪಿನಿಂದ ಕೈಕೊಂಡದ್ದರಿಂದಲೂ ೧೫-೨೦ ದಿನಗಳಲ್ಲಿಯೇ ಈ ಪುಸ್ತಕವು ಬೆಳಕುಕಾಣಲಿಕ್ಕವಕಾಶವಾಯಿತು. ಅವಸರದಿಂದ ಪುಸ್ತಕವು ಹೊರಬಿದ್ದದ್ದರಿಂದ ಇದರಲ್ಲಿ ಮುದ್ರಣದೋಷಗಳೆಷ್ಟೋ ಇನ್ನೂ, ಉಳಿದಿರಬ ಹುದು. ಅವುಗಳನ್ನು ಮುಂದಿನ ಸಲ ತಿದ್ದಿಕೊಳ್ಳುವೆನು. ವಾಚಕರು ಕ್ಷಮಿ ಸಬೇಕೆಂದು ಪ್ರಾರ್ಥನೆ.

ಈ ಕಾರ್ಯದಲ್ಲಿ ನನ್ನನ್ನು ಹುರುಪುಗೊಳಿಸಿದ ಶ್ರೀ. ಮುರನಾಳ ಮಧ್ವ ರಾಯರಿಗೂ, ಶ್ರೀ ಮುದವೀಡು ಕೃಷ್ಣರಾಯರಿಗೂ, ನನಗೆ ಅರ್ಥ ಟಿಪ್ಪಣಿಗ ಳನ್ನು ಬರೆಯಲಿಕ್ಕೆ ನೆರವಾದ ಶ್ರೀ. ಬೆಟಗೇರಿಯವರಿಗೂ, ಎಷ್ಟೋ ಕಡೆಯಲ್ಲಿಯ ಪ್ರಮೇಯ ಭಾಗವನ್ನು ತಿಳಿಸಿಹೇಳಿದ ಗು. ವೇ. ಪಾಂಡುರಂಗಿ ಶ್ರೀನಿವಾಸಾ ಚಾರ್ಯ, ಹಾಗು ವೇ. ಉಮಡಿ ಶ್ರೀನಿವಾಸಾಚಾರ್ಯ ಮೊದಲಾದವರಿಗೂ, ಸುಂದರವಾದ ಪ್ರಸ್ತಾವನೆಯನ್ನು ಬರೆದುಕೊಟ್ಟ ಶ್ರೀ. ಆಲೂರ ವೆಂಕಟರಾಯ ರಿಗೂ, ಶ್ರಮೆಯನ್ನು ಕೊಂಡು ಮುದ್ರಿಸಿದ ಶ್ರೀ. ಜತಾರ ಬಳವಂತರಾಯರಿಗೂ ಇದನ್ನು ಜನರ ಮುಂದೆ ತಂದಿಡಲು ಸಹಾಯ ಕೊಟ್ಟ ಶ್ರೀ. ಹುಕ್ಕೇರಿ ರಾಮ ರಾಯರಿಗೂ, ಮಿಕ್ಕ ಮಿತ್ರರಿಗೂ ನಾನು ಅನೇಕ ವಂದನೆಗಳನ್ನರ್ಪಿಸುವದು ನನ್ನ ಕರ್ತವ್ಯವಾಗಿದೆ. ಇನ್ನುಮುಂದೆ ನಾನು ಮಾಡಿದ ಸೇವೆಯನ್ನು ಸಫಲ ವಾಗುವಂತೆ ಮಾಡುವದು ದಾಸರ ಭಕ್ತರ ಮೇಲಿದೆ. ಅವರ ಕಡೆಯಿಂದಲೂ ಶ್ರೀ ದಾಸರ ಅಂತರ್ಯಾಮಿಯಾದ ಪರಮಾತ್ಮನು ಸೇವೆಯನ್ನು ಸ್ವೀಕರಿಸಿಯೇ ತೀರುವನೆಂದು ದೃಢವಾಗಿ ನಂಬಿರುವ,

ಸಜ್ಜನರಡಿಗಳ ದಾಸ

**ಕೌಜಲಗಿ ಬಂಡೇರಾಯ**

ಶ್ರೀ

# ಪ್ರಸ್ತಾವನೆ

**उत्पन्ना द्राविडे सांह वृद्धिं कर्णाटके गता ।**
**क्वचित्क्वचितमहाराष्ट्रे गुर्जरे जीर्णतांगता ॥**

ಪದ್ಮಪುರಾಣ ಉತ್ತರ ಖಂಡ ೧ನೆಯ ಅಧ್ಯಾಯ ಶ್ಲೋಕ ೪೮

ಶ್ರೀ ಪದ್ಮಪುರಾಣದಲ್ಲಿಯ 'ಭಕ್ತಿ, ಎಂಬ ಸ್ತ್ರೀಯಯು ತೆಗೆದ ಮೇಲಿನ ಉದ್ಗಾರದಿಂದ ಕಂಡು ಬರುವುದೇನೆಂದರೆ ಭಕ್ತಿಯು ದ್ರಾವಿಡ ಅಂದರೆ ತಮಿಳು ದೇಶದಲ್ಲಿ 'ಪ್ರಬಂಧ' ಗಳಲ್ಲಿ ಮೊದಲು ವಿಶೇಷವಾಗಿ ವರ್ಣಿಸಲ್ಪಟ್ಟಿತು. ಮುಂದೆ ಭಕ್ತಿರಸವು ಕರ್ನಾಟಕವನ್ನು ಹೊಕ್ಕು ಅಲ್ಲಿ ತುಂಬಿ ತುಳುಕಿ ಹರಿಯಲಾರಂಭಿಸಿತು. ಇಲ್ಲಿಂದ ಅಲ್ಪಸ್ವಲ್ಪ ಮಹಾರಾಷ್ಟ್ರಕ್ಕೆ ಹರಿದು ಹೋಗಿದೆ. ಆದಕಾರಣ ಕರ್ನಾಟಕವೇ ಭಕ್ತಿಯ ತವರ ಮನೆಯೆಂದು ಹೇಳಬಹುದು. ಕರ್ನಾಟಕದಲ್ಲಿಯ ವೈಷ್ಣವ ಭಕ್ತರು ರಚಿಸಿದ ಪದಪದ್ಯಗಳೇ ಈ ಮಾತಿಗೆ ಸಾಕ್ಷಿ. ಇವರ ಪದ್ಯಗಳಲ್ಲಿ ಭಕ್ತಿರಸವು ಹೊರಸೂಸಿ ಹರಿಯುತ್ತಿದೆ. ವೈಷ್ಣವ ದಾಸರೆಲ್ಲರೂ ಹರಿಭಕ್ತರು. ಹರಿಗುಣಗಳನ್ನೇ ವಿಶೇಷವಾಗಿ ಗಾನ ಮಾಡಿದವರು. ಅದರಲ್ಲಿಯೂ ಶ್ರೀಹರಿಯ ಕೃಷ್ಣರೂಪವು ದಾಸರಿಗೆ ಬಹಳ ಪ್ರೀಯವಾದುದು. ಅನೇಕ ದಾಸರು ಶ್ರೀಕೃಷ್ಣನ ಪ್ರತ್ಯಕ್ಷ ದರ್ಶನವನ್ನು ಕೊಂಡಾಡಿರುವರು. ಉಡಪಿ ಮುಂತಾದ ಸ್ಥಳಗಳಲ್ಲಿಯ ಆತನ ಸುಂದರ ಮೂರುತಿಗಳನ್ನು ಬಗೆಬಗೆಯಾಗಿ ಬಣ್ಣಿಸಿರುವರು. ಆತನ ಲೀಲೆಗಳನ್ನು ಅನೇಕರು ಪಾಡಿರುವರು. ಆದರೆ ಹೀಗೆ ಶ್ರೀಕೃಷ್ಣನ ಕವನೋಕ್ತಿಗಳ ಮಳೆಗರೆದವರಲ್ಲಿ ಬಾಗಲಕೋಟಿಯ ಶ್ರೀ ಪ್ರಸನ್ನ ವೆಂಕಟರೇ ಮೇಲಾದವರೆಂದು ನಿರ್ವಿವಾದವಾಗಿ ಹೇಳಬಹುದು. ಅವರು ರಚಿಸಿದಷ್ಟು ಶ್ರೀಕೃಷ್ಣಪರ ಹಾಡುಗಳನ್ನು ಮತ್ತಾವ ದಾಸರೂ ರಚಿಸಿರುವುದಿಲ್ಲ. ಅವರು ಶ್ರೀಮದ್ಭಾಗವತದ ದಶಮ ಸ್ಕಂದವನ್ನು ಲಲಿತವಾಗಿ ಕನ್ನಡಿಸಿ ಶ್ರೀಕೃಷ್ಣನ ಲೀಲೆಗಳ ಮುಂದೆ ನಿಲುಗನ್ನಡಿಯನ್ನೇ ಹಿಡಿದಿರುವರು. ಈ ಪುಸ್ತಕದಲಿ ಅವರು ರಚಿಸಿದ ದಶಮಸ್ಕಂದದ

ಪೂರ್ವಾರ್ಧವು ಮುದ್ರಿತವಾಗಿದೆ. ಅದನ್ನೋದಿದರೆ, ಶ್ರೀಕೃಷ್ಣಪರಮಾತ್ಮನ ಲೀಲೆಗಳೆಲ್ಲವೂ ನಿರಾಯಾಸವಾಗಿ ಕಣ್ಣಮುಂದೆ ಬಂದು ನಿಲ್ಲುವವು.

ದಶಮಸ್ಕಂದ ಭಾಗವತವನ್ನು ಕನ್ನಡಿಸಿರುವುದಲ್ಲದೆ ಈ ದಾಸರು ಸಾವಿರಾರು ಬಿಡಿ ಪದಗಳನ್ನು ರಚಿಸಿರುವರು. ಅವುಗಳಲ್ಲಿ ಕೆಲವನ್ನು ಈ ಪುಸ್ತಕವನ್ನು ಮುದ್ರಿಸಿದ ಶ್ರೀ ಕವಜಲಗಿಯವರೇ ಈಗ ಮುದ್ರಿಸಿರುವರು. ಈ ಪ್ರಕಾರವಾಗಿ ಮೇಲಾದ ಪದಪದ್ಯಗಳನ್ನು ರಚಿಸಿದ ಶ್ರೀಪ್ರಸನ್ನ ವೆಂಕಟರ ಚರಿತ್ರೆಯು ನಮಗೆ ಸಾಕಷ್ಟು ಸಿಕ್ಕದಿರುವುದು ನಮ್ಮ ದುರ್ಭಾಗ್ಯ ಮಾತ್ರವಲ್ಲದೆ ಅದು ನಮ್ಮ ಹೇಡಿತನವನ್ನೂ ವ್ಯಕ್ತಪಡಿಸುತ್ತಿದೆ. ಪ್ರಸನ್ನ ವೆಂಕಟರಂಥ ಕವಿಶ್ರೇಷ್ಠರೂ ದಾಸಶ್ರೇಷ್ಠರೂ ಮತ್ತಾವಲ್ಲಾದರೂ ಹುಟ್ಟಿದ್ದರೆ, ಅಲ್ಲಿಯ ಜನರು ಅವರನ್ನೂ ಅವರ ಗ್ರಂಥಗಳನ್ನೂ ಅವರು ಬಿಟ್ಟುಹೋದ ಹೆಗ್ಗುರುತುಗಳನ್ನೂ ಹೆಗಲ ಮೇಲಿಟ್ಟುಕೊಂಡು ಕುಣಿಯುತ್ತಿದ್ದರು. ಇರಲಿ, ಇದೀಗ, ಕನ್ನಡಿಗರು ಕಣ್ಣು ತೆಗೆಯುವ ಚಿಹ್ನಗಳು ತೋರಿಬರುತ್ತಿವೆ. ತೀವ್ರವೇ ಅವರು ಶ್ರೀಪ್ರಸನ್ನ ವೆಂಕಟರಂಥ ಋಷಿಗಳ ಋಣವನ್ನು ಯಥಾಯೋಗ್ಯವಾಗಿ ತೀರಿಸುವರೆಂದು ಹಾರೈಸುತ್ತೇವೆ. ಶ್ರೀ ಪ್ರಸನ್ನ ವೆಂಕಟರಾಯರ ವಿಷಯವಾಗಿ ಈಗ ನಮಗೆ ಗೊತ್ತಾದ ಸಂಗತಿಗಳು ತೀರ ಸ್ವಲ್ಪ. ಅವರು ಬಾಗಲಕೋಟಿಯವರು ಅವರ ಮೂಲ ಹೆಸರು ಕಾಖಂಡಕಿ ವೆಂಕಪ್ಪನವರು. ಅವರು ತೀರ ಬಡವರು ಬಡತನದಿಂದ ಬೇಸತ್ತರೂ ಹರಿಚರಣಗಳಲ್ಲಿ ಏಕನಿಷ್ಠವಾದ ಭಕ್ತಿಯಿದ್ದುದರಿಂದ ಅವರು ತಿರುಪತಿ ಯಾತ್ರೆಗೆ ಹೋಗುತ್ತಿದ್ದರು. ಆದರೆ ಬಡತನದ ಮೂಲಕ ವಿಶೇಷ ವಿದ್ಯಾಭ್ಯಾಸನಾಗಿದ್ದಿಲ್ಲವಾದುದರಿಂದ, ಮನಸ್ಸಿನಲ್ಲಿ ಉಕ್ಕುತ್ತಿದ ಭಾವಗಳನ್ನು ಹೊರಗೆಡುಹುವದಕ್ಕೆ ಅವರಿಗೆ ನಾಲಿಗೆ ಇರಲಿಲ್ಲ. ತಿರುಪತಿಯಲ್ಲಿ, ಸ್ವಾಮಿಪುಷ್ಕರಣೀ ತೀರ್ಥದಲ್ಲಿ ಸ್ನಾನ ಮಾಡಿ ಅವರು "ಝುಷಕೇತು ಜನಕ ಎನ್ನ ಪುಟ್ಟಿಸಿದ ಕಾರಣವೇನು ಉಸುರೆಂದು ಚರಣಕ್ಕೆ ಬಾಗಿ" ಶ್ರೀ ವೆಂಕಟೇಶನನ್ನು ಸ್ತುತಿಸಲು, ಆತನು ಅವರಿಗೆ ಸ್ವಪ್ನದಲ್ಲಿ ದೃಷ್ಟಿಗೋಚರನಾಗಿ ಅವರ ನಾಲಿಗೆಯಲ್ಲಿ "ಪ್ರಸನ್ನವೆಂಕಟ"ನೆಂದು ಬರೆದನಂತೆ. ಕೂಡಲೇ ಧನ್ಯನಾದೆನೆಂದು ಅವರು ಎದ್ದು 'ಪ್ರಸನ್ನವೆಂಕಟ'ವೆಂಬ ಮುದ್ರಿಕೆಯನ್ನಿಟ್ಟುಕೊಂಡು ಹರಿಕೀರ್ತನೆಗಳನ್ನು ಪಾಡಹತ್ತಿದರು. ಈ ಸಂಗತಿಗಳು ರಮಾಪತಿ ವಿಠ್ಠಲರೆಂಬವರು ರಚಿಸಿದ 'ಸಿರಿವಿರಂಚಿ ಭವೇಂದ್ರಾದಿ ಸುರರಿಂದರ್ಚಿತ

ನಾದ" ಎಂಬ ಪದದಿಂದ ಗೊತ್ತಾಗುತ್ತದೆ. ಶ್ರೀಪ್ರಸನ್ನವೆಂಕಟರು ೧೬೭೪ನೆಯ ಸಂವತ್ಸರದ ಭಾದ್ರಪದ ಶುದ್ಧ ೧೨ನೆಯ ದಿವಸ ವೈಕುಂಠವಾಸಿಗಳಾದರು. ಇವರ ವಿಷಯವಾಗಿ ಅನೇಕ ಕಥೆಗಳು ಪ್ರಚಾರದಲ್ಲಿವೆ. ಅವುಗಳನ್ನು ಸಂಗ್ರಹಿಸಿ ಅವರ ಚರಿತ್ರೆಯನ್ನು ಬರೆವುದು ನಮ್ಮ ಕರ್ತವ್ಯ. ಇರಲಿ.

ಶ್ರೀಪ್ರಸನ್ನ ವೆಂಕಟರು ಬರೆದ ಗ್ರಂಥಗಳಲ್ಲಿ ಅವರು ರಚಿಸಿದ ಭಾಗವತ ದಶಮಸ್ಕಂದವೇ ಎಲ್ಲಕ್ಕೂ ಶ್ರೇಷ್ಠವೆಂದು ಹೇಳಬಹುದು. ಭಾಗವತವೆಂದರೆ ಭಕ್ತಿಯ ಕಣಿಯು. ಇಂಥ ವಜ್ರದ ಕಣಿಯು ಪ್ರಸನ್ನವೆಂಕಟರಂಥ ಭಕ್ತರ ಮತ್ತು ಕವಿಗಳ ಕೈಗೆ ಹತ್ತಿದ ಮೇಲೆ ಕೇಳುವದೇನು ? ಅವರು ಅದರೊಳಗಿನ ವಜ್ರಗಳನ್ನು ತೆಗೆದು ಸಾಣಿ ಹಿಡಿದು ಅವುಗಳಿಗೆ ಕನ್ನಡ ಭಾಷೆಯ ಹೊಳಪನ್ನು ಕೊಟ್ಟಿರುವರು. ಈ ಕನ್ನಡ ಭಾಗವತದ ಭಾಷಾ ಶೈಲಿಯು ಬಹಳ ರಮಣೀಯವಾಗಿದೆ. ಭಾಗವತದಲ್ಲಿ ಮುಖ್ಯತಃ ಜ್ಞಾನವಿರಾಗಭಕ್ತಿ ಸಹಿತವಾದ ನೈಷ್ಕರ್ಮ್ಯವು ವರ್ಣಿಸಲ್ಪಟ್ಟಿರುವುದು. ದಶಮಸ್ಕಂದದಲ್ಲಿ ಕೇವಲ ಶ್ರೀಕೃಷ್ಣ ಚರಿತ್ರೆಯಿರುವುದರಿಂದ ಭಾಗವತದ ಅವೆಲ್ಲ ಸಾಮಾನ್ಯ ಗುಣಗಳು ಅಲ್ಲಿ ಶಿಖರಕ್ಕೆ ಮುಟ್ಟಿವೆ. ಶ್ರೀಕೃಷ್ಣನ ಲೀಲೆಯ ಮರ್ಮವನ್ನು ಸಾಮಾನ್ಯ ಮನುಷ್ಯ ಕೋಟಿಯನ್ನು ಮೀರಿದವರೇ ಆಕಲನಮಾಡಬಹುದಲ್ಲದೆ ಅನ್ಯರಿಗೆ ಅದು ಸಾಧ್ಯವಲ್ಲ. ಗೋಪಿಯರ ಶ್ರೀಕೃಷ್ಣ ಭಕ್ತಿಯೆಂದರೆ ಅಸಂಪ್ರಜ್ಞಾತ ಸಮಾಧಿಸ್ಥರ ಯೋಗವೃತ್ತಿ. ಶ್ರೀಕೃಷ್ಣದಾಸರ ಅಗ್ರಣಿಯೂ ಯೋಗಭಾಸ್ಕರನೂ ಆದ ನಾರದರೂ ಕೂಡ ಗೋಪೀ ಜನರ ಭಕ್ತಿಯ ರಹಸ್ಯವನ್ನು ಚೆನ್ನಾಗಿ ಅರಿಯುವುದಿಲ್ಲ. ಅಂದಬಳಿಕ ಮಿಕ್ಕವರ ಪಾಡೇನು ! ಈ ಪ್ರಕಾರದ ಭಕ್ತಿರಸವನ್ನು ಶ್ರೀ ಪ್ರಸನ್ನವೆಂಕಟರು ಈ ಗ್ರಂಥದಲ್ಲಿ ವರ್ಣಿಸಲುಪಕ್ರಮಿಸಿ, ಅದರಲ್ಲಿ ಅವರು ಜಯಶಾಲಿಗಳಾಗಿದ್ದಾರೆ. ಪ್ರಸನ್ನವೆಂಕಟರ ದಶಮಸ್ಕಂದದ ಭಾಷಾಂತರವೆಂದರೆ ಕೇವಲ ಭಾಷಾಂತರವಲ್ಲ; ಭಕ್ತಿರಸಕ್ಕೆ ಕನ್ನಡದ ಒಪ್ಪಹಾಕಿದ ಕವನವದು. ಅವರು ರಚಿಸಿದ ಗೋಪೀಗೀತೆ ವೇಣೂಗೀತೆಗಳನ್ನೋದಿದರೆ, ಮೂಲ ಗ್ರಂಥದ ರಸವನ್ನು ಎಳ್ಳಷ್ಟಾದರೂ ಹೋಗಗೊಡದೆ, ಭಾಷಾಂತರವನ್ನು ಹೇಗೆ ಮಾಡಬೇಕೆಂಬುವುದು ಗೊತ್ತಾಗುವುದು. ಅವರ ಪ್ರೌಢವೂ ಗಂಭೀರವೂ ಉದಾತ್ತವೂ ಆದ ಭಾಷಾಶೈಲಿಯೂ ವರ್ಣನ ಶೈಲಿಯೂ ಪಂಡಿತರನ್ನು ಅಚ್ಚರಿ

ಗೊಳಿಸುತ್ತದೆ. ಅವರ ಭಾಷೆಯ ಸೊಬಗನ್ನು ತೋರಿಸುವುದಕ್ಕೋಸ್ಕರ ನಾವು ಇಲ್ಲಿ ಕೆಲವು ಮಾದರಿಗಳನ್ನು ಕೊಡುವೆವು.

"ಕನಡುಕ್ಕಿಗಳಿವು ಎನ್ನದೆ ಕೇಳಿರಿ ಘನರು ದಯಾಪರರು, ಕೋವಿದತೆ ಬೈಚಿಟ್ಟು, ಮರಿಬಂಡುಣಿಯು ಕುರುಳಿಯರು, ಅಕಟಕಟೆನ್ನುತ ಸಖಿರೋಹಿಣಿ ಗೋಪಿಕುಮಾರನಪ್ಪುವಳು. ಒಚ್ಚೆರೆಗಂಗಳ್ಯಶೋದೆ. ಮತ್ತಿನಿಗೋಲನ ಸನ್ಮತರು. ಪಟ್ಟಸಾಲೆಯಲಿ ದಟ್ಟಿಸಾಲಿಕ್ಕಿಸಿ । ದಟ್ಟಡಿ ನೋಡಿ ಹಿಗ್ಗುವಳು । ನನ್ನ । ಪುಟ್ಟದಣಿದೆಯೆಂಬುವಳು । ತ । ನ್ನುಟ್ಟ ಸೀರೆಯ ಮೇಲ್ ಕೃಷ್ಣನ ಕುಣಿಸಿ ದಳ್ । ಅಟ್ಟಹಾಸದಿ ಯಶೋದೆಯಳು ॥ ಗದ್ದವೆಂಬುದು ಸವಿ ಮುದ್ದಿನ ಗಂಟು. ಮುದ್ದಿನ ಮೋಹಿಯೊಳಿದ್ದ ಮುಕುಂದ. ಪಡಗದಿ ದಣಿ ಹುಡುಕಿದೆ. ತೊರೆದ ಮೊಲೆಯಿಂದಲಿ ಕರೆದಳು. ಕುಡಿತೆಗಣ್ ಮಡದಿಯರ ಮುಡಿ ನುಡಿ ಪಲ್ ಮೊಲೆ । ನಡು ನಡೆಗ್ಹರಿಣಮಯೂರ ಕೀರಾ । ದಾಡಿಮೇಭ ಹರಿಯಂಚೆಯಡವಿ ಗಿಡ । ಮಡುವಿಡಿದವು ನಾಚಿಕೆಹಿಡಿದು ॥ ಕದನಚೌಪಟ ಮದನಜನಕ ವದನದಿ ಬಾಡಿದನು. ಕೆಚ್ಚಲ ಭಾರದಿ ಚರಿಪ ಚೊಚ್ಚಿಲಾವ್ಗಳುಚ್ಚುಣಲು । ನಿಚ್ಚ ಕರೆದನಚ್ಚರಿಯ ಉಚ್ಚರಂಗಳಿಂ ॥ ಪಚ್ಚವರ್ಣ ಸ್ವಚ್ಛರೂಪ ಅಚ್ಚನೀಲೆ ಹೆಚ್ಚಿನಮ್ಮಾ । ಮುಚ್ಚಿನಮ್ಮ ಉಚ್ಚಗಿಣಿಯೆ ಹಚ್ಚಗಿಣಿಯೆ ಬಾ ॥ ವೇಣುಗೋಪಾಲನ ವೇಣೂ ವರ್ಣಿಪರು। ಜಾಣೆ ಗೋಪೇರೆಲ್ಲ ಗಾನಾಮೃತನುಂಡು। ಬಾಣ ಪಂಚಕನ ಬಾಣದಟ್ಟುಳಿಗೆ। ಪ್ರಾಣಡೆಂಥೆಣಿಸಿ ಧ್ಯಾನಿಪರು"

ಇವರು ಸಂಗೀತ ಶಾಸ್ತ್ರಕೋವಿದರೂ ಆಗಿದ್ದರೆಂಬುದು ಇವರ ಗ್ರಂಥದಿಂದಲೇ ತಿಳಿಯುತ್ತಿದೆ. ನವರಸಗಳಿಗೆ ತಕ್ಕಂತೆ ಸಂಗೀತದಲ್ಲಿ ಭಿನ್ನ ಭಿನ್ನ ರಾಗಗಳುಂಟೋ ಇಲ್ಲವೋ ಎಂಬುದೂ, ರಾಗಗಳಿಗೆ ಅನುರೂಪವಾಗಿ ರಾಗದ ಚಿತ್ರಗಳು ತೆಗೆಯಲ್ಪಡುವುದರಲ್ಲಿ ಏನಾದರೂ ಅರ್ಥವಿರುವುದೋ ಹೇಗೆ ಎಂಬುದೂ, ಸಂಗೀತ ಶಾಸ್ತ್ರದೊಳಗಿನ ಎರಡು ಸಮಸ್ಯೆಗಳು. ಈ ಸಮಸ್ಯೆಗಳ ವಿಷಯವಾಗಿ ತಜ್ಞರಲ್ಲಿ ಭಿನ್ನಾಭಿಪ್ರಾಯವಿರುವುದೆಂದು ಬಲ್ಲವರು ಹೇಳುತ್ತಾರೆ. ಅದು ಏನೇ ಇರಲಿ, ಶ್ರೀಪ್ರಸನ್ನವೆಂಕಟರ ಪದಗಳನ್ನೋದಿದರೆ ಅವರು ಭಿನ್ನ ಭಿನ್ನ ರಸಗಳಿಗೆ ಅನುರೂಪವಾಗಿ ಭಿನ್ನ ಭಿನ್ನ ರಾಗಗಳನ್ನೂ ಪದಸಂಯೋಜನೆಯನ್ನೂ ಮಾಡಿರುವಹಾಗೆಂತೆ ತೋರುತ್ತದೆ. ಅವರ ಪದಲಾಲಿತ್ಯ ಬಹಳ ಮನೋಹರವಾಗಿದೆ.

ಇದುವರೆಗೆ ಕನ್ನಡದಲ್ಲಿ ಇಷ್ಟು ಪ್ರೌಢಶೈಲಿಯುಳ್ಳ ದಶಮಸ್ಕಂದ–ಭಾಗವತವು ಯಾರಿಂದಲೂ ರಚಿತವಾಗಿಲ್ಲ. ಈ ಗಹನವಾದ ಗ್ರಂಥಕ್ಕೆ ಶ್ರೀ ಕವಜಲಗಿಯವರು ಟಿಪ್ಪಣಿಗಳನ್ನು ಕೊಟ್ಟಿರುವುದರಿಂದ, ಅದರೊಳಗಿನ ಆಸ್ವಾದವನ್ನು ಹೀರಿಕೊಳ್ಳುವುದಕ್ಕೆ ಸುಲಭವಾಗಿದೆ. ಈ ಗ್ರಂಥವನ್ನು ಶುದ್ಧವಾದ ಭಾಷೆಯಲ್ಲಿ ಮುದ್ರಿಸಿ, ಶ್ರೀ ಕವಜಲಗಿಯವರು ಭಕ್ತಿರಸದ ಹೆಚ್ಚಳವನ್ನು ಬೀರುವುದಕ್ಕೆ ಕಾರಣರಾಗಿರುವರಲ್ಲದೆ, ಕನ್ನಡ ಗ್ರಂಥಭಾಂಡಾರವನ್ನು ಪುಷ್ಟಿಗೊಳಿಸುವದಕ್ಕೂ ಸಹಾಯಕರಾಗಿರುವರು.

ಹಿಂದಿನ ಕಾಲದಲ್ಲಿ ಭಕ್ತಿಯು ಅಭಿವೃದ್ಧಿಯನ್ನು ಹೊಂದಿದ್ದು ಈ ಕರ್ನಾಟಕ ದೇಶದಲ್ಲಿಯೇ ಎಂಬುದನ್ನು ನಾವು ಮೇಲೆ ಹೇಳಿದೆವಷ್ಟೇ. ಆದರೆ, ಈಗಿನ ಕರ್ನಾಟಕದ ಸ್ಥಿತಿಯನ್ನು ನೋಡಿದರೆ ಹೃದಯದಲ್ಲಿ ಕಳವಳ ಹುಟ್ಟುತ್ತದೆ. ಭಕ್ತಿಯೇ ಆಗಲಿ, ಜ್ಞಾನವೇ ಆಗಲಿ, ಕರ್ಮವೇ ಆಗಲಿ, ಅವುಗಳ ವಿಷಯಕ್ಕಿರುವ ಪ್ರೇಮವು ಹೃದಯದಲ್ಲಿ ತುಂಬಿದ್ದರೆ ಅದು ಹೊರಸೂಸಿ ಹರಿಯದೆ ಹೋಗುವದಿಲ್ಲ. ನಮ್ಮ ವ್ಯಾಸಕೂಟ ಮತ್ತು ದಾಸಕೂಟಗಳ ಹಿಂದಿನ ಪರಂಪರೆಯನ್ನು ನೋಡಿದರೆ, ಅವು ಕರ್ನಾಟಕದಲ್ಲಿ ಅನೇಕ ನೂರು ವರ್ಷಗಳವರೆಗೆ ಅವ್ಯಾಹತವಾಗಿ ಜೀವಂತವಿದ್ದವೆಂದು ಕಂಡುಬರುವದು. ದಾಸರ ಪರಂಪರೆಯು ಮೊನ್ನೆಮೊನ್ನಿನವರೆಗೆ ನಡೆದು ಬಂದಿತ್ತು. ಹೊಸ ಹೊಸ ಹರಿದಾಸರು ಉದಯಹೊಂದಿ ಹೊಸ ಹೊಸ ಪದ ಪದ್ಯಗಳನ್ನು ರಚಿಸಿ ಭಕ್ತಿಯನ್ನು ಜಾಗ್ರತವಾಗಿ ಇಟ್ಟಿದ್ದರು. ಹೊಸ ಹೊಸ ಪಂಡಿತರು ಹುಟ್ಟಿ ಹೊಸ ಹೊಸ ವೇದಾಂತ ಗ್ರಂಥಗಳನ್ನು ಬರೆದು ವ್ಯಾಸಕೂಟವನ್ನು ಜೀವಂತವಾಗಿ ಕಾಯ್ದರು. ಆದರೆ ಈಗ ನೋಡಬೇಕೇ! ಅವೆರಡೂ ಮೃತಪ್ರಾಯವಾದ ಚಿನ್ಹಗಳು ಸ್ಪಷ್ಟವಾಗಿ ಕಾಣಿಸುತ್ತವೆ. ಹೊಸ ಹುರುಪೇ ಯಾರಲ್ಲಿಯೂ ಕಾಣುವದಿಲ್ಲ. ಎಲ್ಲರಲ್ಲಿಯೂ ನಿರಾಶೆಯ ಉದ್ಗಾರಗಳೇ. ಸಾಮಾನ್ಯವಾಗಿ ಈರ್ವರಲ್ಲಿಯೂ ಹೊರಗಿನ ಹೊಳಪೇ ಬಹಳವಾಗಹತ್ತಿದೆ. ಮೂಲ ತತ್ವಗಳನ್ನು ಜೀರ್ಣಿಸಿಕೊಳ್ಳುವವರು ಅಪರೂಪ. ಆದರೆ ಹೀಗೆ ಮಾಡುವದು ಜೀವಂತತನದ ಲಕ್ಷಣವಲ್ಲ. ಜ್ಞಾನವು ಮೈಯಲ್ಲಿ ಪಚನವಾಗಿದ್ದರೆ, ಅದು ಬಹುಶಃ ಹೊಸಗ್ರಂಥಗಳ ರೂಪದಲ್ಲಿ ಹೊರಬೀಳದೆ ಇರುವುದಿಲ್ಲ. ಹಿಂದೆ ಗ್ರಂಥಗಳನ್ನು ರಚಿಸಿದವರೆಲ್ಲರೂ ಹೀಗೆ ಹೇಡಿತನದ ಉದ್ಗಾರಗಳನ್ನು ತೆಗೆದಿದ್ದರೆ ಇಷ್ಟು ಗ್ರಂಥಗಳು ಹುಟ್ಟುತ್ತಿರಲಿಲ್ಲ. ಹಿಂದಿನ ದಾಸರು ಹೀಗೆ

ರೋದನ ಸ್ವರವನ್ನು ತೆಗೆದಿದ್ದರೆ ಕನ್ನಡದಲ್ಲಿ ಇಷ್ಟು ಪದಗಳು ರಚಿತವಾಗುತ್ತಿರ ಲಿಲ್ಲ. ಸಾರಾಂಶ ಜ್ಞಾನವೇ ಆಗಲಿ, ಭಕ್ತಿಯೇ ಆಗಲಿ, ಅದು ನಮ್ಮಲ್ಲಿ ಜೀವಂತವಾಗಿದ್ದರೆ ಅದು ಹೊರಸೂಸಿ ಯಾವುದೊಂದು ರೂಪದಲ್ಲಿ ಹರಿಯಲೇ ಬೇಕು. ಹೀಗೆ ಈಗ ಇರದಿರುವುದರಿಂದಲೇ ನಾವು ಅವೆರಡೂ ಪಂಥಗಳು ಈಗ ಮುಗ್ಗಿಹೋಗಿರುತ್ತವೆಂದು ಹೇಳುತ್ತೇವೆ. ಕರ್ನಾಟಕಸ್ಥರು ತೀವ್ರವೇ ಜಾಗ್ರತ ರಾಗಿ ಹಿಂದಿನ ತಮ್ಮ ಕೀರ್ತಿಯನ್ನು ಅಚ್ಚಳಿಯದಂತೆ ಉಳಿಸಿಕೊಳ್ಳುವರೆಂದು ಹಾರೈಸುತ್ತೇವೆ.

ಧಾರವಾಡ.
೧೮–೧–೨೮

**ವೆಂಕಟೇಶ ಭೀಮರಾವ ಆಲೂರ.**

॥ ಶ್ರೀ ॥

ಶ್ರೀ ಗುರುಭ್ಯೋನಮಃ

ಶ್ರೀ ಮುಖ್ಯಪ್ರಾಣಾಂತರ್ಗತ ಶ್ರೀ ಲಕ್ಷ್ಮೀನಾರಾಯಣಾಯನಮಃ

ದಾಸವರ್ಯ ಶ್ರೀ ಪ್ರಸನ್ನವೆಂಕಟರಿಂದ ರಚಿತವಾದ

ಕನ್ನಡ

# ಭಾಗವತ

## ದಶಮಸ್ಕಂದ—ಪೂರ್ವಾರ್ಧವು

೧

ನಾಟಿ. ರಾಗ. —— ಝಂಪೆ. ತಾಳ.

ಶ್ರೀದೇವಿಯಾಳ್ದ ಶ್ರೀವೇದೈಕವೇದ್ಯ ಜಯ ।
ವೇದಗರ್ಭನುತ ಶ್ರೀಪಾದಾಬ್ಜಯುಗ್ಮ ಜಯ ॥
ಯಾದವಕುಲಾಬ್ಧಿಗಾಲ್ಹಾದಕರಚಂದ್ರ ಜಯ ।
ಶ್ರೀಧೇನುಗಿರಿಶಸನಕಾದಿಮುನಿವಂದ್ಯ ಜಯ ಜಯ ॥ ೧ ॥

ಭೂಸತಿಯ ಭಾರಕೆ ವಿನಾಶಕಾರಣನೆ ಜಯ ।
ಪೋಷಕಾಧಾರಕ ಪರೇಶ ಕೇಶವನೆ ಜಯ ॥
ಶೇಷಶಯನಾ ವೈಕುಂಠನಂತಾಸನ ಜಯ ।
ಈಶೇಂದ್ರಸುರಮುನಿಪಸಂಸೇವ್ಯ ಭವ್ಯ ಜಯ ಜಯ ॥ ೨ ॥

ದಾಶರಥಿದಾಶಾರ್ಹವಾಸಿಷ್ಠಕೃಷ್ಣ ಜಯ ।
ಗೋಸಮುಹದ್ವಿಜದೇವದ್ವೇಷಿಕುಲಹರಣ ಜಯ ॥
ದಾಸ ಕಪಿವರ ಭೀಮ ಶ್ರೀಸುಖಮುನೀಶ ಜಯ ।
ಪೇಶಲಚರಿತ್ರ ಶ್ರೀಪ್ರಸನ್ವೆಂಕಟೇಶ ಜಯ ಜಯ ॥ ೩ ॥

ಶಬ್ದಾರ್ಥ:— ಆಳ್ದ=ಒಡೆಯ (ಆಳ್ ಧಾ). ಯುಗ್ಮ=ಜೋಡು. ಅಬ್ಧಿ=ಸಮುದ್ರ. ಧೇನುಗಿರಿ=ಗೋವರ್ಧನಪರ್ವತ. ಪರೀಕ=ಸರ್ವೋತ್ತಮ. ಭವ್ಯ=(ಭವಂತಿಯಸ್ಮಾತ್ ಸೃಷ್ಟ್ಯಾದಯಃ) ಜಗತ್ಕರ್ತೃ. ದಾಶಾರ್ಹ=ದಾಶಾರ್ಹನೆಂಬ ಯಾದವವಂಶದಲ್ಲಿ ಹುಟ್ಟಿದವನು(ಕೃಷ್ಣ). ವಾಸಿಷ್ಠಕೃಷ್ಣ=ವಶಿಷ್ಠವಂಶಜರಾದ ಶ್ರೀವ್ಯಾಸರು. ಸುಖಮುನಿ=ಆನಂದತೀರ್ಥರು (ಮಧ್ವಾಚಾರ್ಯರು.) ಪೇಶಲ=ಪವಿತ್ರವಾದ.

ವಿ. ಸೂ. ಈ ಪದ್ಯದಲ್ಲಿಯ ಎಲ್ಲ ಚರಣಗಳು ವಾರ್ಧಕಷಟ್ಪದಿಯ ಉಪಾಚರಣಗಳು. ದಾಸರು ಭಾವೋದ್ರೇಕದಲ್ಲಿ ಛಂದಸ್ಸನ್ನು ಲೆಕ್ಕಿಸುತ್ತಿರುವದಿಲ್ಲ. ಇದಕ್ಕೆ ಈ ಪದ್ಯದ ಎರಡನೆಯ ಚರಣವೇ ಉದಾಹರಣೆಯಾಗಿದೆ.

---

## ೨

ಸಾರಂಗ ನಾಟಿ ರಾಗ. —— ಏಕ ತಾಳ.

ಶ್ರೋತವ್ಯವು ಇದೆ ಮಂತವ್ಯವು ಇದೆ ಧ್ಯಾತವ್ಯವು ನಮಗೆ ।
ಪೂತವು ಹರಿಗುಣಗಾಥೆಯು ಮುಕುತಿಯ ಪಾಥೇಯವು ನಮಗೆ ॥ ಪಲ್ಲ॥

ಶ್ರೀಮದ್ದಶಮಸ್ಕಂಧಭಾಗವತ ಭೂಮಿಪ ಪರೀಕ್ಷಿತನು ।
ಧೀಮಜ್ಜನಗುರು ಶುಕಮುನಿಗೆ ನಮಿಸಿ ಪ್ರೇಮದಿ ಕೇಳಿದನು ॥
ಈ ಮುಕುತಿಯ ಪಥ ಸಾಧನವೂ ಖಳಪಾಮರರಿಗೆ ದೂರಾ ।
ಶ್ರೀಮಹಾಲಕುಮಿಯ ರಮಣನ ದಾಸರ ಸ್ತೋಮಕೆ ಸೌಖ್ಯಕರಾ ॥೧॥

ಕರ್ಣಪುಟಗಳಿಗೆ ನೈರಂತರದಲಿ ಪೂರ್ಣಸುಧಾರಸವು ।
ನಿರ್ಣಾಯಕ ಶ್ರೀದಶಪ್ರಮತಿ ಶಾಸ್ತ್ರಾರ್ಣವಜ್ಞ ರಚಿತವು ॥
ಚೂರ್ಣೀಕೃತ ಪಾಪಾಚಲವಜ್ರವು ಸ್ವರ್ಣವಿಪಗ ಕಥೆಯು ।
ವರ್ಣಾವರ್ಣಗಳಿಂ ಕೀರ್ತಿಪರಾಭರ್ಣ ಸುಖದ ತತಿಯು ॥೨॥

ಎನಗಿಂತೊಂದಿರ್ಗುಣ ಜೇಷ್ಠರ ಕ್ರಮವನು ಬಲಗೊಂಡಬುಜಾ ।
ಸನ ಪರ್ಯಂತರ ಗುರುಗಳಿಗೆರಗುವೆ ಅಣು ಬಾಲಿಶ ಮನುಜಾ ॥
ಎಣಿಸದಲೆನ್ನಯ ನುಡಿ ತಪ್ಪುಗಳನು ಮನುಜೋತ್ತಮ ಮುಖರು ।
ಕನಡುಕ್ತಿಗಳಿವು ಎನ್ನದೆ ಕೇಳಿರಿ ಘನರು ದಯಾಪರರೂ ॥೩॥

ಚಿದ್ಗುಣಗಣನಿಧಿ ಚಿನ್ಮಯರೂಪ ಸಚ್ಛಿತ್ ಗ್ರಹತ್ರಯ ತಾನು ।
ಹೃದ್ಗುಹನಿಲಯ ಸದಾಶ್ರಿತಜನಸುಖದೋಗ್ಧಾಮರಧೇನು ॥
ವಾಗ್ದೇವಿಯರಸ ವನಜಾಸನನುತ ದುಗ್ಧಾಬ್ಧೀಶ್ವರನು ।
ಅಗ್ರೇಸರ ಭಗವಜ್ಜನ ಸಜ್ಜನರುಗ್ಘಡಿಸುವರಿದನು ॥೪॥

ಅರಿವ ಪೇಳುವರೂ ಕೇಳುವರು ಮುರಾರಿಯ ಚಾರಿತೆಯ ।
ಕೀರುತಿ ವ್ಯಾಸಕುಮಾರನು ವರ್ಣಿಪ ಚಾರು ಮುಕುತಿ ಗತಿಯು ॥
ಈರೇಳ್ ಜಗದಘ ಹರಿಪುದು ಕರ್ಣಾಪೂರಿತ ಪೀಯೂಷವು ।
ನಾರಾಯಣ ಪ್ರಸನ್ವೇಂಕಟಕೃಷ್ಣನ ತೋರಿಕೊಡುವ ರಸವೂ ॥೫॥

ಶಬ್ದಾರ್ಥ:— ಶ್ರೋತವ್ಯವು=ಕೇಳತಕ್ಕುದು. ಮಂತ್ರವ್ಯವು=ಮನನಮಾಡತಕ್ಕುದು. ಧ್ಯಾತವ್ಯವು=ಧ್ಯಾನಿಸತಕ್ಕುದು. ಪೂತ=ಪವಿತ್ರ. ಗಾಥೆ=ಗ್ರಂಥ. ಸಾಥೇಯವು=ಹಾದಿಯ ಬುತ್ತಿಯು. ಧೀಮಜ್ಜನ=ಪಂಡಿತರು. ಪಥ=ದಾರಿ. ಪಾಮರರು=ನೀಚಜೀವಿಗಳು. ಸ್ತೋಮ=ಸಮೂಹ. ನೈರಂತರದಲಿ=ಯಾವಾಗಲೂ. ಸುಧಾರಸ=ಅಮೃತ. ದಶಪ್ರಮತಿ=(ದಶಾ+ಪ್ರಮತಿ) ಪೂರ್ಣಪ್ರಜ್ಞರು. ಅರ್ಣವ=ಸಮುದ್ರ. ಚೂರ್ಣೀಕೃತ=ಪುಡಿಮಾಡಲ್ಪಟ್ಟ. ವಿಪಗ=ಗರುಡ. ತತಿಯು=ಸಮೂಹವು. ಈರ್=ಎರಡು. ಅಬುಜಾಸನ=ಬ್ರಹ್ಮ. ಅಣು=ಸಣ್ಣ. ಬಾಲಿಶ=ಎಳೆಯ. ಉಕ್ತಿ=ಮಾತು. ಚಿತ್=ಜ್ಞಾನ. ಸತ್=ನಿರ್ದುಷ್ಟ. ನಿಲಯ=ಮನೆ. ದೋಗ್ಧಾ=ಹಿಂಡುವವ (ಹಾಲ್‌ಗರಿಯುವವ). ದುಗ್ಧಾಬ್ಧಿ=ಕ್ಷೀರಸಾಗರ. ಅಗ್ರೇಸರ=ಶ್ರೇಷ್ಠ. ಉಗ್ಘಡಿಸು=ಅಂದದ್ದನ್ನೇ ಅನ್ನು. ಅಘ=ಪಾಪ. ಈರೇಳ್=ಹದಿನಾಲ್ಕು. ಪೀಯೂಷ=ಅಮೃತ.

ವಿ. ಸಂ:— ಚೂರ್ಣೀ.........ವಜ್ರವು=ಪಾಪವೆಂಬ ಪರ್ವತವನ್ನು ಪುಡಿಮಾಡುವದರಲ್ಲಿ ಇಂದ್ರನ ವಜ್ರಾಯುಧಕ್ಕೆ ಸಮಾನವಾದದ್ದು. ಸ್ವರ್ಣವಿಪಗ=ವಿಷ್ಣು (ಪೊಂಬಕ್ಕಿದೇರನೆಂದು ಹರಿಕಥಾಮೃತಸಾರದಲ್ಲಿದೆ.) ವರ್ಣ—ತತಿಯು=ಪ್ರತಿಯೊಂದು ಅಕ್ಷರವನ್ನು ಕೀರ್ತನ ಮಾಡುವವರಿಗೆ ಉತ್ತಮವಾದ ಆಭರಣಗಳನ್ನು ಇಟ್ಟುಕೊಂಡವರಿಗೆ ಕೊಡುವಂಥ ಸುಖವನ್ನು ಕೊಡುವಂತಹದು. ಎನಗಿಂತೊ......ಜೇಷ್ಠರು=ನನ್ನಕಿಂತಲೂ ಜ್ಞಾನದ, ಗುಣಗಳಿಂದ ಹಿರಿಯರಾದವರು. ಚಿದ್ಗುಣ...ನಿಧಿ=ಜ್ಞಾನಾನಂದಾದಿಗುಣಗಳಿಗೆ ಆಶ್ರಯೀಭೂತನು. ಚಿನ್ಮಯರೂಪ=ಜ್ಞಾನಸ್ವರೂಪ. ಗ್ರಹತ್ರಯ=ವೈಕುಂಠ, ಅನಂತಾಸನ, ಶ್ವೇತದ್ವೀಪಗಳೆಂಬ ಮೂರುಮನೆಗಳುಳ್ಳವನು (ವಿಷ್ಣು). ಬ್ರಹತ್ರಯವೆಂದೂ ಇನ್ನೊಂದೆಡೆಯಲ್ಲಿದೆ. ಅಂದರೆ:—ದೇಶಕಾಲಗುಣಗಳೆಂಬ ಮೂರು ವ್ಯಾಪ್ತಿಗಳಿಂದ ಕೂಡಿದ

ವನು. ಈ ಪದ್ಯದಲ್ಲಿಯು ಎಲ್ಲಚರಣಗಳು ಪರಿವರ್ಧಿನಿಷಟ್ಪದಿಯ ದೀರ್ಘಚರಣಗಳು. ನಾಲ್ಕು ಮಾತ್ರೆಯ ೬ ಚರಣಗಳು, ಕೊನೆಗೊಂದು ಗುರು. ಅಲ್ಲಲ್ಲಿ ಅನ್ಯವಾಗ ಸಂಯುಕ್ತಾಕ್ಷರಗಳನ್ನು ಶಿಥಿಲವಾಗಿ ಉಚ್ಚರಿಸಬೇಕಾಗುವದು. ಪದ್ಯಗಳು ೮.

---

೩

ಕನ್ನಡ ಕಾಂಬೋದಿ. ರಾಗ. —— ಅಟ ತಾಳ.

ಶ್ರೀಕೃಷ್ಣನ ಲೀಲಾವತಾರ ಘನ್ನ ॥ ಪಲ್ಲ ॥
ಕೊಂಡಾಡುವೆ ಶ್ರವಣ ಮನನ ಮಾಡುವೆ ॥ ಅ. ಪ ॥

ಆದಿನಾರಾಯಣಾಖಿಲಜಗತ್ಕಾರಣ ।
ಮೋದಜ್ಞಾನಬಲಪೂರ್ಣ ಏಕಾರ್ಣವ ಸ್ಯ– ।
ಗ್ರೋಧಪತ್ರಾಸನ ಗ್ರಸಿತವಿಶ್ವಾಸನ ।
ವೇದಾನಂತಾವೇದ್ಯ ವಿಷ್ಣು ತಾನೇಕಾದ್ಯ ।
ವೇದಗರ್ಭನ ಶತವತ್ಸರ ನಿದ್ರಾ ವಿ– ।
ನೋದಿ ಏಕೇಶ್ವರ ನಾರಾಯಣೀಧರ ॥
ಸಾಧನ ಸಾಧ್ಯಪರಾ । ಆನಂದ ಬೋಧಕ ಹೃದ್ಗೋಚರಾ ।
ಮುಕ್ತಾಮುಕ್ತ ಭೇದಜ್ಞ ಜನ ಮೋಹರ ॥ ೧ ॥

ಶ್ರೀಭೂದುರ್ಗಾರೂಪಿ ಶ್ರೀಪತಿಯೆದೆಯಪ್ಪಿ ।
ತಾ ಬಂದೀತೆರ ನಿಂತು ಸ್ತೋತ್ರಮಾಡಲು ಇಂತು ।
ಶೋಭನನುಡಿಗೇಳ್ದು ಸ್ವಾಮಿ ತಾನೆದ್ದು ಶೂ– ।
ನ್ಯಾಭಿಗನಾದನು ಪಂಚಾತ್ಮಾ ದ್ವಿಷಡಾತ್ಮಾ ।
ಶ್ರೀಭಗವಾನ್ ದಶಶತಸಹಸ್ರಾಂಶದಿ ।
ಶೋಭಿಪಾನಂತಸ್ವರೂಪವ ಪ್ರಕಟಿಸಿ ॥
ತಾ ಪ್ರಕೃತಿಯ ಗ್ರಹಿಸಿ । ಬೊಮ್ಮಾದಿ ವೈಬುಧರನು ಸೃಜಿಸಿ ।
ಸೂಕ್ಷ್ಮಸೃಷ್ಟಿಯ ಬ್ರಹ್ಮಾಂಡವ ಹುಟ್ಟಿಸಿ ॥ ೨ ॥

ಬೊಮ್ಮಾಂಡವನ್ನಳದು ಬೊಮ್ಮನೊಳಗೆ ಇದ್ದು ।
ಉಮ್ಮಯದಿಂ ವಿಶ್ವ ಉದ್ಭವಮಾಡುವ ।
ಹಮ್ಮಿನ ಅಹಂಕಾರ ಹರನ ಪೊಕ್ಕರಿಸುವ ।
ರಮ್ಮೆಯರಸ ವಿಷ್ಣು ರಾಜೀವನಾಭನು ।
ಅಮ್ಮಿತ ಅವತಾರ ಅಖಿಲಭೂಭಾರಹರ ।
ಅಮ್ಮರಕಾರ್ಯಕಧ್ಯಕ್ಷ ಆಶ್ರಿತಪಕ್ಷಾ-
ಧರ್ಮಾತ್ಮಖಳಸಂಹಾರ । ಧರೆಯೊಳು ಧರ್ಮೋದ ರಣತತ್ಪರಾ ।
ಸಂತತ ಬ್ರಹ್ಮಣ್ಯದೇವವರ ॥ ೩ ॥

ಪ್ರಣತರಿಚ್ಛನುಸಾರ ಪೊರೆವ ಕ್ರಪಾಕರ ।
ಘನಶೃತಿಹರನೊದ್ದ ಗಹನಾಬ್ಧಿಮಥಿಸಿದಾ- ।
ವನಿಯಕದ್ದನ ಸೀಳ್ದಮಿಂದವರರಿಪುಮರ್ದ ।
ಮುನಿಕಶ್ಯಪನಕಂದ ಮತ್ತನೃಪರಕೊಂದ ।
ಅನಿಮಿಷಾಪದ್ಧರ ಅರ್ಜುನಹಿತಕರ ।
ದನುಜಮೋಹನಕರ ದುರುಳ ಕಲಿಮಲ ಹರ ।
ಅನಂತಾನಂತವತಾರ । ಅಶುಭದೂರಾ । ಅನುದಿನಮುದದಾತಾರಾ ।
ಅಪ್ರಾಕೃತ ಚಿನುಮಯ ಸಚ್ಛರಿರಾ ॥ ೪ ॥

ಹಿಂದೆಸುರಾಸುರರ್ಬಿಂದಿನ ಸಂಗರ- ।
ದಂದಪಜಯ ಹೊಂದಿದಸುರರು ಧರೆಗೈದಿ ।
ನೊಂದು ದುಃಖ್ಷಿತರಾಗಿ ನೃಪಕುಲೋದ್ಭವರಾಗಿ ।
ವೃಂದಾರಕಂಶದವನಿಪರ ವ್ಯಥಿಸಿದ- ।
ರಂದು ಭೂಭಾರಿಸೆ ರಸೆ ಗುಂದಿ ರೋಧಿಸೆ ।
ಬಂದು ನಿರ್ಜರರಾಗೆ ಬಳಲಿ ಹೇಳಲಾಗೆ ।
ಸಿಂಧುಶಯನನ ಬಳಿಗೆ । ಬೊಮ್ಮಭವೇಂದ್ರರು ಹೋಗಿ ಬ್ಯಾಗೆ ।
ಪ್ರಸನ್ನವೇಂಕಟಮಂದಿರನ ತುತಿಸಲಾಗೆ ॥ ೫ ॥

ಶಬ್ದಾರ್ಥ:— ನ್ಯಗ್ರೋಧಪತ್ರ=ಆಲದೆಲೆ. ಗ್ರಸಿತ=ತಿನ್ನಲ್ಪಟ್ಟ. ಆಸನ=ಪೀಠ. ಅಚ್ಛೇದ್ಯ=ತಿಳಿಯಲಾಗದ. ಏಕಾದ್ಯ=ಸೃಷ್ಟಿಗಿಂತಲೂ ಪೂರ್ವದಲ್ಲಿದ್ದವನು. ವೇದಗರ್ಭ=ಬ್ರಹ್ಮ.

ನಾರಾಯಣೀ=ಲಕ್ಷ್ಮೀ. ವತ್ಸರ=ವರುಷ. ಮೋಹರ=ಗುಂಪು. ಶೂನ್ಯ=ಪರಮಾತ್ಮನಿಗೆ ಪ್ರಳಯ ದಲ್ಲಿ ಶೂನ್ಯನೆಂಬ ಹೆಸರು. ( ಶಂ+ಊನಂ ಕುರುತೆ ದೈತ್ಯಾನಾಂ=ದೈತ್ಯರುಗಳ ಆನಂದ ಹ್ರಾಸಮಾ ಡುವವನು. ) ಪ್ರಕೃತಿ=ಲಕ್ಷ್ಮೀ. ಉಮ್ಮಯ=ಉತ್ಸಾಹ. ಹಮ್ಮು=ಗರ್ವ. ಅಹಂಕಾರಹರ= ಅಹಂಕಾರ ತತ್ವಕ್ಕೆ ಅಭಿಮಾನಿಯಾದ ಶಿವನ. ಪೊಕ್ಕೆಸು=ಶಕ್ತಿಗುಂದಿಸು, ಪೊಳ್ಳುಮಾಡು. ಬ್ರಹ್ಮಣ್ಯ=ಪೂಜ್ಯದೇವತೆಗಳಲ್ಲಿ ಶ್ರೇಷ್ಠ. ಶೃತಿಹರ=ತಮನೆಂಬ ರಕ್ಕಸ. ಅವನಿಯುಕದ್ದನು=ಹಿರ ಣ್ಯಾಕ್ಷನು. ಅಮರವರರಿಪು=ಇಂದ್ರನ ವೈರಿಯಾದ ಹಿರಣ್ಯಕಶಿಪು. ಕಶ್ಯಪನಕಂದ=ವಾಮನ. ಮತ್ತನೃಪರಕೊಂದ=ಪರಶುರಾಮ. ಅನಿಮಿಷರು=ದೇವತೆಗಳು. ಐದಿ=ಬಂದು. ವೃಂದಾರಕರು= ದೇವತೆಗಳು. ನಿರ್ಜರರು=ದೇವತೆಗಳು. ಭವ=ಈಶ್ವರ. ಸ್ತುತಿಸು=ಸ್ತೋತ್ರಮಾಡು. ರಸೆ=ಭೂಮಿ.

ವಿ. ಸ.:— ಆದಿನಾರಾಯಣ=ಏಕೋನಾರಾಯಣ ಆಸೀತ್ ನಬ್ರಹ್ಮಾನಚ ಶಂಕರಃ ಎಂಬಂತೆ ಜಗತ್ಪೂರ್ವದಲ್ಲಿದ್ದವನೆಂದರ್ಥವು. ಏಕಾರ್ಣ......ಪತ್ರಾಸನ=ಪ್ರಳಯ ಸಮಯದಲ್ಲಿ ವಿಶ್ವವು ಜಲಮಯವಾಗಿ ಒಂದೇ ಸಮುದ್ರದಂತಾಗುವದು. ಅದರಲ್ಲಿ ಆಲದೆಲೆಯ ಮೇಲೆ ಪರಮಾತ್ಮನು ಮಲಗುವನೆಂದು ಪುರಾಣವು. ಸಾಧನ ಸಾಧ್ಯ=ಜ್ಞಾನಭಕ್ತಿವೈರಾಗ್ಯಾದಿಗಳಿಂದ ಸಾಧ್ಯನಾದವನು. ಮುಕ್ತಾ....ಮೋಹರ=ಅಪರೋಕ್ಷಜ್ಞಾನಿಗಳ ಗುಂಪಿನಿಂದ ಬಳಸಲ್ಪಟ್ಟವನು. ಆನಂದ=ಮೋಕ್ಷ ಪಂಚಾತ್ಮಾ=ಪ್ರದ್ಯುಮ್ನ ಅನಿರುದ್ಧ ಸಂಕರ್ಷಣ ವಾಸುದೇವ ನಾರಾಯಣ ಈ ಐದು ರೂಪಗ ಳುಳ್ಳವ. ದ್ವಿಷಡಾತ್ಮಾ=ಕೇಶವಾದಿ ೧೨ ರೂಪಗಳುಳ್ಳವನು. ದಶಾಂಶದಿ=ಮತ್ಸ್ಯಾದಿ ಹತ್ತುರೂಪ ಗಳಿಂದ. ಶತಾಂಶದಿ=ನಾರಾಯಣಾದಿ ನೂರು ರೂಪಗಳಿಂದ. ಸಹಸ್ರಾಂಶದಿ=ಸಾವಿರ ರೂಪಗಳಿಂದ. ಅನಂತಸ್ವರೂಪ=ಅಜಿತಾದಿ ಅನಂತರೂಪಗಳು. ಸೂಕ್ಷ್ಮಸೃಷ್ಟಿ=ಅಂತಃಸೃಷ್ಟಿ ( ಅಂತಃಸೃಷ್ಟಿ ಬಹಿಃಸೃಷ್ಟಿಗಳೆಂದು ಎರಡು ಭೇದಗಳಿವೆ. ) ಅನುದಿನ......ತಾರಾ=ಭಕ್ತರಿಗೆ ಯಾವಾಗಲೂ ಆನಂದವನ್ನೇ ಕೊಡುವವನು. ನಾಲ್ಕನೇ ನುಡಿಯಲ್ಲಿ ದಶಾವತಾರಗಳನ್ನು ಸೂತ್ರರೂಪವಾಗಿ ಹೇಳಿದೆ. ಅಪ್ರಾಕೃತ=ಪ್ರಕೃತಿ ಸಂಬಂಧರಹಿತನು. ಸಾಂಗತ್ಯವೃತ್ತದ ವಿವಿಧ ಚರಣಗಳು ಈ ಪದ್ಯ ದಲ್ಲಿವೆ. ಪದಗಳು ೧೩.

---

೪

ಸಾರಂಗ ರಾಗ — ಝಂಪೆ ತಾಳ

ದ್ಯುಸ್ಥ ನಿಮ್ಮಂಘ್ರಿರಜ ಮಸ್ತಕದಿ ಧರಿಸುತ ನಿ– ।
ರಸ್ತಾಘರಾವ್ ಚಿಂತಾಗ್ರಸ್ತರಾಗಿಹೆವು ಗಡ ।
ಪ್ರಸ್ತುತ ವಸುಧೆಯು ಅಂತಸ್ತಾಪವಿಡಿದು ಅಸ್ವಸ್ಥಮನದಲಿ ಆ ಸುರಲೂ ।

ವಿಸ್ತರಿಸ ಬಂದೆವು ಸಮಸ್ತ ಸುರರಿಂದೀಗ ।
ದುಸ್ತರದ ದೈತ್ಯರುಧ್ವಸ್ತರೆಂದೆಂದಿಗು ಪ್ರ- ।
ಶಸ್ತೋಕ್ತಿಯಿಂದಭಯ ಹಸ್ತವಂ ನೀಡೆಂದು ತ್ವತ್ ಸ್ತೋತ್ರವಂ ಮಾಳ್ಪೆವು ॥ ೧ ॥

ನೀನು ಪರದೈವ ನಿನ್ನನ್ನು ಹೊಂದಿದೆವಾವು ।
ನೀನೆ ನಿನ್ನಿಂದಲವತರಿಸಿ ಮಿಷ್ಟರ ಸದೆವೆ ।
ನೀನೆ ನಿನಗಾಗಿ ಸದ್ಧರ್ಮಪದ್ಧತಿದೋರ್ಪೆ ನಿನ್ನದೆಸೆಯೆಯಿಂದೆಲ್ಲರ ॥
ಜ್ಞಾನೋದಯವು ನಿನ್ನ ವಿಜ್ಞಾನಭಕುತಿಯನು ।
ನೀನಿತ್ತು ನಿನ್ನಲ್ಲಿ ವಿಶ್ವಾಸವಂ ಬಳೆಸು ।
ಸಾನುರಾಗದಲಿ ಹೊರೆ ಹೇ ದಾತ ಹೇ ತ್ರಾತ ಹೇ ನಾಥನೇ ನಮೊನಮೋ ॥ ೨ ॥

ಶಿಷ್ಟರೆಲ್ಲರು ಹೀಗೆ ಸಾಷ್ಟಾಂಗದಿಂ ನಮಿಸೆ ।
ಹೃಷ್ಟಮುಖನಾಗಿ ಶ್ರೀವಿಷ್ಣು ನುಡಿದನೆಲೆ ನಿ- ।
ರ್ದುಷ್ಟಮತಿಗಳಿರ ! ನಾ ಕೃಷ್ಣಾಬಿಧಾನದಲಿ ವೃಷ್ಣಿಕುಲವಸುದೇವನ ॥
ಇಷ್ಟಗೃಹಿಣಿಯ ಉದರ ಶ್ರೇಷ್ಠದಿಂದುದಿಸುತಿಹೆ ।
ದುಷ್ಟದೈತ್ಯರಕುಲವ ನಷ್ಟಮಾಡುವೆ ನಿಮ್ಮ ।
ಇಷ್ಟಪೂರಣಮಾಗೆ ತುಷ್ಟಿಪಡುವಳು ಭೂವಿಯು ಕಷ್ಟಬಿಡಿ ಸುಖಿಸಿರೆನಲು ॥೩॥

ಈ ಸುರರ ಮೊದಲೆ ಹರಿದ್ವೇಷಿ ಕಾಲ್ನೇಮಿ ಭೋ- ।
ಜೇಶ ಮಥುರಾಪುರದಿ ತಾ ಸ್ವಕಿಯ ಯಾದವರ ।
ದೇಶಾಂತರಕೆ ಅಟ್ಟಿ ವಸುದೇವದೇವಕಿಯ ಲೇಸಾಗಿ ಮದುವೆಮಾಡೆ ॥
ಈ ಸತಿಯ ಬಸಿರೆಂಟು ಮೋಸ ನಿನಗೆಂದು ಆ- ।
ಕಾಶವಾಣಿಯು ನುಡಿಯಲಾಸಮಯಕಂಜಿ ಬಲು ।
ರೋಷದಲಿ ದೇವಕಿಯ ಘಾತಿಸಲು ಶೌರಿ ಪೃಥ್ವೀಶನಂ ತಿಳಿದುಳುಹಿದ ॥ ೪ ॥

ಆಗ ಕೊಲದುಳುಹಿದನು ಯೋಗಿ ನಾರದನ ನುಡಿ- ।
ಗಾಗಂಜಿ ಪಾಪಿ ಕಾರಾಗ್ರಹದಿ ಬಸಿರಾರು ।
ತಾ ಘಾತಿಸಿದ ಏಳನೇ ಗರ್ಭ ನಿಲದೆ ಪತನಾಗೆ ಖಳ ಸುಮ್ಮನಾದ ॥

ಬೇಗ ದುರ್ಗೆಯು ರೋಹಿಣೀ ಗರ್ಭದಲಿ ಇಡಲು ।
ನಾಗೇಶನವತಾರ ಶ್ರೀಗೋಪ್ತನಾಸೇಶ ।
ನೀಗೇಳು ತಿಂಗಳಿಗೆ ಆ ಗೋಕುಲದಲಿ ಶುಭಯೋಗದಲಿ ಜನಿಸಿದ ಗಡ
॥ ೫ ॥

ಹರಿಯಾಜ್ಞೆ ವಹಿಸಿ ತಾ ಶಿರಿದುರ್ಗೆ ಯಶೋದೆಯುಳ ।
ವರಗರ್ಭದಲಿ ನಿಂತು ಧರೆಗಿಳಿದಳಾಬಾಲೆ ।
ಪುರುಷೋತ್ಮ ದೇವಕಿಯು ಪರಮ ಜಠರದಿ ನಿಜೈಶ್ವರಿಯದಲಿ ಕ್ರೀಡಿಸುತಿರೆ॥

ಸುರರ ಸಮುಕಕೆ ಅಮಿತ ಹರುಷವಾಯಿತು ಖಳನಿ- ।
ಕರಕೆ ಉತ್ಪಾತ ಸಂದರುಶನವು ಫಲಪುಷ್ಪ- ।
ಭರಿತ ತರುಲತೆಯವನಿ ಚಿರಭದ್ರಮಯವಾಗೆ ಕರೆದವಾವ್
ಕೊಡವಾಲ್ಗಳ ॥ ೬ ॥

ದೇವರ್ಕಳೆಲ್ಲ ಪರದೇವತೆಯ ಆಜ್ಞೆಯಲಿ ।
ತೀವಿದ ಸುತೋಷದಲಿ ಭೂವಲಯದಲಿ ಹುಟ್ಟಿ ।
ಕೋವಿದರೆ ಜೈ ಚಿಟ್ಟು ತಾವು ದುರ್ಬಲರಂತೆ ದೇವರಿಪುಗಳಿಗಂಜಲು ॥

ಪಾವ ಕಂಸನ ಕೊಲುವ ಭಾವದಲಿ ತಂದೆ ವಸು- ।
ದೇವಸಂಗನೆ ತಾಯಿ ದೇವಕಿಯ ಜಠರದಲಿ ।
ಶ್ರೀವಾಸುದೇವವಿರ್ಭಾವನಾದನು ಸ್ವೇಚ್ಛೆ ಶ್ರೀವರ ನೃಶಿಂಹನಂತೆ
॥ ೭ ॥

ಶ್ರಾವಣದ ಬಹುಳಾಷ್ಟಮಿ ವಿಧುದಿಂಬೋದಯದಿ ।
ದಾವ ರೋಹಿಣಿ ಕೂಡಿದಾವೇಳೆ ಬೊಮ್ಮಾದಿ- ।
ದೇವರ್ಕಳಂಬರದಿ ತೀವಿ ಸ್ತೋತ್ರವ ಮಾಡೆ ಶ್ರೀವನಜನಯನಕೃಷ್ಣ ॥

ಶ್ರೀವತ್ಸಮಣಿಕಿರಿಟಕೌಸ್ತುಭಕುಂಡಲವಲಯ ।
ಪೀವರಚತುರ್ಭುಜ ಗದಾವನಜಚಕ್ರಧರ ।
ಪ್ರಾವೃಟ್‌ಪಯೋದಾಂಗ ಸೂವರ್ಣವಸನಾದಿ ದೇವನದ್ಭುತ ಬಾಲನು ॥೮॥

ಸಾಸಿರ್ ಮುಂಗುರುಳ ಮುಖ ವಾಸುದೇವನ ಕಂಡು ।
ಸ್ತ್ರೀಸಹಾನಕದುಂದುಭಿ ಸ್ತುತಿಸೆ ಶ್ರೀಕೃಷ್ಣ ।
ಶೈಶ್ವರೂಪದಿ ದ್ವಿಭುಜ ಲೇಸಾಗಿ ಮೋಹಿಸಿದ ಶ್ರೀಶ ಜನನೀಜನಕರ ॥

ಈ ಸುತನ ಕಂಡು ಗೋಸಾಸಿರದ ಶತಗಳನು ।
ಭೂಸುರರಿಗಿತ್ತನು ಸುತೋಷದಲಿ ವಸುದೇವ ।
ಭೂಸತಿಗೆ ಮಾಂಗಲ್ಯರಾಶಿ ಕೈವಶವಾಯ್ತು ಶ್ರೀಪ್ರಸನ್ವೆಂಕಟೇಶನುದಿಸೆ ॥೯॥

ಶಬ್ದಾರ್ಥ:— ದ್ಯುಸ್ಥ=ದ್ಯುಲೋಕದಲ್ಲಿರುವವ. ರಜ=ಧೂಳಿ. ನಿರಸ್ತ=ಚದರಿಸಲ್ಪಟ್ಟ. ಪ್ರಸ್ತುತ=ಈಗ. ಅಂತಸ್ತಾಪ=ಎದೆಗುದಿ. ಉಸುರ್=ಹೇಳು. ದುಸ್ತರರು=ಅನಿವಾರ್ಯರು. ಉಧ್ವಸ್ತರು=ಕೊಲ್ಲಲ್ಪಡುವವರು. ಸದೆ=ನಾಶಮಾಡು. ಬಳಿಸು=ವೃದ್ಧಿಗೊಳಿಸು. ಹೊರೆ=ರಕ್ಷಿಸು. ತ್ರಾತ=ರಕ್ಷಕ. ಹೃಷ್ಟ=ಹರುಷದಿಂದಕೂಡಿದ. ಶೌರಿ=ಶೂರಸೇನ ರಾಜಗೆ ಮಗನಾದ ವಸುದೇವನು. ಶ್ರೀಗೋಪ್ತ=ಲಕ್ಷ್ಮಿಯನ್ನು ರಕ್ಷಿಸುವವ. ನಿಕರ=ಸಮೂಹ. ಉತ್ಪಾತ=ಅನಿಷ್ಟ. ಕೀವಿದ=ತುಂಬಿದ. ಕೋವಿದತೆ=ಪಾಂಡಿತ್ಯ. ಬೈಚಿಟ್ಟು=ಮುಚ್ಚಿಟ್ಟು. ವಿಧು=ಚಂದ್ರ. ಪೀವರ=ಪುಷ್ಟ. ಪ್ರಾವೃಟ್=ಮಳೆಗಾಲ. ಆನಕದುಂದುಭಿ=ವಸುದೇವ. ಶೈಶ್ವರೂಪ=ಬಾಲರೂಪ. ಭೂಸುರರು=ಬ್ರಾಹ್ಮಣರು.

ವಿ. ಸಂ. :— ಕರೆದ........ಲ್ಗಳ=ಕೃಷ್ಣನು ದೇವಕಿಯ ಜಠರದಲ್ಲಿ ಕ್ರೀಡಿಸುತ್ತಿರಲು ಆಕಳುಗಳು ಕೊಡದ ತುಂಬ ಹಾಲು ಕರೆದವು. ಯೋನಿಜರಂತೆ ಕೃಷ್ಣನ ಜನನವಾಗದೆ ವಸುದೇವ ದೇವಕಿಯರು ಬಿಂಬದಲ್ಲಿ ಚಿಂತಿಸುತ್ತಿರುವ ಪರಮಾತ್ಮರೂಪವೇ ಹೊರಗೆ ಕಾಣಿಸಿಕೊಂಡಿತೆಂಬುದನ್ನು ತಿಳಿಸಲಿಕ್ಕೆಂದು ಆವಿರ್ಭಾವನಾದನು ಎಂಬ ಪದಪ್ರಯೋಗವಿದೆ.

೫

ಸಾರಂಗಧಾರಿ ರಾಗ. —— ಏಕತಾಳ.

ಶ್ರೀವಲ್ಲಭನುದಿಸಿದಾಕ್ಷಣದಿ। ದುರ್ಗಾ ।
ದೇವಿಹುಟ್ಟಿದಳು ಗೋಕುಲದಿ ॥ ಪಲ್ಲ ॥

ವನಜಭವೇಶೇಂದ್ರಾದ್ಯರು ನೆರೆದರು ।
ವನಜನಾಭನ ಸ್ತುತಿಮಾಡಿದರು ॥
ಅನಿಮಿಷರಾಗ ಹೂವಿನ ಮಳೆಗರೆದರು ।
ಘನಗಂಧರ್ವರು ಪಾಡಿದರು ॥ ೧ ॥

ದೇವದುಂದುಭಿ ಮೊಳಗಿದವಂಬರದಲಿ ।
ದೇವನಾರಿಯರಾಡಿದರಲ್ಲಿ ॥
ಭೂವನತ್ರಯ ಮಂಗಳಮಯವಾಯಿತು ।
ದೇವಾರಿಗಳ ಬಲವೆಳದಾಯಿತು ॥ ೨ ॥

ಕಾವಲಿದ್ದವರಿಗೆ ಕಾವಳ ಕವಿಯಿತು ।
ತಾವಾಗಿ ಪುರದ್ವಾರವು ತೆರೆದುವು ॥
ಪಾವನಚರಿತನ ಮಾಯದಿ ನಿದ್ರೆಯು ।
ಠೀವಿತು ಖಳರನು ಮೋಹಿಸಿತು ॥ ೩ ॥

ಭೋಜಪತಿಯು ಭಯಕಾನಕದುಂದುಭಿ ।
ರಾಜೀವನೇತ್ರನ್ನೊಯ್ದನು ವ್ರಜಕೆ ॥
ಶ್ರೀಜಗದೀಶನ ಮೇಲಮೃತವ ನೀ– ।
ರಾಜಿಸಿದವು ಮೇಘಾಳಿಗಳು ॥ ೪ ॥

ಸಾಸಿರ ಫಣಿಫಣ ಛತ್ರವ ಮಾಡಿದ ।
ದಾಶರಥಿಗೆ ಮುನ್ನಂಬುಧಿಯು ॥
ತೋಷದಿ ದಾರಿಯನಿತ್ತಂತ್ಯಮುನೆಯು ।
ಶ್ರೀಶಗೆ ಮಾರ್ಗವ ನಿತ್ತಳು ॥ ೫ ॥

ವಸುದೇವಗೊಷ್ಠಕೆ ಬಂದ್ಯೈಶೊದೆಯುಳ ।
ಶಿಶುದುರ್ಗೆಯು ತಂದು ಸುತನಿಟ್ಟಾ ॥
ಶಶಿಮುಖಿ ದೇವಕಿದೇವಿಗೆ ಕೊಟ್ಟನು ।
ಪ್ರಸುತ ಸುದ್ದಿಯು ಕೇಳಿದ ಕಂಸಾ ॥ ೬ ॥

ಬಿಟ್ಟ ಮಂಡೆಯುಲೆದ್ದು ಬಲು ಲನಲವಿಂಯು ।
ಕಟ್ಟುಗ್ರಕೋಪದಿ ನಿಶಿಥದಲಿ ॥
ಹುಟ್ಟಿದ ಸ್ಥಳಕ್ಕೈದಿ ಭಗಿನಿಯು ಕೈಯಿಂದ ।
ದುಷ್ಟನು ಶಳೆದನು ದುರ್ಗೆಯುನು ॥ ೭ ॥

ಅಣ್ಣನ ಕಾಲ್ಪಿಡಿದಳುತ ದೇವಕಿದೇವಿ ।
ಹೆಣ್ಣುಮಗಳು ಇದು ಪುರುಷಲ್ಲ ॥
ಪುಣ್ಯಸಂತಾನವನುಳುಹೆಂದರೆ ಅಕಾ– ।
ರುಣ್ಯಾದಿ ಕೊಲಲಿಕ್ಕೆ ಅನುವಾದಾ ॥ ೮ ॥

ಜಗಜ್ಜನನಿಯು ಕಾಲ್ವಿಡಿದಪ್ಪಳಿಸಲು ।
ಮುಗಿಲಿಗೆ ಹಾರಿದಳು ನಗೆವೊಗದಿ ॥
ವಿಗಡ ಕಂಸನು ಬೆದರಿದ ಎದೆದಿಗಿಲಲಿ ।
ಖಗಗಮ ಪ್ರಸನ್ವೆಂಕಟ ನಿಯುಮವಿದು ॥ ೯ ॥

ಶಬ್ದಾರ್ಥ:— ವನಜಭವ=ಕಮಲದಲ್ಲಿ ಹುಟ್ಟಿದವನು ಬ್ರಹ್ಮನು. ಅನಿಮಿಷರು=ಪಕ್ಷ್ಮಗಳನ್ನು (ರೆಪ್ಪೆಗಳನ್ನು) ಹಾಕದವರು, ದೇವತೆಗಳು. ಮೊಳಗಿದುವು=ಧ್ವನಿಮಾಡಿದುವು. ಅಂಬರ=ಆಕಾಶ. ದೇವಾರಿಗಳು=ದೈತ್ಯರು. ಕಾವಳ=ಕತ್ತಲೆ. ಕವಿ=ಮುತ್ತು. ತೀವು=ತುಂಬಿಬರು. ಆನಕದುಂದುಭಿ=ವಸುದೇವ. (ಆನಕ, ದುಂದುಭಿಗಳೆಂಬ ದೇವವಾದ್ಯಗಳು ವಸುದೇವನ ಜನನಕಾಲಕ್ಕೆಮೊಳಗಿದವು. ಆದ್ದರಿಂದ ಈಹೆಸರು) ವ್ರಜ=ಗೋಕುಲ. ಅಮೃತ=ನೀರು. ನೀರಾಜಿಸು=ಸುರಿಸು. ನಾಸಿರಫಣಿ=ಶೇಷ. ಪ್ರಸುತದಸುದ್ದಿ=ಹಡೆದಸುದಿಯು. ಮಂಡೆ=ತಲೆ. ನಿಶಿಥ=ರಾತ್ರಿ. ವಿಗಡ=ವಿಚಿತ್ರ. ದಿಗಿಲು=ಚಿಂತೆ. ಖಗಗಮ=ವಿಷ್ಣು.

ವಿ. ಸಂ.:— ದೇವಾರಿ........ಡಾಯಿತು=ದೈತ್ಯರಬಲವು ಕುಂದಿತು. ಬಿಟ್ಟಮಂಡೆಯುಲೆದು =ತಲೆಯಮೇಲೆ ಕೂದಲುಗಳನ್ನು ಹರವಿಕೊಂಡು. ಈ ನುಡಿಗಳು ಎಲ್ಲವೂ ಸಾಂಗತ್ಯಗಳು. ಪದ್ಯಗಳು ೩೦.

೬

ತೆಲಂಗ ಕಾಂಬೋಧಿ ರಾಗ. —— ಅಟ್ಟತಾಳ.

ಅಂತರಿಕ್ಷಾದದ್ಭುತ ನೋಡಿದ । ಬಹು– ।
ಕಾಂತಿಮೈಯ್ಯಳ ಕಂಡು ಬಾಡಿದ ॥ ಪಲ್ಲ ॥
ಕಾಂತೆ ಮಾತಾಡಿದಳವನೊಳು । ಈ ।
ಭ್ರಾಂತಿಯು ನಿನಗ್ಯಾಕೆಂದಳು ॥ ಅನುಪಲ್ಲ ॥

ಕಂಸಕೇಳಪರಾಧಿನಾನಲ್ಲ । ನನ್ನ ।
ಹಿಂಸೆ ನಿನಗೆ ಶಕ್ಯ ತಾನಲ್ಲ ॥
ಪುಂಸನೊಬ್ಬನ್ಯತ್ರ ಇಹನು । ನಿನ್ನ ।
ಧ್ವಂಸಕ್ಕೆ ಕಾರಣನಹನು ॥ ೧ ॥

ಬ್ರಹ್ಮಾದಿವಂದ್ಯಳು ಕನ್ಯಳು । ಆ ।
ಹಮ್ಮಿನ ಖಳಗಿಂತೆಂದಳು ॥
ದುಮ್ಮಾನದಲಿ ಚಿಂತೆ ಬಿಟ್ಟನು । ಬಂಧ– ।
ನಮ್ಮೋಚನವ ಮಾಡಿ ಬಿಟ್ಟನು ॥ ೨ ॥

ವ್ಯರ್ಥ ನಿಮ್ಮಿಬ್ಬರ ನೋಯಿಸಿದೆ । ಶಿಶು ।
ಹತ್ಯಕ್ಕೆ ಕಾರಣ ನೆನಿಸಿದೆ ॥
ಪ್ರಾರ್ಥನೆ ಮಾಡುವೆ ಕ್ಷಮಿಸೆಂದು । ಸ– ।
ಮರ್ಥ ಸುಶೀಲರು ನೀವೆಂದು ॥ ೩ ॥

ಶೌರಿ ನುಡಿದನು ಚಿಂತ್ಯಾತಕೆ । ನೀ ।
ಕಾರಣನಲ್ಲೊ ಸುಖದುಃಖಕೆ ॥
ಪ್ರೇರಕ ನೇಮಕ ಹರಿತಾನು । ಸ್ವ- ।
ಸ್ವಾರ ಪಾತಾರ ಹಂತಾರನು ॥ ೪ ॥

ಕೋಪವ ಜರಿದು ಮನೆಗೆ ಬಂದು । ಪಶ್ಚಾ- ।
ತ್ತಾಪದಿ ಕಳೆದ ಯಾಮವನೊಂದು ॥
ತಾ ಪುನರಪಿ ಪಾಪಕ್ಕೆಳೆಸಿದ । ದುಷ್ಟ ।
ಪಾಪಾತ್ಮಾ ಮಂತ್ರಿಗಳ್ಕರೆಸಿದ ॥ ೫ ॥

ಮೊದಲಂತೆ ದುರ್ಗೆ ಬಾಲಿಕೆಯಾಗಿ । ತಾಯಿ- ।
ಬದಿ ಮಲಗಿದಳು ಹಾಸಿಕೆ ಹೊಂದಿ ॥
ಮುದವನಿತ್ತಳು ತಾಯಿ ತಂದೆಗೆ । ಶ್ರೀ ।
ಯದುಕುಲೇಂದ್ರನ ಪ್ರೀಯಳೆಂದಿಗೆ ॥ ೬ ॥

ಕನ್ಯಳ ಮಾತು ಮಂತ್ರಿಗಳಿಗೆ । ಕಂಸ ।
ಚೆನ್ನಾಗಿ ಪೇಳೆ ಪಾಪಿಗಳಿಗೆ ॥
ಚಿನ್ನರ ಹಿಂಸೆಗೆ ನಡೆದರು । ದೈತ್ಯ- ।
ಮನ್ಯರು ಹಿಂಸಾ ಕ್ರೀಡಾಪರರು ॥ ೭ ॥

ನಂದವ್ರಜದಿ ನಂದನರಾಣಿ । ನಿದ್ರೆ- ।
ಹೊಂದಿರೆ ಸುತನ ಪಡೆದ ವಾಣಿ ॥
ಅಂದಿನ ರಾತ್ರಿಲಿ ಕೇಳ್ದರು । ಆ ।
ನಂದಾಬ್ಧಿಯಲಿ ಓಲಾಡಿದರು ॥ ೮ ॥

ಆನಂದಸಾಂದ್ರಾಪ್ರಮೇಯನು । ಚತು- ।
ರಾನನ ಹರನ ಸೃಷ್ಟಾರನು ॥
ಆ ನಂದನು ಯಶೋದೆಯು ತಮ್ಮ । ಈ ।
ಸೂನುಯೆಂದರು ನೋಡಿ ಅಮ್ಮಮ್ಮ ॥ ೯ ॥

ದೈವಜ್ಞರು ನೆರಕೊಂಡರು । ಪರ ।
ದೈವ ಬಾಲಕನೆಂದು ಕಂಡರು ॥
ದೇವೇಶ್ವರಗೆ ಜಾತಕರ್ಮವ । ಮಾಡಿದ .
ರೂ ವಿಶ್ವಕರ್ಮಜ್ಞ ಮಾಧವಗೆ ॥೧೦॥

ಮಹೋತ್ಸವದಿ ನಂದಗೋಪನು । ಅಮಿತ ।
ಗೋವು ಹಿರಣ್ಯ ರತ್ನಗಳನ್ನು ॥
ಸೂವಸ್ತ್ರ ಅನ್ನ ಭೂದಾನವ । ಭೂ- ।
ದೇವರಿಗಿತ್ತನು ನಿದಾನವಾ ॥ ೧೧ ॥

ಸುಪ್ರಭಾತದಲಿ ಒಪ್ಪಿದ ಬಾಲಾ । ಸೂ- ।
ರ್ಯಪ್ರಭಾನಂತನಂತರ ಚಲ್ವ ॥
ಸುಪ್ರೀತಿ ಕಾರಣನು ಜನಕೆ । ದೈ- ।
ತ್ಯಪ್ರಾಣ ಹರಣನು ತ್ರಿಭುವನಕೆ ॥ ೧೨ ॥

ಸಿಂಗರಿಸಿದಗೋರ್ಪಗೋರ್ಗಳು ಗೋ- ।
ಪಾಂಗನೇರ್ಮಂಗಳ ಸ್ವನಗಳು ॥
ರಂಗಪೂರ್ಣೇಂದೂದಯವಾಯ್ತು । ಅಂತ- ।
ರಂಗ ತೋಷಾಬ್ಧಿಲಿ ಉಬ್ಬಿತು ॥ ೧೩ ॥

ಪಂಕಜ ನೇತ್ರೆರು ಗೋಪೇರು । ವಸ್ತ್ರಾ- ।
ಲಂಕಾರವಿಟ್ಟರು ನಲಿದರು ॥
ಕುಂಕುಮರಸದೋಕುಳಿಯಾಟ । ಶ್ರೀ ।
ಪಂಕಜನಾಭ ಹುಟ್ಟಿದ ಮಾಟ ॥ ೧೪ ॥

ಪ್ರತ್ಯಬ್ದೀವ ಕಪ್ಪವಕೊಂಡು । ನಂದ ।
ಪೃಥ್ವೀಪತಿ ಕಂಸನ ಕಂಡು ॥
ಅರ್ಥವನವನಿಗೊಪ್ಪಿಸಿದನು । ತನ್ನ ।
ಭ್ರಾತೃ ವಸುದೇವನ ಕಂಡನು ॥ ೧೫ ॥

ಯಮುನಿಂದ ಬಂದು ಕಪ್ಪವ ತಂದು । ಕೊಟ್ಟು ।
ಗಮನಕುಜ್ಜುಗಿಸೆ ಶೂರಜನೆಂದು ॥
ಅಮಿತೋತ್ಪಾತವು ಬ್ರಹದ್ವನಕೆಂದ । ಕೇಳಿ ।
ಯಮುನ ತಂಗಿಯ ತೀರಕೆ ಬಂದ ॥ ೧೬ ॥

ಅನ್ನಕ್ಕೆ ಮೊದಲೆ ಕಂಸನ ಧಾತ್ರಿ । ದೇವ- ।
ಕನ್ನಿಕೆಯಂತೆ ಸೋಗಿನ ಗಾತ್ರಿ ॥
ಚಿನ್ನ ಪುರುಷೋತ್ತಮನಿದ್ದಲ್ಲಿಗೆ । ನಂ- ।
ದನ್ನ ವಸ್ತ್ರದ ಗೃಹ ಪೊಕ್ಕಾಗೆ ॥ ೧೭ ॥

ಶಿಶುರೂಪ ಹರಿಯು ಮಾಯದಲಾಗೆ । ತಾಯಿ ।
ಯಶೋದೆಗೆ ನಿದ್ರೆಯು ಕವಿದಾಗೆ ॥
ವಿಷಮುರಕ್ಕಸಿ ಮೊಲೆಗೊಟ್ಟಳು । ಆಕೆ ।
ಯಸು ಸಹ ಹೀರಿದ ತೃಟಿಯೊಳು ॥ ೧೮ ॥

ಮೃತಳಾದಳು ಸಾರ್ಧಯೋಜನ । ವನು ।
ಕ್ಷಿತಿಯನ್ನು ವ್ಯಾಪಿಸೆ ವ್ರಜಜನ ॥
ಅತಿಯಾಶ್ಚರ್ಯವ ಬಡಲಾಗೆ । ಗೋ- ।
ಪತಿ ಬಂದು ಕಂಡ ಬೃಹದ್ವನದಾಗೆ ॥ ೧೯ ॥

ತ್ರೈಕಾಲದರ್ಶಿ ನಮ್ಮಣ್ಣನು । ಅ ।
ನೇಕ ಉತ್ಪಾತವ ಪೇಳ್ದನು ॥
ನಾ ಕಂಡೆ ಪ್ರಸನ್ವೆಂಕಟೇಶನ । ಲೀ- ।
ಲಾಕೌತುಕವೆಂದ ನಂದನು ॥೨೦॥

ಶಬ್ದಾರ್ಥ:—ಪುಂಸನು=ಪುರುಷನು. ದುಮ್ಮಾನ=ದುಃಖ. ಮೋಚನ=ಬಿಡುಗಡೆ ತ್ರಾತಾರ=ರಕ್ಷಕನು. ಹಂತಾರ=ಕೊಲ್ಲುವವ. ಜರಿದು=ಬಿಟ್ಟು. ಯಾಮ=ಮೂರುತಾಸು ಪುನರಪಿ=ಮತ್ತೆ. ಎಳಿಸಿದ=ಮನಮಾಡಿದ. ಮುದ=ಸಂತೋಷ. ಚಿಣ್ಣರು=ಬಾಲಕರು. ದೈತ್ಯ ಮನ್ನೆಯರು=ದೈತ್ಯ ಮಾಂಡಲಿಕರು. ಓಲಾಡು=ಈಸಾಡು. ಆನಂದ ಸಾಂದ್ರನು=ಅತ್ಯಂತ ಆನಂದವುಳ್ಳವನು ಅಂದರೆ ಆನಂದ ಸ್ವರೂಪಿಯು. ಅಪ್ರಮೇಯನು=ಸಚ್ಛಾಸ್ತ್ರಗಳಿಗೂ ನಿಲುಕದವನು. ದೈವಜ್ಞರು=ಜ್ಯೋತಿಷ್ಕರು. ನೆರಕೊಂಡರು=ಕೂಡಿದರು. ಅಮಿತ=ಎಣಿಕೆಯಿಲ್ಲದಷ್ಟು. ಹಿರಣ್ಯ=ಬಂಗಾರ. ಭೂದೇವ=ಬ್ರಾಹ್ಮಣನು. ತೋಷಾಬ್ಧಿ=ಸಂತೋಷ ಸಮುದ್ರ. ಅಬ್ದ=ವರ್ಷ. ಉಜ್ಜುಗಿಸೆ=ಉದ್ಯುಕ್ತವಾಗಲು. ಯಮುನತಂಗಿ=ಯಮುನಾನದಿ. ಧಾತ್ರಿ=ದಾದಿ. ನಿದಾನ=ದ್ರವ್ಯ. ತೃಟಿಯೊಳು=ಸ್ವಲ್ಪವೇಳೆಯಲ್ಲಿ

ವಿ. ಸ.:—ಸೂರ್ಯಪ್ರಭಾನಂತನಂತರ ಚೆಲ್ವ=ಸೂರ್ಯನ ಬೆಳಕಿಗಿಂತ ಹೆಚ್ಚಾದ ಕಾಂತಿಯಿಂದೊಡಗೂಡಿದ ಚೆಲ್ವಿಕೆಯುಳ್ಳವನು. ಸುಪ್ರೀತಿ.........ಕೆ=ಮೋಕ್ಷಕ್ಕೆ ಅರ್ಹರಾದಂಥ ಜನಗಳಿಗೆ ಮಾತ್ರ ತನ್ನ ವಿಷಯಕವಾದ ಪ್ರೇಮವನ್ನು ಅಂದರೆ ಭಕ್ತಿಯನ್ನು ಹುಟ್ಟಿಸುವವನು. ರಂಗಪೂರ್ಣ.............ಯು ಅಂತರಂಗ.....ಬ್ಬಿತು=ಪೂರ್ಣಚಂದ್ರಮನು ಉದಯನಾ

ಗಲು ಸಾಗರವು ಉಬ್ಬಿಬರುವಂತೆ ರಂಗನು ಉದಿಸಲು ಸಜ್ಜನರ ಅಂತರಂಗ ಕೋಶವು ಉಕ್ಕೇರಿ ಬಂದಿತು. ಅಂದರೆ ಸಜ್ಜನರಿಗೆ ಪರಮಾನಂದವಾಯಿತು. ಅನ್ನಕ್ಕೆ ಮೊದಲ್=ಊಟದ ಮೊದಲು ಇದು ಸಾಂಗತ್ಯವೃತ್ತವು. ಪದ್ಯಗಳು ೫೧.

---

**2**

ರಾಗ ಗೌಂಡ ೧. — ಅಟ್ಟತಾಳ

ಕೆಣಕಿ ಕೆಟ್ಟಳು ಪೂತನಿಯು । ಹರಿಗೆ– ।
ಸ್ತನವ ಕೊಟ್ಟು ಕೊಂಬೆನೆಂಬ ಹವಣಿಕೆಯಿಂ ॥ ಪ ॥
ವನಜಭವಾಂಡ ನುಂಗುವನ ಹೃದ್– ।
ವನಜದಿ ಮುನಿಗಳಿಗ್ಹೊಳೆದು ತೋರುವನ ॥
ನೆನೆದವರಘಕುಲಹರನ । ಭಗವ– ।
ಜ್ಜನರು ಸಜ್ಜನರಿಗೆ ಸುಲಭನೆನಿಪನ ॥ ೧ ॥

ಶ್ರೀಲೋಲನವಳೆದೆ ಮೇಲೆ । ಬಾಲ– ।
ಲೀಲೆಯ ತೋರ್ದು ಇಕ್ಕಿದನು ಚಪ್ಪಾಳೆ ॥
ಶೈಲೇಂದ್ರನಂತೆ ಬಿದ್ದವಳ । ಕಂಡು ।
ಗೋಳಿಟ್ಟತಾಗಾ ಗೋಪಾಲರ ಮೇಳಾ ॥ ೨ ॥

ಎತ್ತಿಕೊಂಡಪ್ಪಿದಳು ಮಗನ । ಗೋಪ– ।
ಕರ್ತಾ ಸೋಜಿಗವೆಂದುತ್ಪಾತ ಗೆಲಿದನ ॥
ಪುತ್ರಂಗೆ ಗವ್ಯಾಮೃತದಲಿ । ಸೇಚಿ– ।
ಸುತ್ತ ಗೋಖುರಪಾಂಸು ಇಟ್ಟು ಫಣೆಯಲಿ ॥ ೩ ॥

ಸತ್ಪಾತ್ರರಿಗೆ ಸರ್ವಸ್ವವನು । ಕೊಟ್ಟು ।
ಸೂಕ್ತಗಳಿಂದಾಶೀರ್ವೋಕ್ತಿ ಪಡೆದನು ॥
ಮುಕ್ತಾಮುಕ್ತರ ಒಡೆಯನಿಗೆ । ಯೋಗಿ– ।
ಹೃತ್ಸೀತದಲ್ಲಿ ರಾಜಿಸುವ ಮಹಿಮಗೆ ॥ ೪ ॥

ರಕ್ಕಸಿಗಗ್ನಿಯ ಕೊಡಲು । ಆಕೆ– ।
ಯುಕ್ತಾಯು ಧೂಮಾಮೋದವಾಗಿರಲು ॥

ಚಿಕ್ಕ ರಂಗನ ಬಾಯಿ ಮುಟ್ಟಿ । ಇ ।
ದಕ್ಕ್ಮಾರಣ ಪ್ರಸನ್ವೆಂಕಟನ ಸೃಷ್ಟಿ ॥ ೫ ॥

ಶಬ್ದಾರ್ಥಃ—ಹವಣಿಕೆ=ಹೊಂಚ.ಹಾಕುವಿಕೆ. ಹೃತ್=ಹೃದಯ. ಇಕ್ಕಿದನು=ಹಾಕಿದನು. ಗವ್ಯಾಮೃತ=ಹಾಲು. ಸೇಚಿಸು=ಸಿಂಪಡಿಸು. ಪಾಂಸು=ಧೂಳಿ. ಫಣಿ=ಹಣೆ. ರಾಜಿಸು=ಶೋಭಿಸು. ಆಮೋದ=ಸುವಾಸನೆ.

ವಿ. ಸ.:—ಅಘ.........ನ=ಪಾಪರಾಶಿಯನ್ನೇ ನಾಶವಮಾಡುವವನು. ಗೋಪ, ಕರ್ತಾ, ಸೋಜಿಗ. ಈ ಮೂರು ಉದ್ಗಾರವಾಚಕಗಳು. ಹೀಗೆ ಉದ್ಗಾರ ತೆಗೆದು ಬಂದ ಅಶು ಭವನ್ನು ಗದ್ಗದ ಮಗನನ್ನು ಎತ್ತಿಕೊಂಡು ಅಪ್ಪಿದಳು. ಸೂಕ್ತ.........ಪಡೆದನು=ವೇದ ಸೂಕ್ತಗಳಿಂದ ಆಶೀರ್ವಚನೆಯುನ್ನು ಹೊಂದಿದನು. ಮುಕ್ತಾ......ಸಿಗೆ=ಮುಕ್ತರು ಮತ್ತು ನಿತ್ಯ ಸಂಸಾರಿಗಳಿಗೆ ಸ್ವಾಮಿಯಾದವನಿಗೆ. ಪದ್ಯಗಳು ಸಾಂಗತ್ಯ ವೃತ್ತದುವು. ಪದ್ಯಗಳು ೫೭.

---

## ೮

ರಾಗ ಮೋಹನ ಕಲ್ಯಾಣಿ. —— ಅಟ್ಟತಾಳ.

ಪುತ್ರಂಗೆ ಎರಡಾರನೆಯ ದಿನ । ಗೋಪಿ ।
ಮುತ್ತೈದೆಯರ ಕರೆವಳಾದಿನ ॥ ಪಲ್ಲ ॥

ಮಿತ್ರೇಂದುಕೋಟಿ ಕಳಾತ್ಮಗೆ । ಮೃಗ– ।
ನೇತ್ರೇರಲಂಕರಿಸಿದರಾಗೆ ॥ ಅ. ಪಲ್ಲ ॥

ಮುದ್ದುಮೋರೆಯು ಮುಂಗುರುಳಾಳಿಯು । ಸ ।
ತ್ಪದ್ಮರಾಗದ ಅರಳೆಲೆಯು ॥
ಮದ್ದಿಕಾಯಿ ಮಕರ ಕುಂಡಲಕರ್ಣ । ಸ್ನೇಹ ।
ಹೊದ್ದಿದ ಕರ್ಣ ಕಾಡಿಗೆಗಣ್ಣ ॥ ೧ ॥

ಸುಧೆಯ ಸೂಸುವನಾಗಿ ಕೂಸಿಗೆ । ರತ್ನ– ।
ಪದಕ ಹಾರಗಳೊಪ್ಪೆ ಶ್ರೀಶಗೆ ॥
ಚದುರರೇರಿಟ್ಟರು ತಮ್ಮ ಮನೋಹರ । ಪಂ– ।
ಗದಹುಲಿಯುಗುರು ಮುತ್ತಿನಸರಾ ॥ ೨ ॥

ಕೊರಳ ಕೌಸ್ತುಭ ಮುಂಗೈಮುರಿಗೆಯು । ಸಣ್ಣ ।
ಬೆರಳುಂಗುರದ ಮುರಾರಿಯು ॥
ಕಿರಿಗಂಟೆ ಉಡುದಾರ ಬುಲ್ಲಿಕಾಯಿಯು । ಶ್ರೀ- ।
ಚರಣದಂದುಗೆ ಗೆಜ್ಜೆಕಾಯಿಯು ॥ ೩ ॥

ತರಳನಪ್ಪಿಕೊಂಡರ್ ತರಳೆಯರು । ನೀಲ ।
ಸುರಿಬಂಮಣಿಯಾ ಕುರುಳೆಯರು ॥
ಸರಿಯು ಹರಿಮಣಿತೊಟ್ಟಿಲಲಿಟ್ಟರು । ಬಲು ।
ಪರುಷವಾರ್ಥಿಲಿ ಜೋಗುಳಿಟ್ಟರು ॥ ೪ ॥

ಜೋ ಜೋ ಝಷಕುಲೋತ್ತರಕರ್ಮ । ಜೋಜೋ ।
ಜೋ ಜೋ ಜಲಧಿಮಂಥನಕೂರ್ಮ ॥
ಜೋ ಜೋ ವಸುಧಿಸ್ಥಾಪಕಕೋಲಾ । ಜೋಜೋ ।
ಜೋ ಜೋ ಖಳವಿದಾರಣಶೀಲ ॥ ೫ ॥

ಜೋ ಜೋ ಬಲಿವಿದಾರಕಭ್ರಾತಾ । ಜೋಜೋ ।
ಜೋ ಜೋ ಸುರಭಿ ಭೂಸುರನಾಥಾ ॥
ಜೋ ಜೋ ವನಚರಾಸ್ಯಯುಚರ । ಜೋಜೋ ।
ಜೋ ಜೋ ನವನೀತದ ಚೋರ ॥ ೬ ॥

ಜೋ ಜೋ ಜಿತಖಳಪತಿವ್ರತ । ಜೋಜೋ ।
ಜೋ ಜೋ ಮತಿಹೀನ ಕಲಿಹರ್ತಾ ॥
ಜೋ ಜೋ ದ್ರುಹಿಣ ಶಂಕರ ಗೋಪ್ತಾ । ಜೋಜೋ ।
ಜೋ ಜೋ ನಿಖಿಳ ಭುವನವ್ಯಾಪ್ತಾ ಜೋ ಜೋ ॥ ೭ ॥

ಮುದಿರನಯನೆಯರ್ ಹಾಡಿವರ್ಹಿಗೆ । ಅತಿ ।
ಮೃದುಸ್ವನದಿಂದೆ ಒಪ್ಪಿದರಾಗೆ ॥
ಯದುಕುಲವರಸುಗೆ ಹಸುಳಗೆ । ವಿ- ।
ಶ್ವಸಲಿ ಪೂಪಣೆಂಟನೆಯುರಸಂಗೆ ॥ ೮ ॥

ಮಂಗಳಸ್ನಾನಮಂಗಳಿಟ್ಟರು । ಶ್ರೀ ।
ಮಂಗಳಾಕ್ಷತೆಯ ಹಣೆಗಿಟ್ಟರು ॥
ಮಂಗಳಾರತಿಯ ಬೆಳಗಿದರು । ಗೋ- ।
ಪಾಂಗನೆಯರು ಬಾಗಿಲ್ ಹಿಡಿದರು ॥ ೯ ॥

ಅಂದಿನ ಭಾಗ್ಯಕ್ಕೆ ಎಣೆಯಿಲ್ಲ । ಶ್ರೀ ।
ಮಂದರಧರವಿಷ್ಣುಗೋಪಾಲಾ ॥
ನಂದನೆನಿಸಿಕೊಂಡ ಶ್ರೀಪಾಲಾ । ನಿತ್ಯಾ- ।
ನಂದಪ್ರಸನ್ವೆಂಕಟನಿಜಲೀಲಾ ॥ ೧೦ ॥

ಶಬ್ದಾರ್ಥ:— ಮಿತ್ರ=ಸೂರ್ಯ. ಕಳಾ=ತೇಜ. ಮುಂಗುರುಳಾಳಿ=ಉಂಗುರುಕೂದಲುಗಳಸಮೂಹ. ಪದ್ಮರಾಗ=ರತ್ನವಿಶೇಷ. ಪದ್ದಿಕಾಯಿ=ಆಭರಣವಿಶೇಷ. ಸ್ನೇಹ=ಎಣ್ಣೆ. ಹೊನ್ನು=ಸ್ವತ್ತು. ಅಂಗದ=ಭುಜಕೀರ್ತಿ. (ತೋಳಬಾಪುರಿ) ಮುಂಗೈಮುರಿಗೆ=ಆಭರಣವಿಶೇಷ. ಅಂದುಗೆ=ಕಾಲಗಡಗ. ಬಾಸುಳಿ=ನಾಗೀಹುಳ. ಪಂವಣಿ=ನೀಲ ಅಥವಾ ಪಚ್ಚರತ್ನ. ಝಷ=ಮೀನ. ಉತ್ತರ=ಶ್ರೇಷ್ಠ. ಕೋಲ=ಹಂದಿ. ದ್ರುಹಿಣ=ಬ್ರಹ್ಮ.

ವಿ. ಸಂ. ಮಿತ್ರ=......ತ್ಮಗೆ=ಕೋಟಿಸಂಖ್ಯಾಕರಾದ ಸೂರ್ಯಚಂದ್ರರಂತೆ ಕಾಂತಿಯುಳ್ಳ ಶರೀರವುಳ್ಳವನಿಗೆ. ನೀಲ......ಳೀರ=ನೀಲವರ್ಣದ ಭೃಂಗಗಳೋಪಾದಿಯಲ್ಲಿ ವರ್ಣವುಳ್ಳ ಉಂಗುರುಕೂದಲಿನ ಹೆಂಗಳೆಯರು. ಬಲಿ......ಕ್ರಾಂತಾ=ಬಲಿಯನ್ನು ಪಾತಾಳಕ್ಕೆ ಒತ್ತಿದ ಅಣ್ಣ. ಸುರಭಿಭೂಸುರ=ಕಾಮಧೇನುವು ಇದ್ದ ಬ್ರಾಹ್ಮಣ. ಪರಶುರಾಮ. ಝಷಕು......ಕರ್ಮ=ಮತ್ಸ್ಯಕುಲದಲ್ಲಿ ಶ್ರೇಷ್ಠಕರ್ಮವನ್ನಾಚರಿಸಿದವನು. ದೇವಾಸುರರು ಕೂಡಿ, ಸರ್ಪಶ್ರೇಷ್ಠನಾದ ವಾಸುಕಿಯನ್ನು ಹಗ್ಗವನ್ನಾಗಿ ಮಂದರವನ್ನು ಕಡೆಗೋಲನ್ನಾಗಿ ಮಾಡಿ, ಅಮೃತಪ್ರಾಪ್ತಿಗಾಗಿ ಸಮುದ್ರ ಮಂಥನಮಾಡಲುದ್ಯುಕ್ತರಾಗಲು ಮಂದರವು ಮುಣುಗುವ ವೇಳೆಯಲ್ಲಿ ಪರಮಾತ್ಮನು ಕೂರ್ಮಾವತಾರನಾಗಿ ಆ ಪರ್ವತವನ್ನು ಬೆನ್ನಲಿ ಧರಿಸಿ ಮಂಥನಕಾರ್ಯವನ್ನು ಸಾಂಗಮಾಡಿದದ್ದರಿಂದ ಅವನಿಗೆ ಜಲಧಿಮಂಥನನೆಂದೆನ್ನುವರು. ವನಚರಾ......ಕರ=ಕಪಿಗಳಕುಲದಲ್ಲಿ ಸಂಚರಿಸಿದವನು. ಎಂಟನೆರಸಣಿ=(ಉಪನಿಷತ್ ಭಾಷ್ಯಗಳಲ್ಲಿ ಬ್ರಹ್ಮನು ಆರನೇರಸ, ಲಕ್ಷ್ಮೀದೇವಿಯು ಏಳನೇರಸ, ನಾರಾಯಣನು ಎಂಟನೇರಸ ಹೀಗೆ ಹೇಳಿ ಇದಕ್ಕೂ ಹೆಚ್ಚಿನರಸವಿಲ್ಲದ್ದರಿಂದ ನಾರಾಯಣನೇ ಸರ್ವೋತ್ತಮನೆಂದು ಪ್ರತಿಪಾದಿಸಿದ್ದಾರೆ ಆದ್ದರಿಂದ) ಎಂಟನೇ ಅರಸನಾಗಿರುವರೆ ಸರ್ವೋತ್ತಮನಾದ ಪರಮಾತ್ಮನಿಗೆ ಹೊಂದರ್ಥವು. ಪದ್ಯಗಳು ೩. ಸಾಂಗತ್ಯವೃತ್ತ.

೬

ರಾಗ ಶಂಕರಾಭರಣ. —— ಅಟ್ಟತಾಳ.

ರಂಗಗೆ ನವೊ ಪಾಂಡು । ರಂಗಗೆ ನವೊ ॥ ಪಲ್ಲ ॥

ರಂಗಗೆ ನಾಲ್ಕನೆಯ । ತಿಂಗಳೊಳು ಜನ್ಮ ಋಕ್ಷ ।
ಸಂಗವಾದ ದಿವಸ ಬಹಿರ್ನಿಷ್ಕ್ರಮಣವು ॥
ಅಂಗನೆ ಗೋಪೆಮ್ಮ ತನ್ನ । ಸಿಂಗನ ಕೂಡಿ ಮಿಂದಳು ।
ಮಂಗಳಾರ್ತಿ ಬೆಳಗಿದಾರಂಗನೇರೆಲ್ಲ ॥ ೧ ॥

ಬಹಾಳನ್ನ ಪಾನವಸನ । ಮಹೀಸೂರರಿಗೆ ಇತ್ತು ।
ಬಹೂ ಪುಣ್ಯ ಗುಣಾಶೀಲ ನಂದಗೋಪಾಲ ॥
ಅಹಾಸ್ಯನುಪಯಂದಲ್ಲಿ । ಮಹೋತ್ಸವ ಕಾಳಿಂದಿಯಲ್ಲಿ ।
ಅಹಿಶಯನ ಶಕಟದಾ ನೆಳಾಲೀನಲ್ಲಿ ॥ ೨ ॥

ಮಲಾಗಿರೆ ಕಂಸಭೃತ್ಯ । ರೊಳೂ ಶಕಟಾಖ್ಯ ದೈತ್ಯ ।
ಒಳಾಪೊಕ್ಕು ಬಂಡಿಯ ತಳದಲಾತನ ॥
ಕೊಲೂವೆನೆಂಬನಕಾಂಘ್ರಿ । ತಳಾದಲವನ ಒದ್ದಬಾಲ- ।
ಕುಳಾಕಟಿಸಿ ಶಕಟಾವು ಭಗ್ನವಾಗಿರೆ ॥ ೩ ॥

ಬಂಡಿಗಾಲಿ ವ್ಯಸ್ತವಾದವು । ತುಂಡುತುಂಡಾದವು ಕಾಷ್ಟ ।
ಕಂಡರೂ ಜನರು ಆಶ್ಚರ್ಯಕಾರ್ಯವ ॥
ಪಾಂಡುರಂಗನೆಳೆಯ ಪಾದ । ಬಂಡಿಯಾ ಖಂಡಿಪುದುಂಟೆ ಉ- ।
ದ್ದಂಡಮೃತ್ಯು ಗೆದ್ದನೆಂದ ನಂದದಿ ನಂದ ॥ ೪ ॥

ಶಂಕಿಸಿ ಕಂದನ್ನ ಅಪ್ಪಿಕೊಂಡಳು ಗೋಪೆಮ್ಮ ।
ಪಂಕಜಾಕ್ಷಗೆರೆದಳು ಕಾಳಿಂದಿಯಲ್ಲಿ ॥
ಸಂಖ್ಯೆಯಿಲ್ಲದಾಶೀರ್ವೋಕ್ತಿಮಾಡಿಸಿ ಮೊಲೆಗೊಟ್ಟಳು ।
ಹುಂಕರಿಸಿ ಗರ್ಜಿಸಿದ ಗೋಪ ಗೋಪಿಗೆ ॥ ೫ ॥

ಉತ್ಸಾಹದಲ್ಲಿ ಮರೆದೆ ಅಚ್ಯುತನ್ನ ಎಂದು ಗೋಪಿ ।
ಬಚ್ಚೇರಿಗಂಗಳೆ ನಂದನಂಘ್ರಿಗೆರಗಿ ॥
ಪಶ್ಚಾತ್ತಾಪ ಹೊಂದಿ ನಾ ನಿನ್ನ್ಯಚ್ಚತ್ತೆನೆಂದ್ಯಶೋದೆ ।
ಹೊಚ್ಚಿ ಮಲಗಿಸೆ ನಿದ್ರೆಮುದ್ರೆ ಹೊಂದಿದ ॥ ೬ ॥

ಶೈಶು ಲೀಲೆಯ ಮುಕುಂದ । ತಾ ಶಯನ ಮಾಡಿದನು ।
ಶಾಶ್ವತ ವಿಶ್ವೈಕ ಪ್ರಸನ್ವೆಂಕಟ ನಾಥಾ ॥
ಕುಶಲಾ ದಿ ನವಲ್ಲಿ । ಶೇಷನವತಾರ ಅಚ್ಯುತಾ– ।
ವೇಶ ಬಲರಾಮು ತೋಷದಲಿದ್ದ ಸಮರ್ಥ ॥ ೭ ॥

ಶಬ್ದಾರ್ಥ:— ಋಕ್ಷ=ನಕ್ಷತ್ರ. ಅಹಸ್ಕರ=ಸೂರ್ಯ. ಕುಳುಕುಳಿಸಿ=ತುಣುಕುತುಣು ಕಾಗಿ. ಶಕಟ=ಬಂಡಿ. ಅನಕ=ಇಷ್ಟರಲ್ಲಿ. ಭಗ್ನವಾಗು=ಮುರಿ. ವ್ಯಸ್ತವಾದವು=ಅತ್ತಿತ್ತ ಚದರಿದವು. ಉದ್ದಂಡ=ಹೆಚ್ಚಿನ ಬಚ್ಚೇರಿಗಂಗಳು=ಎಂದು ಸೆರೆಯಂತಹ ಕಣ್ಣುಗಳು ಅಂದರೆ ವಿಶಾಲನೇತ್ರಗಳು.

ವಿ. ಸಂ:— ಜನ್ಮಋಕ್ಷ......ಮಣವು=ಗಂಡುಹೆತ್ತು ನಾಲ್ಕನೆಯ ತಿಂಗಳಲ್ಲಿ ತಾಯಿಯು ದೇವದರ್ಶನಕ್ಕೆ ಹೊರಹೊರಡುವದೊಂದು ನಿಯಮ. ಅಲ್ಲದೆ ಆ ತಿಂಗಳಲ್ಲಿ, ಕೂಸಿನ ಜನ್ಮ ನಕ್ಷತ್ರ ಕೂಡಿದ ದಿವಸ, ದೇವದರ್ಶನವೆಂದು ಮತ್ತೊಂದು ನಿಯಮ. ಪಂಕಜಾಕ್ಷ......ಕಾಳಿಂದಿಯಲ್ಲಿ=ಯಮುನಾನದಿಯಲ್ಲಿ ಶ್ರೀಕೃಷ್ಣಗೆ ಯಶೋದೆಯು ಎರೆದಳು. ಪದ್ಯಗಳು ೭೩. ಭೋಗ ಷಟ್ಪದಿಯಂತಹ ಚರಣಗಳು ಈ ಪದದಲ್ಲಿವೆ.

---

## ೧೦

ರಾಗ ಕನ್ನಡ ಗೌಳ—ತಾಳ ಜಕ್ಕಣಿ.

ಏತತ್ಪೂರ್ವದಿ ಮಧುರೆಲಿ । ಮಹಾ ।
ಪಾತಕಿ ಕಂಸಯೋಚನೆಯಲ್ಲಿಹಾ ॥
ಪೂತೆ ದೇವಕಿ ಗರ್ಭಜಾತರ । ತಾ ।
ಘಾತಿಸುವೆನೆಂಬ ಸತ್ವರಾ ॥ ೧ ॥

ವಸುದೇವದೇವಕಿಯಿಬ್ಬರ । ಶೃಂಖ ।
ಳಿಸಿ ಉಳಿದಾ ಶೌರಿ ಹೆಂಡರ ।

ಬಸಿರು ಪಲ್ಲಟಿಪ ಅಂಜಿಕೆಯುಲ್ಲಿ । ಆ ಅ ।
ರಸಿ ರೋಹಿಣಿಯುಸಿಟ್ಟ ದೂರಿಲಿ ॥ ೭ ॥

ವರರೋಹಿಣಿ ಗರ್ಭಿಣಿ ಧನ್ಯೆ ಶ್ರೀ ।
ಪುರುಷೋತ್ತಮನವತಾರದ ಮುನ್ನೆ ॥
ವರಗೋಕುಲದಿ ತ್ರಿಮಾಸಕೆ । ಹರಿ ।
ಗ್ಹರಿಯು ಪುತ್ರನ ಪಡೆದಳು ಆಕೆ ॥ ೩ ॥

ಪೂರಣೇಂದು ಕಳೆಯು ಶ್ರೀಬಲಭದ್ರ । ಸಾ ।
ಸಿರಫಣನವತಾರಾ ಗುಣಸಾಂದ್ರಾ ॥
ವರ ಶುಕ್ಲಕೇಶಾವೇಶನುಗಡ । ನಿತ್ಯ ।
ಹರುಷದಿ ಬೆಳೆದರಿಬ್ಬರು ಗಡ ॥ ೪ ॥

ರೋಹಿಣಿ ದೇವಕಿ ವಸುದೇವ । ಮುನ್ನೆ ।
ಮಹಾ ತಪವ ಮಾಡೆ ವಾಸುದೇವ ॥
ಶ್ರೀಹರಿ ಪ್ರಸನ್ವೆಂಕಟಕೃಷ್ಣ । ಸೇವೆ ।
ಗೈ ಹಿರಿಯನು ದ್ವಿತಿಯಂಗೇಷ್ಟಾ ॥ ೫ ॥

ಶಬ್ದಾರ್ಥ:— ಶೃಂಖಳಿಸಿ=ಬೇಡಿಗಳನ್ನುಹಾಕಿ. ಪಲ್ಲಟಿಪ=ಅದಲುಬದಲುಮಾಡುವ. ಮುನ್ನೆ=ಮೊದಲೇ. ಗುಣಸಾಂದ್ರಾ=ಅನಂತಗುಣಗಳಿಂದ ಕೂಡಿದವನು.

ವಿ. ಸಂ.:— ಶೌರಿ......ಅಂಜಿಕೆಯುಲ್ಲಿ=ವಸುದೇವದೇವಕಿಯರಿಬ್ಬರನ್ನು ಸೆರೆಮನೆಯುಲ್ಲಿಟ್ಟರೂ ಜೀರೆ ಹೇದರ ಬಸಿರಿನಲ್ಲಿ ಹೆಚ್ಚುಕಡಿಮೆಯಾಗಿ ತನ್ನ ವೈರಿಯು ಉಳಿಯಬಹುದೆಂದು ಕಂಸನಿಗೆ ಬೆದರಿಕೆಯು. ಶುಕ್ಲಕೇಶವೆಂಬದು ಪರಮಾತ್ಮನ ಅಂಶಾವತಾರವು. ಕೃಷ್ಣಕೇಶವೆಂಬದು ಪೂರ್ಣಾವತಾರವು. ಮೊದಲಿನ ಅಂಶಾವತಾರದಾವೇಶವುಳ್ಳವನು ಕೇಶದೇವರ ಪೂರ್ಣಾವತಾರನಾದ ಬಲರಾಮನು. ಪದ್ಯಗಳು ೭೮. ಇವು ಸಾಂಗತ್ಯವೃತ್ತದವು.

---

೧೧

ತೆಲಗ ಕಾಂಬೋದಿ ರಾಗ — ಅಟ್ಟತಾಳ

ಈ ತಮ್ಮನೆ ಪರಬೊಮ್ಮ । ಈ ತಮ್ಮನ ಮಗನೇವೆ ಬೊಮ್ಮ ॥ ಪಲ್ಲ ॥
ಒಮ್ಮಾನ್ನೊಮ್ಮೆ ಅಮ್ಮಿಯುಣುತಾಕಳಿಸಿದ ।

ರಮ್ಯ ವದನದಿ ಕಂಡಳು ತಾನ್ಯಶೋದಾ ॥
ಸಮ್ಯಸ್ತ ಭುವನ ಕಂಡಳಾಶ್ಚರ್ಯದ ।
ಬೊವ್ಮಾಂಡದೊಳಗಣ ಹೊರಗಣ ಸ್ಥಿತಿಯು ॥ ೮ ॥

ಬ್ರಹ್ಮೇಶೇಂದ್ರರವಿಮುಖ್ಯ ನಿರ್ಜರರಾ ।
ಸಮುದ್ರಹಕಧಿಕ ದ್ವೀಪಗಳ ವಿಸ್ತಾರಾ ॥
ತಮ್ಮಾನಂದಮಯ ಸ್ವರೂಪವನು ।
ರಮ್ಮೆಯರಸ ತಾಯಿಗೆ ತೋರಿದನು ॥ ೯ ॥

ಅಮ್ಮ ಕಣ್ಮುಚ್ಚಿ ಬೆದರಿದಳು ತಾನು ।
ತಾ ಮತ್ತೆ ಬಚ್ಚಿಟ್ಟನು ಪ್ರಪಂಚವನು ॥
ಅವಮ್ಮ ಅಮ್ಮೆಯೆಂದು ಮಾಯದಳಿದನು ।
ಸುಮ್ಮನಸರನಾಳ್ವ ಸರ್ವಜ್ಞ ತಾನು ॥ ೩ ॥

ಮಗನ ಮಾಯದಿ ಮೋಹಿಸಿದಳು ಗೋಪೆಮ್ಮ ।
ಮಗುವೆ ಬಾಯೆಂದು ಲಾಲಿಸಿದಳಮ್ಮಮ್ಮ ॥
ಜಗದೀಶ್ವರನ ತನ್ನ ತೊಡೆಯ ಮೇಲಿಟ್ಟು ।
ಬಗೆಬಗೆಯಾಡಿಸಿದಳು ಮುದಬಟ್ಟು ॥ ೪ ॥

ತಾಯಿಯ ತೊಡೆಯ ಮೇಲಾಡುವ ಪಸುಳೆ ।
ಶೈಲಕೂಟದ ಭಾರದಂತಾಗೆ ಅಬಲೆ ॥
ಆಯಾಸದಿಂದಿಳಿಗಿಳುಹಿದಳಾಕೆ ।
ವಾಯುಚಕ್ರೋತ್ಪಾತವು ಬರಲಿಕ್ಕೆ ॥ ೫ ॥

ಏನಾಯಿತು ಮಗಗೆನುತಂಜುತಿರಲು ।
ಶ್ರೀನಾಥಗಳುಕಿಲ್ಲ ಕುಳಿತ ಜಡವೊಳು ॥
ಹೀನ ತೃಣಾವೃತ್ತನವ ಕಂಸಭೃತ್ಯ ।
ತಾನೆತ್ತಿ ಒಯ್ದನು ಅಣುಗನಾ ದೈತ್ಯ ॥ ೬ ॥

ಘನಚಕ್ರವಾತದೊಳವನಂಜಿಸುತ ।
ತನಯನ ವೈದಿರಲಂಜುತ ಅಳುತ ॥

ವನವಿಲ್ಲದ ಮೀನದಂತಾವು ವತ್ಸ- ।
ವನು ಕಾಣದಂತೆ ಮರುಗಿದಳತ್ಯಂತ ॥ ೭ ॥

ಖಳಗಂತರಿಕ್ಷದಿ ಮಾಡಿದ ಶಿಕ್ಷಾ ।
ಇಳೆಯ ಮ್ಯಾಲೆ ಕೆಡವ್ಯಾತನ ವಕ್ಷಾ- ॥
ದಲಿ ಆಡುತಿದ್ದನಿರುದ್ಧಾಂಬುಜಾಕ್ಷಾ । ಅ-
ಚಲದಂತೆ ಬಿದ್ದನು ಖುಕ್ಷಾಂಕ ರಕ್ಷಾ ॥ ೮ ॥

ಹಿಂಡು ಗೋಪರು ಇದ ಕಂಡಾಶ್ಚರಿಯದಿ ।
ಪುಂಡರೀಕಾಕ್ಷನ ಕೊಂಡಾಡಿ ಸುಖದಿ ॥
ಗಂಡ ಹೆಂಡರು ಮಗನಪ್ಪಿದರಾಗ ಉ ।
ದ್ದಂಡ ಉತ್ಪಾತ ಗೆಲಿದನು ರಂಗ ॥ ೯ ॥

ಅಹೋ ಪಾಪಿಯಿಂದು ಹತನಾದನೆಂದು ।
ಮಹಾವಿಸ್ಮಯೆಂದು ವ್ರಜಾಂತಸ್ಥರಂದು ॥
ಬಹು ಪುಣ್ಯ ನಂದಯಶೋದೆಯದೆಂದು ।
ಅಹಲ್ಹಾದವಾರ್ಧಿಲೋಲಾಡಿದರಂದು ॥ ೧೦ ॥

ಸೃಷ್ಟ್ಯಾದಿ ಕಾರಣಗಚ್ಚರಿಯುಲ್ಲಾ ।
ಶಿಷ್ಟಜನಪ್ರತಿಪಾಲ ಶ್ರೀನಲ್ಲಾ ॥
ದುಷ್ಟಕುಲಾಂತಕ ಪ್ರಸನ್ವೆಂಕಟಲೀಲಾ । ವಿ-
ಶಿಷ್ಟಾನಂದಸಮುದ್ರಕಲ್ಲೋಲಾ ॥ ೧೧ ॥

ಶಬ್ದಾರ್ಥ:— ತಳಿ=ಹಾಕು. ಸುಮ್ನನಸರು=ದೇವತೆಗಳು. ಸಸುಳೆ=ಕೂಸು. ಕೂಟ= ಶಿಬಿರ. ವಾಯುಚಕ್ರ=ಸುಂಟರಗಾಳಿ. ಅಳುಕು=ಕೇಡು. ಅಣುಗ=ಚಿಕ್ಕಮಗು. ವನ=ನೀರು. ರುಕ್ಷ=ಕ್ರೂರ. ರಕ್ಷಾ=ರಕ್ಕಸನು. ಉದ್ದಂಡ=ಭಯಂಕರ, ದೊಡ್ಡ. ವ್ರಜ=ಗೋಕುಲ. ಅಚ್ಚರಿ= ಆಶ್ಚರ್ಯ. ನಲ್ಲ=ಗಂಡ.

ವಿ. ಸಂ.:— ಗಿರಿಯಶಿಖರದಂತೆ ಭಾರನಾಗಲು ಯಶೋದೆಯು ಕೃಷ್ಣನನ್ನು ಕೆಳಗಿಳು ಹಿದಳು. ಆಗ ದೊಡ್ಡ ಬಿರುಗಾಳಿಯು ಬಿಟ್ಟಿತು. ಸಕಲ ಭುವನಗಳಲ್ಲಿಯೂ ಯಾತರಿಂದಲೂ ಅಂಜಿಕೆಯಿಲ್ಲದಿದ್ದರೂ ಕೂಸಿಗೇನಾಯಿತೋ ಎಂದು ತಾಯಿಯು ಬೆದರಿದಳು. ರುಕ್ಷಾಂಕರಕ್ಷಾ=

ಕ್ರೂರಕಾರ್ಯಗಳೇ ಗುರುತಾಗುಳ್ಳ ರಾಕ್ಷಸನು, ಅಂದರೆ ಕ್ರೂರಕಾರ್ಯಗಳಲ್ಲಿಯೇ ರತವಾಗಿರುವದು ರಾಕ್ಷಸರ ಸ್ವಭಾವವು. ಆಹ......ಡಿದರು=ಆನಂದ ಸಮುದ್ರದಲ್ಲಿ ಈಸಾಡಿದರು. ಸೃಷ್ಟ್ಯಾದಿ......ಯಲ್ಲ=ಈ ಜಗತ್ತನ್ನೇ ಹುಟ್ಟಿಸುವಂಥವನಿಗೆ ಯಕಃಶ್ಚಿತ ರಾಕ್ಷಸನ ಸಂಹಾರವು ಆಶ್ಚರ್ಯವಲ್ಲ. ಪದ್ಯಗಳು ೮೯. ಸಾಂಗತ್ಯವೃತ್ತದಂಥವು.

೧೨

ಮೆಚ್ಚುಬಾಹುಲಿ ರಾಗ. — ಏಕತಾಳ.

ಲಲಿತ ಲೀಲೆಯ ತೋರುವೆನೆಂದು ತಾ ।
ಬಲನಿಂದ ಕೂಡಿ ಭರತಬಂಧು ॥
ಬೆಳೆದಂತೆ ತೋರಿ ಗೋಕುಲದೊಳಗೆ ।
ಎಳೆ ಗೆಳೆಯರಿಂದವ ಬಲುಬ್ಯಾಗೆ ॥ ೧ ॥

ನವನೀತಸಾರನಾದವ ಚೋರ ।
ನವಯುವತಿಯರಿಗೆ ಮನೋಹರಾ ॥
ಅವರವಯೋಗ್ಯತೆಯನುಸಾರಾ ।
ಸವಿದೋರಿದಾ ನಂದಕುಮಾರಾ ॥ ೨ ॥

ಕೆಲವು ಗೋಪಿಯರತಿ ಮುದ್ದಿಪರು ।
ಕೆಲವು ಗೋಪಿಯರೊಮ್ಮೆ ಕ್ರುದ್ಧಿಪರು ॥
ಬೆಳದಿಂಗಳ ನೀಲ ಮೈಯವರು ।
ಚಲುವಿಕೆಯಲಿ ಥಳಥಳಿಸುವರೂ ॥ ೩ ॥

ವೀರ ಯಾದವರ ಪುರೋಹಿತನು ।
ಶೌರಿ ಕಳುಹಲಲ್ಲಿಗಾಗಾತನು ॥
ಧೀರ ಮುನೀಂದ್ರ ಗರ್ಗನುಭಯರಿಗೆ ಕ್ಷ- ।
ತ್ರೇರ ಸಂಸ್ಕಾರ ಮಾಡಿದನಾಗೆ ॥ ೪ ॥

ನಿನ್ನ ಮಗನು ಸಾಕ್ಷಾದ್ವಿಷ್ಣು ।
ನಿನ್ನ ಪುಣ್ಯಫಲತಾಯಿಷ್ಟು ॥
ನಿನ್ನ ಮಗನೆಂಬುವ ಮೋಹವ ಬಿಡು ॥

ಧನ್ಯನಾದೆ ಗೋಪತಿ ಕೇಳು ॥೫॥

ಈತ ಶೂರಜ ದೇವಕಿಜಾತಾ ಅ- ।
ಜಾತಗೆ ಜಾತನೆಂಬುದು ಮಿಥ್ಯಾ ॥
ಈತನಿಂದ ಸರ್ವಭೂತಕೆ ಸೃಷ್ಟಿ ।
ಈತನೆ ಭುವನವ್ಯಾಪ್ತನು ಪುಷ್ಟಿ ॥೬॥

ಈತನಾರಾಧಿಪಬೊರ್ಮ್ಮಾದಿಕರು ।
ಈತ ಪ್ರಸನ್ವೆಂಕಟ ಜಗದ ಗುರು ॥
ಈ ತೆರ ಉಪದೇಶಿಸಿ ನಡೆದಾ ।
ಆತುರದಲಿ ತನ್ನ ಸ್ಥಾನಕೆ ಹೋದಾ ॥೭॥

ಶಬ್ದಾರ್ಥ:— ನವನೀತ=ಬೆಣ್ಣೆ. ಅಜಾತ=ಹುಟ್ಟಿಲ್ಲದವ. ಮಿಥ್ಯಾ=ಸುಳ್ಳು.

ವಿ. ಸಂ.: — ಬೆಳದಿಂಗಳನೀಲವರ್ಣಯುವರು=ಬಲರಾಮಕೃಷ್ಣರು. ನಿನ್ನ......ಯಿಷ್ಟು ವಿಷ್ಣುವೇ ಮಗನಾಗಿ ಹುಟ್ಟುವಷ್ಟು ನಿನ್ನ ಸಾಧ್ಯವವಿರುತ್ತದೆ. ಪದ್ಯಗಳು ೯೬. ಸಾಂಗತ್ಯವೃತ್ತವು.

---

## ೧೩

### ಮೋಹನಕಲ್ಯಾಣಿ ರಾಗ. — ಏಕತಾಳ.

ಕರಚರಣಂಗಳ ಸ್ಪರುಶದಿ ಗೋಷ್ಠವ । ಪರಮ ಪವಿತ್ರವ ಮಾಡಿ । ಸಂ-
ಚರಿಪರು ನಲಿನಲಿದಾಡಿ ಶ್ರೀ । ಹರಿಬಲರೀರ್ವರು ಕೂಡಿ ।
ಹರಿಹರಿದೈದಿ ಕೆಸರಿನಲಿ ಚಿಲಿಪಿಲಿ । ಬರಿವೈಯ್ಯರ್ಭಕರ ನೋಡಿ
॥೧॥

ಅಕಟಕಟೆನ್ನುತ ಸಖಿ ರೋಹಿಣಿ ಗೋ । ಪಿಕುಮಾರರನಪ್ಪುವಳು । ಬಾ-
ಲಕರ ಕೆರಗಿಲೊರಸುವರು ಅವರ್ಮುಖವ ನೋಡಿ ನಗುತಿಹರು ।
ಸುಖಿಪೂರ್ಣರು ಜನನಿಕರಾಗ್ರದಿ ತಾವ್ । ಕಳಕಳ ನಗುತಿಹರು
॥೨॥

ಹರಿ ತಾಯ್ ನಿರಿಯಲಿ ಹರುಷದಿ ನಿಂದು ಚ । ಪ್ಪಿರಿಪಮ್ಮಿಯನುಂಬು
ವನು ತನ್ನ-

ಕಿರಿನಗೆ ಜೊಲ್ಲಾಯಿಯನು ಬಾಯ್ । ದೆರೆಯೆನೆ ಪಲ್ತೋರುವನು ।
ಪರಮಪುರುಷ ಪಿತೃರಿಗುಪಕರಿಸುತ । ಚಿರಸುಖನಂ ಬೀರುವನು
॥ ೩ ॥

ತನುಯುರ ಉಲುಹಿಲಿ ಮನೆಗೆಲಸಂಗಳು । ಇಸಿತು ನಡೆಯಲಿಲ್ಲಾಗ । ಆ-
ಜನನೇರು ಮೋಹಿಪರಾಗ ತಮ್ಮ । ದಿನ ತಕ್ಕಾಟದಲೀಗ
ಅಣುಅಣು ಕರಿಶಾವಕದಂದದಿ ರಿಂ । ಖಣವಿಡುವರ್ ಬ್ಯಾಗ ಬ್ಯಾಗ
॥ ೪ ॥

ಇರುಕಳುಪಶು ನೀರುರಿಗಂಜರು ಕ್ಷಣ । ಕ್ಷಣಕ್ಹರಿದಾಡುವರಲ್ಲಿ । ಅಸಿ-
ಯರು ಹಿಡಿಹಿಡಿತಹರಲ್ಲಿ ತಾ । ಯರಿಗೊಪ್ಪಿಪರು ನಗುತ್ತಲಿ । ಎಳೆ
ಗರುಗಳ ಬಾಲವ ಜಿಗಿಜಿಗಿದೆಳೆ । ವರು ನಡೆವರು ಆರ್ಥಿಯಲಿ
॥ ೫ ॥

ಪುಚ್ಛವಿಡಿಯೆ ಬೆದರ್ವತ್ಸಗಳೋಡಲು । ಅಚ್ಯುತ ಕೂಗಿ ಅಂಜುವನು । ಜನ-
ಕಚ್ಛರಿಯುವ ತೋರುವನು ತಾ । ಸ್ವೇಚ್ಛೈಕಲೀಲಾನ್ವಿತನು ।
ಒಚ್ಚೆರೆಗಂಗಳ್ಕಶೋದೆಯು ಬಿಗಿದಪ್ಪೆ । ಬೆಚ್ಚಿದಂತಿಹ ಕೇಶವನು
॥ ೬ ॥

ಸರಿಯು ತರಳರೊಳು ಹಿರಿಯುಗ್ರಜನೊಳು । ಪರಿಪರಿ ಕ್ರೀಡೆಯನಾಡೆ : ಅಲ್ಲಿ-
ಹರಿಣಾಕ್ಷಿಯರ್ಬಂದು ನೋಡೆ ಘನ । ಹರುಷದಿ ರಂಗನಕೂಡೆ ।
ಸರಸವನಾಡಿ ಸೋದರಮಾವನಣುಗೇರು । ಉರುಸುಖವಾರ್ದಿಲೀಸಾಡೆ
॥ ೭ ॥

ತನುಮನ ಸೂರಿಯು ಕ್ಷಣಕ್ಷಣಕಿತ್ತರು । ವನಜನಾಭನ ಪದರತರು । ಆ-
ಮನಸಿಜಮಾರ್ಗಣಹತರು ಮು । ತ್ತಿನಿಗೋಲನ ಸನ್ಮತರು ।
ಅನುದಿನ ನಂದನ ಸುತನ ನೆನಹಿಸಲಿ । ಮುನಿಪರಿ ಧ್ಯಾನಂಗತರು
॥ ೮ ॥

ತೊದಲು ಮೃದುಲನುಡಿ ವದಿಸುವ ಮೆಲ್ಲನೆ।ವೇದವೇದಾಂತವಿಖ್ಯಾತಾ ।ತ-
ನ್ನುದರದಿಂದಜನ ಪೆತ್ತಾತ ಮೃದು । ಮೃದು ಪದನ್ಯಾಸವ ಕಲಿತ ।
ಹದಿನಾಲ್ಕು ಭುವನವ ವದನದಿ ತೋರಿದ ಪದಚೇಷ್ಟಕ ಹೃನ್ನಾಥ
॥ ೯ ॥

ಪಟ್ಟಸಾಲಿಯುಲಿ ದಟ್ಟಸಾಲಿಕ್ಕಿಸಿ । ದಟ್ಟಡಿ ನೋಡಿ ಹಿಗ್ಗುವಳು ।ನನ್ನ-
ಪುಟ್ಟ ದಣಿದೆಯೆಂಬುವಳು ಮೊಲೆ। ಗೊಟ್ಟುಮೈಯ್ಯ ತಡವುವಳು । ತ-
ನ್ನುಟ್ಟ ಸೀರೆಯು ಮೇಲ್ ಕೃಷ್ಣನ ಕುಣಿಸಿದಳ್ । ಅಟ್ಟಹಾಸದಿ ಯಶೋ
ದೆಯಳು ॥ ೧೦ ॥

ಇಂದುವದನೆ ತನ್ನ ಕಂದಗೆ ಮೊಲೆಗೊಡ । ಲೊಂದಮ್ಮಿಯುಂಡು ।
ಚಪ್ಪರಿವ । ಮ-
ತ್ತೊಂದಮ್ಮಿಲಿ ಕೈಯಿಡುವ ಗೋ । ವಿಂದ ಮೋರೆಯು ನೋಡಿನಗುವ ।
ನಂದನ ರಾಣಿಯುನಂದಕೆ ಸರಿಯಿಲ್ಲ। ಹಿಂದಣ ಸುಕೃತಸುಭಾವಾ
॥ ೧೧ ॥

ಕಾಲ ನಾಮುಕನಿಗೆ ಕಾಲ್ಮ್ಯಲ್ಮಲಗಿಸಿ । ಪಾಲ್ಬೆಣ್ಣೆಯ ನೀಡುವಳು ।
ತ್ರೀ-
ಲೋಲಗೆ ನಿದ್ರೆ ಬೇಡುವಳು ತೊ । ಟ್ಟಿಲೋಳಿಟ್ಟು ಜೋಗುಳಾಡು
ವಳು ।
ಭಾಳ್ಬನ್ ಬರುತಿವೆ ಕಂದ ಮುಕುಂದ । ಬಾಲಕ ಮಲಗೆಂಬುವಳು
॥ ೧೨ ॥

ಬಾಲಕ್ರೀಡೆಯುಲಜಾಂಡವನಾಳುವ । ಶ್ರೀಲಲನೆಯು ವಲ್ಲಭನು । ತಾ-
ಓಲಾಡಿ ಆನಿಯಾಡುವನು ಚ । ಪ್ಪಾಳಿ ಹೊನ್ನುಗುಬ್ಬಿಯಾಡುವನು ।
ವಿಶ್ವ-
ಪಾಲಕ ಶಿಕ್ಷಕ ಜೋಗಿಗೆ ಅಂಜಿ ಗೋ । ಪಾಲರ ಬಾಲನಂತಿಹನು
॥ ೧೩ ॥

ತೋಳನ್ನಾಡುವ ತೋಳ್ಜಗದಂಬಿಯು । ಲಾಲಿಸುವ ತಲೆಗಿಂಬು । ಅಂಬೆ-
ಗಾಲಿನ ಶವಕ ವಿಡಂಬು ಮ । ತ್ತಾಲದೆಲೆಯು ಲಯುವಂಬು ।

ಆಲಯುದವನಿಗೆ ತೊಟ್ಟಿಲನಿದ್ರೆಯು । ಹೇಳುವದೇ ಭ್ರಮೆಗಿಂಬು
॥ ೧೪ ॥

ಆ ಪ್ರಳಯದಿ ದುರ್ಗಾಪ್ರಾರ್ಥಿಸಿ ಶ್ರುತಿ । ರೂಪದಿ ಕಡೆಗಾಣಳಂತೆ । ಅ–
ದೇ ಪರಬ್ರಹ್ಮನಿವನಂತೆ ಸುರ । ತಾಪಸರಿಗೆ ಪ್ರಭುವಂತೆ ।
ಶ್ರೀಪ್ರಸನ್ವೆಂಕಟ ಉಪನಿಷದ್ವೇದ್ಯಗೆ । ಗೋಪಿಯು ಜೋಗುಳವಂತೆ
॥ ೧೫ ॥

ಶಬ್ದಾರ್ಥ:— ಗೋಷ್ಠ=ಗೋಕುಲ. ಬಲ=ಬಲರಾಮ. ಐದಿ=ಹೋಗಿ. ನಿರಿ=ನೀರಿಗೆ. ಬೀರು=ಕೊಡು. ಉಲುಹು=ಗದ್ದಲ. ಇನಿತು=ಸ್ವಲ್ಪಾದರೂ. ಶಾವಕ=ಮರಿ. ರಿಂಖಣ=ಅಂಬೇಗಾಲು. ಅಸಿಯರು=ಸುದರಿಯರು. ಬೆಚ್ಚು=ಬೆದರು. ಉರು=ಹೆಚ್ಚಾಗಿ. ವಾರ್ಧಿ=ಸಮುದ್ರ. ಮಾರ್ಗಣ=ಬಾಣ. ಇನಿಗೋಲ=ಕಾಮ. ಹೃನ್ನಾಥ=ಹೃದಯದ ಒಡೆಯ. ತಡವು=ಕೈಸವರು. ಜೋಗಿ=ಬಾವಾ, ಗುಮ್ಮ. ತವಕ=ಆತುರ. ವಿಡಂಬ=ಬೆಡಗು. ಇಂಬು=ಅವಕಾಶ, ಸ್ಥಳ.

ವಿ. ಸಂ.:— ಮುನಿ……ತರು=ಮುನಿಗಳು ಹೇಗೆ ಪರಮಾತ್ಮನ ಧ್ಯಾನದಲ್ಲಿ ರತರಾಗುವರೋ ಹಾಗೆ ಗೋಪಿಯರು ಕಾಮನ ಕೂರಂಬುಗಳಿಂದ ಹತರಾಗಿ ಸದಾ ಕೃಷ್ಣನ ಧ್ಯಾನವನ್ನೇ ಮಾಡುತ್ತಿದ್ದರು. ಮತ್ತಾಲಯ……ವನಿಗೆ=ಪ್ರಳಯಕಾಲದಲ್ಲಿ ಎಲ್ಲವೂ ಜಲಮಯವಾಗಿ ಪರಮಾತ್ಮನು ಆಲದೆಲೆಯ ಮೇಲೆ ಮಲಗುವನು. ಅದೇ ಅವನಿಗೆ ಆ ಕಾಲಕ್ಕೆ ಆಲಯವು. ಶರ ಷಟ್ಪದಿಯಂತಹ ಚರಣಗಳು. ಪದ್ಯಗಳು ೧೧೧.

---

## ೧೪

ಭೈರವೀರಾಗ. —— ತ್ರಿವಿಡತಾಳ.

ಜೋ ಜೋ ನಂದನ್ನ ಕಂದ ಗೋವಿಂದ ।
ಜೋ ಜೋ ಜೋ ಜೋ ಸದ್ಗುಣ ಸಾಂದ್ರಾ ॥
ಜೋ ಜೋ ನಿಗಮಾನಂತಸುವೇದ್ಯ ।
ಜೋ ಜೋ ಜೋ ಜೋ ಭುವನೈಕಾದ್ಯ ॥ ಜೋ ಜೋ ॥ ॥

ತೃವಿ ತೃವಿ ವಟಪತ್ರಶಯನ ಕಾಲಾತ್ಮಾ ।
ತೃವಿ ತೃವಿ ತೃವಿ ತೃವಿ ಶ್ರೀಪರಮಾತ್ಮಾ ॥

ತೃವಿ ತೃವಿ ಚತುರ್ದಶ ಭುವನಾಂತರಾತ್ಮಾ ।
ತೃವಿ ತೃವಿ ತೃವಿ ತೃವಿ ಶ್ರೀಪರಮಾತ್ಮಾ ॥ ಜೋ ಜೋ ॥ ೨ ॥

ಲಾಲಿ ಪರಾತ್ಪರ ಬ್ರಹ್ಮ ಪರಮಾತ್ಮಾ ।
ಲಾಲಿ ಲಾಲಿ ಕ್ಷೀರಾಂಬುಧಿಧಾಮಾ ॥
ಲಾಲಿ ವೈಕುಂಠಮುಕ್ತಜನಗೇಯಾ ।
ಲಾಲಿ ಲಾಲಿ ಅಮೃತಮಯಗೇಹಾ ॥ ಲಾಲಿ ॥ ೩ ॥

ಹೋಯಿ ಹೋಯಿ ಹಸುಳೆ ಮುದ್ದು ಮಗ್ಗಲ ಮರಿಯೇ ।
ಹೋಯಿ ಹೋಯಿ ಹೋಯಿ ಹೋಯಿ ಅಮರರ ಸಿರಿಯೇ ॥
ಹೋಯಿ ಹೋಯಿ ನಿನಗೊಬ್ಬ ಚೇತನ ಸರಿಯೇ ।
ಹೋಯಿ ಹೋಯಿ ಶ್ರೀಪ್ರಸನ್ವೆಂಕಟ ದೊರೆಯೇ ॥ ಲಾಲಿ ॥ ೪ ॥

ಶಬ್ದಾರ್ಥ:—ನಿಗಮ=ವೇದ. ಪವಿತ್ರ=ಶುಚಿತೆ. ಧಾಮ=ಮನೆ. ಗೇಯ=ಗಾಯನ ಮಾಡಿಸಿಕೊಳ್ಳಲ್ಪಡುವವ. ಗೇಹ=ಮನೆ. ತೃವಿ=ತೊಟ್ಟಿಲತೂಗುವಾಗಿನ ಉದ್ಗಾರ. ಹಸುಳೆ=ಕೂಸು.

ವಿ. ಸಂ:— ನಿಗಮಾನಂತಸುವೇದ್ಯ=ಅನಂತವೇದಗಳಿಂದ ಚನ್ನಾಗಿ ಪ್ರತಿಪಾದ್ಯನು (ಅಪರೂ ಅಗಮ್ಯನೆಂದು ಸೂಚಿತಾರ್ಥ.) ಭುವನೈಕಾದ್ಯ=ಚತುರ್ದಶಭುವನಗಳಲ್ಲಿ ಸರ್ವರಿಗಿಂತಲೂ ಪೂರ್ವದಲ್ಲಿ ಇದ್ದವನ. ಕಾಲಾತ್ಮ=ಕಾಲನಾಮಕ ಪರಮಾತ್ಮ. ಭುವನಾಂತರಾತ್ಮ=ಸರ್ವಲೋಕಗಳಲ್ಲಿ ವ್ಯಾಪಿಸಿದವ. ಪರಾತ್ಪರ=ಉತ್ತಮರಾದ ಬ್ರಹ್ಮಾದಿಗಳಿಗಿಂತ ಉತ್ತಮನಾದವನು. ವೈಕುಂಠ......ಗೇಯ=ವೈಕುಂಠದಲ್ಲಿ ಮುಕ್ತರುಗಳಿಂದ ಗಾಯನಮಾಡಿಸಿಕೊಳ್ಳುವವನು. ಅಮೃತಮಯಗೇಹಾ=ಆನಂದಮಯವಾದ ಗೃಹವುಳ್ಳವನು. ಪದ್ಯಗಳು ೧.೨.೩.

---

## ೧೫

ರಾಗ ರೇಗುಪ್ತಿ—ಅಷ್ಟತಾಳ.

ಧ್ಯಾನವಿದು ಮೌನಿ ಧ್ಯಾನವಿದು ।
ಮಾನವರ್ಗಮೃತದ ಪಾನವಿದು ॥ ಪಲ್ಲ ॥
ಮೊಳೆವಲ್ಲಿಂಗುವ ಜೊಲ್ಲುಬಟ್ಟುಬಾಯಾ ।
ಪಲ್ಲವಾಧರದೆಡೆ ಗಲ್ಲದ ಛಾಯಾ ॥

ಚಲ್ವ ಮುಂದಲೆಯುಲ್ಲಿ ಅಳಕದ ಸೊಂಪು ।
ಚಲ್ಲಿಗಂಗಳು ನೋಡುವರಿಗೆ ಇಂಪು ॥ ೧ ॥
ತಿದ್ದಿದ ಹುಬ್ಬು ಕಾಮನ ಬಿಲ್ಲ ಮಾಟಾ ।
ಸ್ನಿಗ್ಧ ಭಾಲವೇ ಸುಖವಾರಿಧಿ ನೋಟಾ ॥
ಗಲ್ಲವೆಂಬುದು ಸವಿಮುದ್ದಿನ ಗಂಟು ।
ಮುದ್ದಿನ ಮುಖ ವೀಕ್ಷಿಪದ ಜನ ನಂಟು ॥ ೨ ॥
ಕೊರಳೊಳೊಪ್ಪುವ ತ್ರಿರೇಖೆಯು ಸುಂದರ ।
ಉರದ ವಿಸ್ತರ ಶ್ರೀಯುಳಿಗೆ ಮಂದಿರ ॥
ಕರಯುಗ ಕರಿಶಾವಕದ ಶುಂಡಿಲವು ।
ಕರತಳದಂಗುಲಿ ಪೀಯೂಷ ಫಲವು ॥ ३ ॥
ಅತಿ ಅತಿ ಮೃದುಡೊಳ್ಳು ತ್ರಿವಳಿ ಶೋಭೆಯು ।
ಸತತ ಗರ್ಭಿತ ಭೂವನ ನಾಭಿಯು ॥
ಅತುಲ ವರ್ತುಲ ಊರು ಜಂಘೆಗಳಿರವು ।
ಮತಿಗೆ ಮಂಗಳವು ಬುಲ್ಲೀಕಾಯಿ ಲಿಂಗವು ॥ ೪ ॥
ಸಿರಿಗೆ ಸಿಂಗರವಾದರುಣಪಾದಾಬ್ಜ ।
ಹರಿಧ್ವಜಾಂಕುಶ ವಜ್ರಾಂಕಿತ ಪಾದಾಂಘ್ರೀಜ ॥
ಶರಧಿಜಾತನ ಗೆಲುವ ಅಂಗುಲಿ ನಖವು ।
ತರಳನ್ನ ನೋಡಿ ನಲಿಸಳ ಸುಕೃತವು ॥ ೫ ॥
ಅರಳೆಲೆ ತಲೆ ರನ್ನಕುಂಡಲಕರ್ಣ ।
ಕೊರಳ ಪದಕಹಾರ ಕೌಸ್ತುಭಚಿಸ್ಥ ॥
ಸರಪಣಿ ಮಣಿ ಸುಪ್ಪಾಣಿ ಸೂಸರವು ।
ಕರವಲಯ ಉಡಿದಾರ ಕಾಲ್ಪೆಂಡೆ ಪ್ರಭೆಯು ॥ ೬ ॥
ಘಲಿ ಘಲಿ ಘಲಿಕೆಂಬ ಅಂದುಗೆ ಗೆಜ್ಜೆ ।
ಎಳೆ ನೀಲ ಹವಳ ಮುತ್ತಿನ ಹುಲಿಗೆಜ್ಜೆ ॥
ಚೆಲೆಯುಲ್ಲಂಗಕೆ ಚೆಲೆಯಿದ್ದಾಭರಣ ।
ನಳಿನನಾಭನ ಲೀಲೆ ಲೋಕಾನುಕರಣ ॥ ೭ ॥

ಥಳಥಳಿಸುವ ಇಂದ್ರನೀಲದ ಬಿಂಬ ।
ಜಲಧಿಶಯನನಂತ ಜೀವದ ಬಿಂಬ ॥
ನಳಿನಮುಖಿಯು ಗೋಪಿ ನೋಡಿ ದಣಿಯಳು ।
ಲಲಿತ ಶ್ರೀಕೃಷ್ಣಲಾವಣ್ಯಾಬ್ಧಿರತಳು ॥ ೫ ॥
ಗೋಪಿ ನೋಂಪಿ ಭಾಗ್ಯ ನೋಡಿ ನಿರ್ಜರರು ।
ಶ್ರೀಪತಿಯನ್ಮಸ ಬಲು ಕೊಂಡಾಡಿದರು ॥
ಈ ಪರಿ ಶುಕಮುನಿ ಪೇಳ್ದ ಭೂಪತಿಗೆ ।
ಶ್ರೀಪ್ರಸನ್ನವೆಂಕಟ ಕೃಷ್ಣ ಭಕ್ತನಿಗೆ ॥ ೬ ॥

ಶಬ್ದಾರ್ಥ:— ಮೌನಿ=ಮುನಿ. ಮೊಳೆವಲ್ಲು=ಎಳೆಹಲ್ಲು (ದಂತಾಂಕುರ). ಒಗುವ=ಹುಟ್ಟುವ (ಸುರಿಯುವ). ಪಲ್ಲವ=ಚಿಗುರು. ಅಳಕ=ಮುಂಗುರುಳು. ಚಲ್ಲೆಗಂಗಳು=ಚಂಚಲಾಕ್ಷಿಗಳು. ಸ್ನಿಗ್ಧ= ನುಣುಪಾದ. ತ್ರಿವಳಿ=ಹೊಟ್ಟೆಯಮೇಲಿನ ಮೂರು ರೇಷೆಗಳು. ಅತುಳ=ಸರಿಯಿಲ್ಲದ. ಊರು=ತೊಡೆ. ಜಂಘೆ=ಕಣಕಾಲು. ಶರಧಿಜಾತ=ಚಂದ್ರ. ರನ್ನ=ರತ್ನ. ಸುಪ್ಪಾಣಿ=ಆರಿಸಿದ ಮುತ್ತು. ಪೆಂಡೆ=ಗೆಜ್ಜೆಸರ. (ಆಭರಣವಿಶೇಷ). ನೋಂಪಿ=ವ್ರತ.

ವಿ. ಸಂ.:— ಮೌನಿಧ್ಯಾನವಿದು=ಮುನಿಗಳಿಂದ ಸದಾ ಸ್ಮರಣೆಮಾಡಲ್ಪಡಲಿಕ್ಕೆ ಕಾರಣವಾದದ್ದು ಈ ಕೃಷ್ಣನ ರೂಪವು. ಒಗು......ಬಾಯ=ಸುರಿಯುವ ಜೊಲ್ಲು ಮತ್ತು ಬಟ್ಟಿನಿಂದ ಕೂಡಿರುವಬಾಯಿ. ಮೋಕ್ಷದಜನನಂಟು=ಮೋಕ್ಷಾಪೇಕ್ಷಿಗಳಾದಂಥ ಜನರಿಗೆ ಉತ್ತಮನಾದ ಆಪ್ತನಂತೆ ಸಹಾಯಕವಾದದ್ದು. ಕರ......ಫಲವು=ಕೃಷ್ಣನು ಹೆಬ್ಬೆರಳನ್ನು ಬಾಯಿಯಲ್ಲಿಟ್ಟುಕೊಂಡು ಚೀಪುತ್ತಿದ್ದನಾದ್ದರಿಂದ ದಾಸರು ಆ ಕೃಷ್ಣನ ಅಂಗೈಹೆಬ್ಬೆರಳು ಅಮೃತಫಲವೋ ಎಂದು ಉತ್ಪ್ರೇಕ್ಷಿಸಿದ್ದಾರೆ. ಹರಿ......ಭೋಜ=ಆ ಕೃಷ್ಣನ ಕಮಲದಂತಿರುವ ಎರಡು ಕಾಲುಗಳಲ್ಲಿ ಶಂಖ, ಧ್ವಜ, ಅಂಕುಶ, ವಜ್ರ, ಇವುಗಳ ಗುರುತುಗಳು ಇದ್ದವು. ಇವು ಬಹು ಶುಭಪ್ರದಗಳು. ಅನಂತ ಜೀವದ ಬಿಂಬ=ಪರಮಾತ್ಮನು ಬಿಂಬನೆಂತಲೂ ಜೀವವು ಪ್ರತಿಬಿಂಬನೆಂತಲೂ ಸಿದ್ಧಾಂತವು. ಪದ್ಯಗಳು ೧೨೪ ಸಾಂಗತ್ಯವೃತ್ತದಂತೆ.

---

೧೬.

ರಾಗ ಸಾವೇರಿ—ಅಟ್ಟತಾಳ

ನಂದನರ್ಧಾಂಗಿಯು ಬಳಿಗೆ । ಬಂದು ।
ಇಂದು ಮುಖಿಯು ಥಳಿಥಳಿಗೆ । ನಿನ್ನ

ಕಂದಾ ದುರುಳನೆಂಬುವರು । ನಮ್ಮ ।
ಮಂದಿರ ಬಿಡನೆಂಬುವರು ॥ ೧ ॥

ಎಳೆಯನಂತೊಪ್ಪಿದ ತಾಯಿಗೆ । ಪ್ರಾಣ– ।
ಗೆಳೆಯನಂತಪ್ಪಿದವರಿಗೆ ॥
ಲಲಿತಚರಿತನಚಾರಿತ್ರೆ । ಗೋ–
ಪಳಿಯರು ಪೇಳ್ವುದೊಂದರ್ಥೆ ॥ ೨ ॥

ಅನಂತ ಕರ್ಮಾನಂತಾ । ನಿ–
ತ್ಯಾನಂತ ಪೂರ್ಣಾ ಅನಂತ ॥
ಅನಂತ ನಿಗಮಕ್ಕೆ ನಿಲುಕಾ । ಸ–
ದಾನಂತ ಪ್ರಸನ್ವೆಂಕಟ ತೋಕಾ ॥ ೩ ॥

ಶಬ್ದಾರ್ಥ:— ತೋಕ=ಸಣ್ಣಹುಡುಗ.

ವಿ. ಸಂ.:— ಲಲಿತ………ದೊಂದರ್ಥೆ=ಪರಮಾತ್ಮನು ಬಾಲಲೀಲೆಗಳನ್ನು ತೋರಿಸುವದರಲ್ಲಿ, ಪ್ರತಿಯೊಂದು, ಉಚ್ಚವಾದ ಕಲ್ಪನೆಗೆ ಎಡೆಯಾಗಿದ್ದರೂ, ಅಜ್ಞರಾದ ಗೋಪಿಯರು ಆ ಪ್ರತಿಯೊಂದು ಲೀಲೆಗೆ ಏನನ್ನೋ ಬೇರೇ ಅರ್ಥವನ್ನೇ ಮಾಡುತ್ತಿದ್ದರು. ಪದ್ಯಗಳು ೧೨೭. ಸಾಂಗತ್ಯವೃತ್ತದಂತೆ.

---

೧೭

ಪಂತುವರಾಳಿರಾಗ—ಏಕತಾಳ.

ತಾಳಲಾರೆವಮ್ಮಾ ಉಪಟಳವ ನಂದನ್ನ ರಾಣಿ ।
ಹೇಳಬಾರದ ಆಟವನಾಡುವ ॥ ಪಲ್ಲ ॥

ಕೆನೆವಾಲ್ಮೊಸರನು ಮನದಣಿ ಮೆಲುವ ।
ತನಯರ ನಿಕರಕೆ ಉಣಲಿತ್ತು ನಲಿವ ॥
ನಿನ ಮಗ ನಮ್ಮೆಲ್ಲರಣುಗರ ಬಡಿವ ।
ವನಿತೆರಿಗಣಕಿಸಿ ಮನೆಗೋಡಿ ಬರುವ ॥ ೧ ॥

ಎಳೆಗರು ಆವಿನ ಮೊಲೆಯುಣಬಿಡುವ ।
ಗೆಳೆಯರ ಸಹ ಚಪ್ಪಳಿ ಇಕ್ಕಿ ಕುಣಿವ ॥
ಕೆಲೆದೆರ ಕಣ್ಣು ಮುಚ್ಚಿ ಕುಲಿಕಿ ತಾ ನಲಿವ ।
ಪಾಲ್ ಬೆಣ್ಣೆ ಗುಂಡಿಗೆಗಳನೊಡೆಬಡಿವ ॥ ೨ ॥

ಒರಳಿನ ಮೇಲೊಂದೊರಳ ನಿಲಿಸುವ ।
ತರಳರ ಹೆಗಲೇರಿ ಒರಳನಡರುವಾ ।
ಕರದಲಿ ಕೋಲ್ವಿಡಿದುರುಘನಪಾಲ್ದಧಿ ।
ಹರವಿಯನೊಡೆದು ಗವ್ಯಾಮೃತಸುರಿವಾ ॥ ೩ ॥

ನಾರೇರು ನೆರದೀಚೋರನ ಹಿಡಿಯುನೆ ।
ಸಾರಿ ಸಾರಿಗೆ ಘೂತ್ಕಾರನ ಮಾಡುವ ॥
ಮೋರೆಯುಮೇಲುಗುಳ್ದಾರುವ ಹಿಡಿವರೆ ।
ಜಾರುವನಡಗುವ ತೋರುವನೊಮ್ಮೆ ॥ ೪ ॥

ಅಂಧಃಕಾರದ ಮಂದಿರ ಮಣಿಗಣ ।
ದಿಂದ ಪ್ರಕಾಶಿಸಿ ಬಂದ ಗೋಪಾಲಕ ॥
ವೃಂದಕೆ ಗೋರಸ ಚಂದದಿಂದುಣಿಸುವ ।
ಗೊಂವಣಕಿಕ್ಕುವ ತಾಂ ದಣಿಯುಣುವ ॥ ೫ ॥

ಕಂಡಿವನಾಟವ ದಂಡಿಪೆವೆನುತಲಿ ।
ದುಂಡಸಿಯುರು ಬಂದಂಡಲಿದರೆ ಒಳ ।
ಕೊಂಡೆಯನಿಕ್ಕಿ ಪೌಂಗಂಡರ ನಮ್ಮ ಬೆಳ ।
ಕಿಂಡಿಲಿ ಸಿಲುಕಿಸಿ ಪುಂಡನೋಡಿದನಾ ॥ ೬ ॥

ಮೃಷ್ಟಾನ್ನವನಟ್ಟಿಟ್ಟರೆ ವಿಾಸಲು
ಜಟ್ಟಿಗರಾಯಗೆ ಕೊಟ್ಟೇವೆನುತಿರೆ ॥
ಪುಟ್ಟ ಗೋವಳರೊಳು ಕೃಷ್ಣನು ಬಂದ ।
ದೃಷ್ಟಿಗೆ ತೋರದಂತಷ್ಟು ಸವಿದನಾ ॥ ೭ ॥

ಹಟ್ಟಿಯು ದೇವರ ಗಟ್ಟಿ ಹಂಗಡದಲಿ ।
ಕಟ್ಟೆಳೆದೊಯ್ದನು ಬಟ್ಟಬಯಲಿನಲಿ ॥
ಇಷ್ಟೆಯು ದೇವರ ನಿಟ್ಟಹ ಜಗುಲಿಲಿ ।
ವಿಶಿಷ್ಟ ಓಡಿದ ಅಟ್ಟಹಾಸದಲಿ ॥ ೮ ॥

ಕೃಷ್ಣನಾಡುವ ದುಷ್ಟಾಟಿಕೆ ಬಲು ।
ಕಷ್ಟಬಟ್ಟು ಆ ವಿಷ್ಟೆಯು ತೆಗೆದೆವೆ ।
ವಿಷ್ಟಾವೋದ ವಿಶಿಷ್ಟಕಸ್ತೂರಿಗಿಂ ।
ಪುಷ್ಟಾಯಿತು ಇನ್ನೆಷ್ಟು ಸುರುವೆವೆ ॥ ೯ ॥

ಮುದ್ದಿನ ಮೋಹಿಯೊಳಿದ್ದ ಮುಕುಂದನ ।
ಗದ್ದವಿಡಿದು ನಾವ್ ಮುದ್ದನೀಡಿದರೆದೆ ॥
ಲಿಪ್ತ ನಿಜಿಡ ಕುಚ ಹೊವ್ವಪ್ಪಿ ಬಿಡನೌ ।
ಮದ್ದಿಕಾಯಿ ಮಗುವಿಗೆ ಬುದ್ಧಿಯಿದೊಳಿತೆ ॥ ೧೦ ॥

ನಿನಗಿದು ತರವಲ್ಲೆನುತ ಹಿಡಿದರೆ ।
ಕೊನೆವಲ್ಲಿಲಿ ಗಲ್ಲವನು ಕಚ್ಚ್ಯೋಡುವಾ ॥
ದಿನ ದಿನಕೋಜೆಯು ಘನವಾಯಿತು ಚಿಕ್ಕ ।
ವನಿತೆಯರೊಳು ಚುನ್ನ ಕ್ಷಣಕ್ಷಣಕಾಡುವ ॥ ೧೧ ॥

ಕರೆವ ಸಮಯ ರಂಗ ಬರುವನು ಆವ್ಗಳ ।
ತೊರೆದ ಮೊಲೆಯ ಕರವಿಡಿದು ಉಣ್ಣುವನು
ಕರುವೇನೋ ನೀ ಹರಿಯೆಂವರೆ ಬಾಯ್ ।
ತೆರೆದಿಲ್ಲೆಂಬುವ ಬರಿ ಹುಸಿಯುವನು ॥ ೧೨ ॥

ಕರೆದಿಟ್ಟಹ ಬದಿ ನೊರೆ ಹಾಲ್ಗಡಿಗೆಯ ।
ತ್ವರಿತದಿ ಒಯ್ದು ಅಗ್ರಜಗೆ ಕೊಡುವ ।
ಸರಿತೋಕರಿಗಿವ ಉತೆ ಸೂರ್ಯಾಡುವ ।
ಮರಿಗರುಗಳ ತುಪ್ಪಿರಿದೆತ್ತಿರುವ ॥ ೧೩ ॥

ಶಶಿಮುಖಿರುದಯಕೆ ಮೊಸರ ಮಥಿಸುತಿರೆ ।
ಹಸು ಗೋಪರು ಬಲನ ಸಹಿತ ಬರುವ ॥
ನಸುನಗೆ ನಗುತಲಿ ಹೊಸ ನವನೀತವ ।
ಅಸಿಯುರಂಜಿಸಿಕೊಂಡಸುರಾರಿ ಸವಿವಾ ॥ ೧೪ ॥

ಮೊಸಲು ಮುರಿಯುದಿರೋ ಸರ್ವೋತ್ತಮ ।
ಮೋಸಪ್ಪ ದೈವಾಕಾಶದ ಬೊಮ್ಮನು ॥
ಘಾಸಿಯಾಗುವಿಯೆನೆ ಆಕಾಶದವಗೆ ನನ್ನ ।
ಮೊಸಲು ಬುಲ್ಲಿಯು ಲೇಸೆಂದೆನುವ ॥ ೧೫ ॥

ಎಳೆಹಾವಿನ ಮರಿಗಳ ತಂದಬಲೆರ ।
ಗಳಕಿಕ್ಕುವ ನೀವಿಯೊಳು ಬಿಡುವ ಮಂ- ॥
ಗಳ ಮೂರುತಿ ಹೆಂಗಳು ವಸನಂಗಳ ।
ಕಳೆದು ನಿಲ್ಲಲು ಹರಿ ಕಳಕಳನಗುವ ॥ ೧೬ ॥

ಗಡಿಗೆಸಹಸ್ರಗಳೊಡೆವ ನಿರಂತರ ।
ತುಡುಗಿಲಿ ಬಲ್ಲಿದ ಹುಡುಗೇರಕೆಡಿಸಿದ ॥
ಅಡಿಗಡಿಗಡಗುವ ಹುಡುಕಿ ಹಿಡಿದುತರೆ ।
ಮಡದೇರ ಬಡನಡುನಡರೆದೆ ಬಡಿವಾ ॥ ೧೭ ॥

ಒಮ್ಮೆ ನಿನ್ನ ಮಗನ್ನಮ್ಮಲಿ ಕಟ್ಟಿದೆ- ।
ವಮ್ಮಾ ಇವ ಪರಬೊಮ್ಮನೆಂದರಿಯದೆ ॥
ನಮ್ಮ ಮಕ್ಕಳ ನಾವೇ ಮತ್ತೆ ಕಟ್ಟಿದೆ ।
ವಮ್ಮಮ್ಮ ಮೋಹನನಿವನಮ್ಮ ॥ ೧೮ ॥

ಶಿಶುಗಳ ಶಿಖವನು ಪಶುಗಳ ಬಾಲಕೆ ।
ಹೊಸೆದು ಗಂಟನು ಮಿಸುಳಿಸಿ ಕಟ್ಟುವ ॥
ನಸುನಗಿಯಲಿ ನಮುಗುಸುರುನ ನಿಮ್ಮಯ ।
ಹಸುಳರ ಪಡಿಪಾಟಲ ನೋಡೆನುವ ॥ ೧೯ ॥

ನಂದನ ರಾಣಿಯು ಕಂದನೆ ನಿನಗಿದು ।
ಚಂದವೆ ಮಕ್ಕಳ ಅಂದಗೆಡಿಸುವದು ॥
ಎಂದೆನೆ ಕೊಲುದಿಲ್ಲೆಂದೆನುತಲಿ ತಾಂ ।
ಕೊಂದೋಡವೆ ಬಿಡ ಮಂದರಧರನು ॥ ೨೦ ॥

ಕೆನೆ ಕೆನೆ ಮೊಸರನು ದಿನ ತುಡುತಿಂಬನು ।
ನಿನ ತೋಳ್ ಮೊಸರಿಲಿ ಮುಳುಗಿದೆ ಕಳ್ಳ ॥
ಎನಲು ನಮ್ಮೆಳಿಗರು ಮುಳಗಿದೆ ಪಡಗದಿ ।
ದಣಿಹುಡುಕಿದೆ ನಾ ತಿನಲಿಲ್ಲೆಂಬ ॥ ೨೧ ॥

ರಸಭರಿತೋಖಣಿ ಹಸುಳನ ಹುಸಿಗೇಳಿ ।
ಶಶಿವದನೆಯುಮುರ್ಧ್ದಿಸಿ ಅಪ್ಪಿಕೊಂಡರೆ ॥
ಯಶೆವ ನಿರಿಯು ಮ್ಯಾಲ್ ಶಿಶುವರ ಕುಣಿವನು ।
ಆಸಿಯರ ವಸನವ ಬಿಡಿಸಿ ತಾ ನಗುವ ॥ ೨೨ ॥

ಮತ್ತೊಂದಿನ ನಿನ್ನ ಪುತ್ರನ ಕಟ್ಟಿದೆ ।
ವರ್ಥಿಲಿ ನಿನ್ನೆಡೆ ತರ್ತರೆ ನಡುವೆ ಪ್ರ- ॥
ಮತ್ತ ಘೋಳಿಯು ತೆರ ಚಿತ್ರದಿಂದಂಜಿಸೆ ।
ಸತ್ತರ ಬಿಟ್ಟೋಡಿ ಸತ್ತುಳಿವೇವೇ ॥ ೨೩ ॥

ಪುಟ್ಟರ ಚೆವರಿಸಿ ಅಟ್ಟದ ಮ್ಯಾಲ್ ಬೈ- ।
ಚಿಟ್ಟ ಬೆಂಣಿಯು ಚಟ್ಟಿಗೆಗಳ ತೆಗೆ- ॥
ದಷ್ಟನು ಸವಿದನು ಎಷ್ಟು ಮೆದ್ದೆಂದರೆ ।
ಬಟ್ಟಕುಚವಪಿಡಿದಿಷ್ಟೇ ಎನುವ ॥ ೨೪ ॥

ಗಟ್ಟಿದೆಗಳ್ಳನು ಕೃಷ್ಣನೆನುತ ಕೈ ।
ಕಟ್ಟಿದರಂಜದೆ ಬಿಟ್ಟುಕೊಂಡನು ನಮ್ಮ ॥
ಜಟ್ಟಿಗನಾಣೆಯುನಿಟ್ಟೋಡಿದನವ ।
ನಟ್ಟುಳಿ ಘನವಿನ್ನೆಷ್ಟುಸುರುವೆವೆ ॥ ೨೫ ॥

ತಿಳಿತುಪ್ಪಿಟ್ಟ ಬಿಸುಳಿಗೆಯೊಳಗೆ ತನ್ನ ।
ನೆಳಲನು ನೋಡಿದನೆಳೆಯುರರಸನು ॥
ಗೆಳೆಯನೊಬ್ಬಡಗಿಹ ಬಳಗೆನ್ನುತ ಕ ।
ಲ್ಲಿಲಿ ಗಡಿಗೊಡದನು ನಳಿನನಯನನು ॥ ೨೬ ॥

ಹರಿಬಲರೀರ್ವರು ಉರು ಮಾಯಾಕಾರರು ।
ಚಿರರುಚಿರರು ಸುಂದರವರರಿವರು ॥
ಪುರುಷೋತ್ತಮರ ಸುಚರಿತೆಯ ಪೇಳ್ವೆವು ।
ಪರಸನ್ವೆಂಕಟ ಗಿರಿವರನಿಲಯಾ ॥ ೨೭ ॥

ಶಬ್ದಾರ್ಥ:—ಉಪಟಳ=ಕಾಟ. ಪಾಲ್=ಹಾಲು. ಮೆಲು=ತಿನ್ನು. ನಿಕರ=ಸಮೂಹ. ಇತ್ತು=ಕೊಟ್ಟು. ನಲಿ=ಕುಣಿ. ಅರ್ಭಗ=ಬಾಲಕ. ಆವು=ಆಕಳ. ಕೆಲದೇರು =ಹೆಂಗುಸುರು. ಕುಲುಕಿ=ಮೈಕುಣಿಸಿ. ದಧಿ=ಮೊಸರು. ಗವ್ಯಾಮೃತ=ಹಾಲು. ವೃಂದ=ಸಮೂಹ. ಗೋರಸ=ಹಾಲು. ಗೋದಣ=ಗುಂಪು. ದಾಂಡಿಗಿಯರು=ದುಂಡವಾದ ಬಡನಡುವಿನವರು. ಪೌಗಂಡರು=ಹರೆಯದವರು. ಇಷ್ಟಿಯ ದೇವತೆ=ಇಷ್ಟದೇವತೆಯನ್ನು. ಜಗುಲಿ=ಕಟ್ಟೆ. ಪಿಷ್ಮಿಸಿ=ಮಲ ವಿಸರ್ಜನಮಾಡಿ. ಆಮೋದ=ಸುವಾಸನೆ. ಪುಷ್ಟವಾಯಿತು=ಹೆಚ್ಚಾಯಿತು. ಮೋಹಿಯೊಳು ಇದ್ದ=ಮೋಹಕ ರೂಪದಲ್ಲಿದ್ದ. ಹೊದ್ದಪ್ಪಿ=ಹಿಚಿಕಿ. ಓಜೆಯು=ಉಪಟಳ. ಚುನ್ನ=ಅಪಮಾನ, ನಿಂದೆ. ಚುನ್ನವಾಡು=ಮೋಸಗೊಳಿಸು. ಅಗ್ಗರಜ=ಅಗ್ರಜ, ಅಣ್ಣ, ತೋಕ=ಬಾಲಕ. ತುಪ್ಪಿರಿ (ತೂಪಿರಿ) ಥೂತ್ಕಾರ, ಘೂತ್ಕಾರ. ಹಮ್ಮು=ಗರ್ವ. ಶಿಖಿವನ=ಕೂದಲನ್ನು. ವಿಸುಳಿಸಿ=ಕೊಡಿಸಿ. ಸಡಿಸಾಟಲ=ಪೇಚಾಟ. ಪಡಿಗ=ಪಾತ್ರೆ. ಓಖಣಿ=ಮಾತು. ಬೈಚಿಟ್ಟ=ಮುಚ್ಚಿಟ್ಟ. ಜಟ್ಟಿಗರಾಯ=ಗೋವರ ಆರಾಧ್ಯ ದೇವತೆ. ಅಟ್ಟುಳಿ=ಕಾಟ.

ವಿ. ಸಂ.:—ಮೋಸಪ............ಘಾಸಿಯಾಗುವಿಯನೆ=ಕೃಷ್ಣನಿಗೆ ಗೊಲ್ಲತಿಯರು ಬೆದರಿಸುತ್ತಾರೆ. ಕೃಷ್ಣ! ವಾಸಲು ಮುರಿಯಬೇಡೋ! ಮುರಿದರೆ ನೋಡು! ಆ ಆಕಾಶದಲ್ಲಿ ಬೊಮ್ಮ ಇದ್ದಾನೆ! ಮೋಸ ಹೋದೀ ನೋಡು! ಆ ಬೊಮ್ಮ ನಿನಗೆ ಕೆಡಕು ಮಾಡ್ಯಾನು! ನಿನಗದರಿಂದ ಕಷ್ಟವಾದೀತು! ಸಾಂಗತ್ಯವೃತ್ತ ಪದ್ಯಗಳು ೧೩೪.

೧೮

ಮೋಹನ ಕಲ್ಯಾಣಿ ರಾಗ. —— ತ್ರಿವಿಡಿ ತಾಳ.

ಲೀಲೆ ಘನಾ ಹರಿಲೀಲೆ ಘನಾ ಈ ।
ಬಾಲಕನಿವ ಜಗತ್ಪಾಲ ಘನಾ ॥ ಪಲ್ಲ ॥

ಶ್ರೀಲಲನೆಯ ಮತಿಜಾಲಕೊದಗದಿಹ ।
ಮೌಳಿಯು ಚಿದ್ಗುಣಶಾಲಿ ಘನಾ ॥ ಅ. ಪಲ್ಲ ॥

ಅಪ್ರತಿಮಲ್ಲರು ಆ ಗೋಕುಲದಿ ।
ಸುಪ್ರತೀಕನಂತೆ ರಂಜಿಪರು ॥
ತಾ ಪ್ರಾಕೃತ ಅರ್ಭಕರಂತೆ ಲೀಲೆಯು ।
ಆ ಪ್ರಜರಿಗೆ ತಾವ್ ತೋರುವರು ॥ ೧ ॥

ವ್ರಜದ ವೀಥಿಯಲಿ ಆಡುತಓಡುತ ।
ನಿಜ ಸಖರೆದುರು ಮೃತ್ತಿಕೆ ಮೆಲಲು ॥
ಆ ಜನನಿ ಯಶೋದೆಗೆ ಪ್ರಜರ್ಹೇಳಲು ।
ಅಜನಯ್ಯನ ತಾ ಕೇಳಿದಳು ॥ ೨ ॥

ಅಮ್ಮ ನಾ ಮೆಲಲಿಲ್ಲವೆ ಮೃತ್ತಿಕೆಯನು ।
ಸಮ್ಮನೆ ಹುಸಿ ಹೇಳ್ಯಾಡುವರು ॥
ಆ ಮೂಡುವೆ ನೋಡೆಂದು ಪುಟ್ಟ ಬಾಯೊಳು ।
ಬೊಮ್ಮಾಂಡವ ಹರಿ ತೋರಿದನು ॥ ೩ ॥

ತಮ್ಮಂತಸ್ಥ ಬಾಹ್ಯಾಂತಸ್ಥ ತೋರಿ ।
ತಮ್ಮಮ್ಮನು ಬೆದರುವಳೆಂದೆನುತ ॥
ತಾ ಮತ್ತೆ ಬೈಚಿಟ್ಟನು ಬಾಯೊಳು ಪರ ।
ಬ್ರಹ್ಮಾತ್ಮೈಕ ಶಕ್ತ್ಯಾತ್ಮಕನು ॥ ೪ ॥

ಶಾಯಿಯ ವಶದಿ ಮಕ್ಕಳು ಇಹ ಪರಿಯಲಿ ।
ಶ್ರೀಯರಸನು ಮಾಯುವದಳೆದು ॥

ಬಾಯುದೆರೆದು ಅಮ್ಮಿಯು ಚಪ್ಪರಿದುಣ ।
ಲೀಯುಚ್ಚರಿಯುನು ನೆನೆನೆನೆದು ॥ ೫ ॥

ಎನ್ನಯ ಬುದ್ಧಿಯ ಭ್ರಮೆಯೋ ಸ್ವಪ್ನವೋ ।
ಅನ್ನಿಮಿಷರ ಮಾಯಾದ್ಭುತವೋ ॥
ತನ್ನಯ ಸನ್ನುತ ಚಿನ್ನನ ಗುಣಕೀ ।
ರ್ತನ್ನೆಯ ಮಾಡಿದಳೆಂದವ್ವೆ ॥ ೬ ॥

ಎಂದಿನ ತೆರ ಮನೋವಾಕ್ಕಾಯದಿ ಯುದು ।
ನಂದ ವೃಜದವರ ಮೋಹಿಸಿದಾ ॥
ಕಂದನ ಲೀಲಾನಂದಾಂಬುಧಿಯುಲಿ ।
ನಂದಿಸಿದರು ಗೋಕುಲೌಕಸರು ॥ ೭ ॥

ಶ್ರೀಕೃಷ್ಣ ಭಗವಾನ್ ಲೋಕೇಶ್ವರನು ತಾ ।
ನಾಕದ ಜೀವರ ಶೋಕಹರ ॥
ವೈಕುಂಠಾಲಯ ಏಕಾನೇಕ ದಿ– ।
ವಾಕರಕೋಟಿ ನಿಶಾಕರಭಾ ॥ ೮ ॥

ಲೆಕ್ಕಕೆ ನಿಲುಕದ ಲಕ್ಷ್ಮಿಯುರಸನು ।
ಕುಕ್ಕಿಯೊಳಾಳುವ ಭುವನಗಳ ॥
ರಕ್ಕಸರಳಿವನು ಭಕ್ತರ ಬೆಳೆವ ಗೋ– ।
ವರ್ಗಳೊಳಿಹ ಪ್ರಸನ್ವೆಂಕಟನ ॥ ೯ ॥

ಶಬ್ದಾರ್ಥ:— ಘನ=ದೊಡ್ಡ. ಜಾಲ=ಸಮೂಹ. ಅಪ್ರತಿಮಲ್ಲರು=ಸರಿಯಿಲ್ಲದ ಶೂರರು. ಸುಪ್ರತೀಕ=ದಿಗ್ಗಜಗಳಲ್ಲೊಂದು ಗಜ. ಬೈಚಿಟ್ಟನು=ಮುಚ್ಚಿಟ್ಟನು. ಔಕಸರು=ವಾಸಿಗಳು. ನಾಕ=ಸ್ವರ್ಗ. ಭಾ=ಪ್ರಕಾಶ. ಕುಕ್ಕಿ=ಕುಕ್ಷಿ, ಹೊಕ್ಕಳ.

ವಿ. ಸಂ.:— ಶ್ರೀಲಲನೆ.....ಕೊದಗದಿಹ=ಲಕ್ಷ್ಮಿಯು ಎಷ್ಟು ಆಲೋಚಿಸಿದರೂ ತಿಳಿಯದವನು. ಚಿದ್ಗುಣಶಾಲಿ ಮೌಳಿಯ ಲೀಲೆಘನಾ=ಜ್ಞಾನಾನಂದಾದಿ ಗುಣಗಳಿಂದ ಕೂಡಿದವನಾದ ಅತಿಶ್ರೇಷ್ಠನಾದ ಹರಿಯ ಲೀಲೆಯು ಹೆಚ್ಚಿನದು. ತಮ್ಮ ಅಂತಸ್ಥ ಬಾಹ್ಯಾಂತಸ್ಥ ಶೋರಿ=ಹುಡುಗ,

ಒಳಹೊಗಿನ ಸಕಲ ಭುವನಗಳನ್ನು ತೋರಿಸಿ. ಪರಬ್ರಹ್ಮ=(ಚತುರ್ಮುಖ ಬ್ರಹ್ಮನಲ್ಲ, ಸರ್ವೋತ್ತಮ ಬ್ರಹ್ಮನು. ಆತ್ಮೈಕ=ಪರಮಾತ್ಮಾ. ಶಕ್ತ್ಯಾತ್ಮಕನು=ಶಕ್ತಿಸ್ವರೂಪನು ಅಂದರೆ ಸರ್ವಶಕ್ತಿಯುತನು. ಏಕ=ಸರ್ವೋತ್ತಮ. ಅನೇಕ......ಭಾ=ಅಸಂಖ್ಯಾಕರಾದ ಸೂರ್ಯರು ಚಂದ್ರರಿಗಿಂತ ಪ್ರಕಾಶಯುಕ್ತನು. ಸಾಂಗತ್ಯವೃತ್ತದಾತಿ. ಪದ್ಯಗಳು ೧೬೩.

---

೧೯

ದೇಶಾಕ್ಷಿರಾಗ—ಏಕತಾಳ.

ಮೊಸರು ಕಡೆದಳಮ್ಮ ತನಯುಗೆ ಹೊಸದೆಣ್ಣೆಗಾಗಮ್ಮ ॥ ಪಲ್ಲ ॥

ಬಿಸಜಸಖನುದಯನಾಗದ ಮುನ್ನೆ ।
ಶಶಿಮುಖಿ ಗೋಪಿ ತನ್ನನು ಸಿಂಗರಿಸಿ ॥ ಅ. ಪಲ್ಲ ॥

ಹೊಂದಿ ನಿದ್ರೆಯು ದೇವ ನಂದಾದೀಪವ ।
ಅಂದು ಪ್ರಜ್ವಳಿಸುತ ಮಿಂದುಟ್ಟು ॥
ಪೊಂದಟ್ಟೆಯು ಮಣಿವೃಂದದ ಭೂಷಣ ।
ಸಿಂಧೂರ ಸೀಮಂತದಲಿಟ್ಟು ॥ ೧ ॥

ಗಂಧಕಸ್ತೂರಿಯಿಟ್ಟು ಮಂದಿರದೈವಕೆ ।
ವಂದಿಸಿ ಮುಡಿಗೆ ಮಲ್ಲಿಗೆ ಮುಡಿದು ॥
ಇಂದುಕಾಂತಿಯ ಭಾಂಡದಿ ದಧಿ ತುಂಬಿ ।
ಧುಂಧುಂಧುಡುಕೆಂಬ ಚಂದದಲಿ ॥ ೨ ॥

ಪವಳದ ಕಡಗೋಲು ಪಿಡಿದು ಬೆಳ್ಳಿಯ ।
ನವನೇಣುವ ಸುತ್ತಿ ಸ್ವರ ತೆಗೆದು ॥
ಕುವಲಯಪ್ರಿಯಕುಲೋದ್ಭವನ ಗುಣಂಗಳ ।
ಸವಿಯಿಂದೊಲಿದು ಪಾಡುವಳೆಂದು ॥ ೩ ॥

ಶರಚರ ಗಿರಿಧರ ಧರೋದ್ಧರ ನರಹರೆ ।
ವರವಟು ಪರಶುಕರಾ ರಘುಪ ॥

ನರಸಖ ಸುರಮೋಹಕರ ಹರಿಚರ ।
ಸುರವರ ಪರಾತ್ಪರ! ಹರಿಯೆನುತ ॥ ೪ ॥

ಅಡಿಗಡಿಗಲೆಯಲು ಬಡನಡು ಬಳುಕಲು ।
ಮುಡಿಯ ಮಲ್ಲಿಗೆ ಮಾಲೆ ಸಡಿಲುದುರೆ ॥
ನಡುಗಲಿಟ್ಟಿದೆನೊಲೆ ನಿಡುಗಂಧ ಕಸ್ತೂರಿ ।
ಕಡು ಬೆವರಿಡೆ ಕಡಲೊಡೆಯನ ಅನ್ವೆಯು ॥ ೫ ॥

ಕೊರಳಪದಕ ಮುತ್ತಿನ ಹಾರ ತೂಗಾಡಲು ।
ಕರಿಕರಭಕರಕಂಕಣ ಸರಿಯೆ ॥
ಚಿರರುಚಿರತ್ನನೂಪುರ ಝಣತ್ಕರಿಸಲು ।
ಪರಮಪುರುಷನಮ್ಮ ಹರುಷದಲಿ ॥ ೬ ॥

ಮಥನ ರವಕೆ ನವನೀತ ಬೇಡಿ ಹರಿ ತಾಳ್ ।
ಗತಿಯಿಂದೆ ಕುಣಿಯೆ ಗೋಪತಿಯರಸಿ ॥
ಸುತ ಪ್ರಸನ್ವೆಂಕಟ ಪತಿಗೆ ಹೈಯಂಗವೀ ।
ನಿತ್ತಪ್ಪಿದಳತಿ ತೋಷಿತೆಯಾಗಿ ॥ ೭ ॥

ಶಬ್ದಾರ್ಥ:—ಬಿಸಜ=ಕಮಲ. ಮಿಂದು=ಸ್ನಾನಮಾಡಿ. ಪೊಂದಟ್ಟೆ=ಬಂಗಾರದ ತಟ್ಟೆ. ಸೀಮಂತ=ಬೈತಲೆ. ಮಂದಿರದೈವ=ಗೃಹದೇವತಾ. ಮುಡಿ=ಹೆರಳು. ಇಂದುಕಾಂತಿ=ಚಂದ್ರನ ಬೆಳಕಿನಂತಹ ಬೆಳಕಿನಿಂದೊಡಗೂಡಿದ. ನೇಣು=ಹಗ್ಗ. ಎಂದೂ=ಯಾವಾಗಲೂ. ಶರ=ನೀರು. ನರ=ಅರ್ಜುನ. ಹರಿ=ತುರಗ. ಅಲೆ=ಅಗಲಾಡು. ನಿಡುಗಂಧ=ದಟ್ಟವಾದ ಗಂಧ. ಮಂಥನ=ಕಡೆಯುವ. ರವ=ಸಪ್ಪಳ. ಹೈಯಂಗವೀನ=ಬೆಣ್ಣೆ. ಸಾಂಗತ್ಯವೃತ್ತ ಪದ್ಯಗಳು ೧೨೦.

---

## ೨೦

### ರಾಗ ಆನಂದಭೈರವಿ—ಅಟತಾಳ.

ರಂಗ ಗೋಕುಲದೊಳಗಾಡಿದಾ । ಬಲು ।
ಶೃಂಗಾರಚೇಷ್ಟೆಯ ಮಾಡಿದ ॥ ಪಲ್ಲ ॥

ಮಂಗಳಮಹಿಮ ಕೊಂಡಾಡಿದ । ಭಕ್ತ ।
ಜಂಗುಳಿಗೆ ಮುಕ್ತಿ ನೀಡಿದ ॥ ಅ. ಪಲ್ಲ ॥

ಮತ್ತೊಂದು ದಿನ ಮೊಸರ್ಕಡೆವಾಗ । ರಂಗ ।
ಹಸ್ತು ಬಂದನು ಗೋಪಿ ಬಳಿಗಾಗ ॥
ತಾ ಸ್ತನಪಾನ ಜೇಡಿದನಾಗ । ದಧಿ ।
ಮಂಥನದಂಡ ಪಿಡಿದ ಬ್ಯಾಗ ॥ ೧ ॥

ಕಡೆವ ಕೆಲಸವನು ಇಟ್ಟಳು । ತನ್ನ ।
ತೊಡೆಯನೇರಿಸಿ ಮೊಲೆಗೊಟ್ಟಳು ॥
ಪಡಗದ ಪಾಲೊಳಗುಕ್ಕಲು । ಮೊಲೆ ।
ಬಿಡಿಸಿ ಮಂದಿರದೊಳು ಪೊಕ್ಕಳು ॥ ೨ ॥

ತೃಪತಿಯಾಗದ ಪ್ರಾಕೃತರಂತೆ । ನಿತ್ಯ ।
ತೃಪತನು ತಾನು ರೋದಿಸಿ ಮತ್ತೆ ॥
ಕುಪಿತನಾಗುತ ಕಲ್ಲುವಿಡಿದನು । ಬೆಂಣೆ ।
ಯ ಪಡಗವಾಕ್ಷಣ ಒಡೆದನು ॥ ೩ ॥

ಹರುಷದಿ ಬೆಂಣೆಯ ಗುಳಿಗೆಯ । ಒಯ್ದು ।
ಒರಳ್ ಮೇಲೆ ಮೆಲತಿದ್ದನಜನಯ್ಯ ॥
ಅರಸಿ ಗೋಪೆಮ್ಮನು ಹಾಲಿಗೆ । ನೀರ ।
ನೆರೆದು ಬಂದು ಕಂಡಳೀ ಬಗೆ ॥ ೪ ॥

ಕೋಪದಿ ಕೋಲು ತಕೊಂಡಳು । ನೋಡಿ ।
ಶ್ರೀ ಪ್ರಸನ್ವೆಂಕಟ ನೋಡಲು ದ– ॥
ಯಾಪರ ಮೆಲನೆಲ್ಲೈದಲು । ಕಂಡು ।
ಗೋಪೆಮ್ಮ ಸಿಕ್ಕಿದೆಯೆಂದಳು ॥ ೫ ॥

ಶಬ್ದಾರ್ಥ:—ಜಂಗುಳಿ=ಸಮೂಹ. ಪಡಗ=ಪಾತ್ರೆ. ತೃಪತಿ=ತೃಪ್ತಿ. ಪದ್ಯಗಳು ೧೭೫. ಸಾಂಗತ್ಯ ವೃತ್ತ.

೨೧

ಘಂಟಾರವ ರಾಗ — ಏಕ ತಾಳ.

ಸಾರಿ ಸಾರಿಗೆ ಗೋವಿಂದ ಮಹಾ ।
ಕಾರುಣಿಕಜಭವಸುರವಂದ್ಯಾ ॥ ಪಲ್ಲ ॥

ತಾಯಿ ಬಳಲುವದು ಮಕ್ಕಳಿಗೆ । ಸಂ– ।
ನ್ಯಾಯವಲ್ಲವೆನ್ನುತೆ ಬ್ಯಾಗೆ ॥
ಆಯಸಪಡಿಸಿ ಸಿಲುಕಿದಾ । ತನ್ನ ।
ಮಾಯದಿ ತಾ ವರ್ತಿಸುವ ಮುಕುಂದಾ ॥೧॥

ಕೃಷ್ಣನ ಕಟ್ಟಲು ಕುಂದರದನೆ । ಯ– ।
ಥೇಷ್ಟ ಕಣ್ಣಿಗಳಿಂದಾ ಜನನೆ ॥
ಅಷ್ಟು ದಾಮವು ಸಾಲದಾಗೆ । ಹರಿ– ।
ಕಟ್ಟಿಕೊಂಡನು ವತ್ಸದಾಮುದಾಗೆ ॥ ೨ ॥

ಒರಳನೆಳೆದುಕೊಂಡು ಹೋಗಿ । ಮತ್ತಿ ।
ಮರಗಳ ಮುರಿದ ಚನ್ನಾಗಿ ॥
ಸುರಋಷಿ ಶಾಪದಿ ನಳಕೂಬರರನ್ನು । ಉ ।
ದ್ಧರಿಸಿದ ಶಿರಿವರ ಅತಿಬ್ಯಾಗೆ ॥ ೩ ॥

ದಿವ್ಯ ಪುರುಷರು ಇಳೆಯಲ್ಲಿ । ಸುರ– ।
ಸೇವ್ಯನ ಪಾದಕ್ಕೆರಗುತಲಿ ॥
ಭವ್ಯಚರಿತನ ಕೊಂಡಾಡಿದಗು ।ಬಹು ।
ದ್ರವ್ಯಾಧಿಪನ ಸುತರ್ ಭಕ್ತಿರತರು ॥ ೪ ॥

ನಿನ್ನ ಗುಣಕಥನೆಗೆ ವಾಣಿಗಳು । ಹರಿ ।
ನಿನ್ನ ಕಥೆಗೆ ಶ್ರವಣಗಳು ॥
ನಿನ್ನ ಸೇವೆಗೆಮ್ಮ ಪ್ರಾಣಗಳು । ಹರಿ ।
ನಿನ್ನ ಸ್ಮೃತಿಗೆ ಮನವಿರಲಿ ದಯಾಳು ॥ ೫ ॥

ನಿನ್ನ ಪಾದಾಬ್ಜಕೆ ತಲೆಯೆರಗಿ । ಹರಿ ।
ನಿನ್ನ ನೋಟವೇ ದೃಷ್ಟಿಗಾಗಿ ॥
ನಿನ್ನವರ ಸಂಗತಿ ಇತ್ತು । ಹರಿ ।
ಚನ್ನಾಗಿ ನಮ್ಮ ರಕ್ಷಿಪುದೆ ಸಂಪತ್ತು ॥ ೬ ॥

ಅವರು ಸ್ತೋತ್ರ ಮಾಡೈದಿದರು । ಮ– ।
ತ್ತವರ ಕಾಣುತಾ ವ್ರಜದವರು ॥
ಇವ ಪರಜೀವನೆಂದರಿದರು । ಪ್ರಸ– ।
ನ್ನ ವೆಂಕಟನ ಸ್ತುವಿಸಿ ಸುಖಿಸರು ॥ ೭ ॥

ಶಬ್ದಾರ್ಥ:— ಸಾರಿಸಾರಿಗೆ=ಪ್ರತಿಯೊಂದುಸಲ. ಕುಂದರದನೆ=ಕುಂದಕುಸುಮದಃತೆ ಹಲ್ಲುಳ್ಳವಳು. ದಾವ=ಹಗ್ಗ. ಇಳೆ=ಭೂಮಿ. ದ್ರವ್ಯಾಧಿಪ=ಕುಬೇರ. ಐದು=ಹೋಗು. ಪರಜೀವನು=ಪರಮಾತ್ಮ. ಅರಿ=ತಿಳಿ. ಪದ್ಯಗಳು ೧೪೨ ಸಾಂಗತ್ಯವೃತ್ತವು.

---

೨೨

ರೇಗುಪ್ತಿ ರಾಗ—ಜಕ್ಕಿಣಿ ತಾಳ.

ತೊರೆದ ಮೊಲೆಯಿಂದಲಿ ಕರೆದಳು ಕಂದನ ।
ಭರಿತ ಪ್ರೇಮದಿಂದ ಅರಸಿ ಗೋಪೆಮ್ಮ ॥ ಪಲ್ಲ ॥
ಪರಮ ಲೋಭಿಗೆ ಧನ ದೊರಕಿದಂತೆ ತಾನೊಂ– ।
ದರಗಳಿಗೆಯು ಬಿಟ್ಟಿರಲಾರಳಮ್ಮ ॥ ಅ. ಪಲ್ಲ ॥
ಎಷ್ಟು ಹೊತ್ತಾಯಿತು ಆಡಹೋಗಿ ರಾಮ ।
ಕೃಷ್ಣರು ಬರಲಿಲ್ಲವೇಕೀಗಳೆಂದು ॥
ತುಷ್ಟಿಲಿ ಕರೆದಳ್ ಶ್ರೀಕೃಷ್ಣ ಹೇ ಬಲಭದ್ರ ।
ಇಷ್ಟೊಂದಾಟವು ಬೇಡ ಬಿಟ್ಟು ಬನ್ನೆಂದು ॥ ೧ ॥

ದಾಶಾರ್ಹರುಣ ಬನ್ನಿರೈ ಸಂಭ್ರಮದಿಂದೆ ।
ಸೋಸಿಲಿ ವ್ರಜನಾಥ ಮೊಸಲ ಪಾಯಸ ॥
ನೀ ಶಿಶುಗಳ್ ಕರೆತಾ ಸಖಿಯೆಂದುಣ–
ಲೇಸು ಜನ್ಮದ ತಾರೆ ಶ್ರೀಶ ನಿನಗೆನುತ ॥ ೨ ॥

ಭಾಸುರ ಮೈಧೂಳಿ ಧೂಸರವಾಗಿದೆ- ।
ಓ ಶಿಶುಗಳಿರಾ ಮಿಂದು ಶುಚಿಯಾಗಿ ॥
ಭೂಷಣಾಂಬರಗಳಿಂ ಭೂಷಿತರಾಗಿ ನೀವ್ ।
ಗೋಸಾಸಿರ ದಾನ ಭೂಸುರರ್ಗೀಯಿರೈ ॥ ೩ ॥

ನಿಜಜನಕನ ಸಹ ದ್ವಿಜಜನ ಪಂಕ್ತಿಲಿ ।
ಭೋಜನವ ಮಾಡಿರೋ ಸುಜನಪ್ರಿಯರಿರಾ ॥
ಸುಜಲವು ಮುಖವಾಸ ರಜತಾಭಾ ತಾಂಬೂಲ ।
ವ್ಯಜನಮಾಲ್ಯ ಗಂಧ ಭಜಕರಾಗಿರೆಂದು ॥ ೪ ॥

ನಿಮ್ಮೆರಿಗೆಯುಲಿದ್ದ ಗೋಮಕ್ಕಳಂತೀಗ ।
ನಮ್ಮನೆಲಿರಿಯೆಂದು ಅಮ್ಮ ಕರೆದೊಯ್ದು ॥
ಸುಮ್ಮಾನದಲಿ ಪರಬೊಮ್ಮ ಪ್ರಸನ್ವೆಂಕಟ ।
ಸನ್ಮಂದಿರನ ಯಶೋದೆಮ್ಮ ಪೂಜಿಸಿದಳು ॥ ೫ ॥

ಶಬ್ದಾರ್ಥ:— ಅರಗಳಿಗೆ=ಅರ್ಧಗಳಿಗೆ. ತುಷ್ಟಿ=ಸಂತೋಷ. ಉಣಬನ್ನಿ=ಊಟಮಾಡಲು ಬನ್ನಿರಿ. ಸೊಸು=ಸೊಗಸು. ಭಾಸುರ=ಒಪ್ಪುವ. ಧೂಸರವಾಗಿದೆ=ಮುಚ್ಚಿದೆ. (ವ್ಯಾಪ್ತವಾಗಿದೆ). ಮಿಂದು=ಸ್ನಾನಮಾಡಿ. ಅಂಬರ=ವಸ್ತ್ರ. ಪದ್ಯಗಳು ೧೪೭. ಸಾಂಗತ್ಯವೃತ್ತದಂತಹವು.

---

೨೩

ಶ್ರೀ ರಾಗ—ಏಕ ತಾಳ.

ಪಾಹಿ ಗೋವಿಂದ ಪಾಹಿ ಮುಕುಂದ ।
ಪಾಹಿ ಪಾಹಿ ನಿತ್ಯಾನಂದ ಉಪೇಂದ್ರ ॥ ಪಲ್ಲ ॥

ವೃಂದಾವನಕೆ ಪಯಣೋದ್ಯೋಗದಿಂದ ।
ನಂದನಂದನ ತನುಜಸಹ ಕೃಪೆಯಿಂದ ॥
ಅಂಧಕನು ಪಡೆದಾ ವ್ಯಾಘ್ರವೃಂದ ।
ಮುಂದಿಯು ಬಾಧಿಸೆ ನಡೆವನು ನಂದಾ ॥ ೧ ॥

ಭಕ್ಷಪಾಯಸ್ಸನ್ನ ಭೋಜನವ ಮಾಡಿದರು ।
ಸೂಕ್ಷ್ಮಾಂಬರ ಅಲಂಕಾರ ಧರಿಸಿದರು ॥
ಗೋಕ್ಷೀರದಧಿಘೃತ ಭಾಂಡ ತುಂಬಿದರು ।
ಲಕ್ಷೋಪಲಕ್ಷ ಶಕಟವ ಹೊಡಿಸಿದರು ॥ ೨ ॥

ಭಂಡಿಯ ಮೇಲೆ ಭಾಜನ ಹೇರಿ ಹತ್ತಿ ।
ಪುಂಡರೀಕಾಕ್ಷ ಸಂಕರ್ಷಣರೆತ್ತಿ ॥
ಕೊಂಡರು ತಾಯ್ಗಳಂದಾಯಿತು ಆರ್ಥಿ ।
ಹಿಂದು ಗೋವ್ಗಳ ಗೋವಳರನು ಬೆಂಬತ್ತಿ ॥ ೩ ॥

ಕುಂಭಕುಚಗಳ್ಗದಗದಿಪ ಚೆಲ್ವೆಯರು
ಅಂಬುಜಾಕ್ಷನ ಗುಣಕೀರ್ತ್ನೆ ಮಾಡಿದರು ॥
ಕೊಂಬು ಕೊಳಲು ತಾಳ ತಪ್ಪಟೆ ಭೇರಿ !
ಸಂಭ್ರಮದಿಂದ ವೃಂದಾವನ ಸಾರಿ ॥ ೪ ॥

ಅರ್ಧಚಂದ್ರಾಕಾರ ಶಕಟವ ನಿಲಿಸಿ ।
ಅದ್ರಿತಪ್ಪಲುಕೂಲ ಯಮುನೆಯ ಬಳಿಸಿ ॥
ಸದ್ರತ್ನನಿಭ ಪುಲಿನಸ್ಥಳವಿಡಿದು ।
ಉದ್ರೇಕದಿಂದಲಿ ನೆಲೆಗೊಂಡರಂದು ॥ ೫ ॥

ಉಚ್ಚ್ರ ಶೈಲ ಗೋವರ್ಧನ ತಳದಿ ।
ಅಚ್ಯುತಬಲರಾಮರಾಡಿದರ್ ಮುದದಿ ॥
ಸ್ವೇಚ್ಛೈಕಲೀಲಸೆಂತೆಂದು ಲಾವಣ್ಯ ।
ವತ್ಸಗಳ ಕಾಯ್ದುದ್ದು ನಂದನ ಪುಣ್ಯ ॥ ೬ ॥

ಕರುಗಳ ಕಾಯ್ದರು ಹರಿಸಂಕರ್ಷಣರು ।
ಸರಿ ಗೆಳೆಗೋವಳರ್ವೆರಸಿ ಸುಂದರರು ॥
ವರ ಕಲೋಚ್ಚಾರದಿ ವ್ರಜಪಾದಿ ಜನಕೆ ।
ಹರುಷಾಮೃತಾಬ್ಧಿಲಿಟ್ಟರು ಕ್ಷಣಕ್ಷಣಕೆ ॥ ೭ ॥

ಒಪ್ಪೊಮ್ಮೆ ಮಂಜುಳ ಕೊಳಲನೂದುವರು ।
ಒಪ್ಪೊಮ್ಮೆ ಮಲ್ಲರಾಟವನಾಡುವರು ॥
ಒಪ್ಪೊಮ್ಮೆ ವೃಷಪಿಕದನಿಯನೆಸಗುವರು ।
ಒಪ್ಪೆ ಭೂರುಹದಾಟ ನೀರಾಟಾಡುವರು ॥ ೨ ॥

ಶ್ರೀಕಾಂತೆಯನ್ನಾಳ್ವ ವೈಕುಂಠಧಾಮ ।
ತೋಕ ವೇಷದ ಶ್ರೀಕೃಷ್ಣನೇ ಪರಬೊಮ್ಮ ॥
ಆಕಳಕಾಯ್ವರ ಕೂಡಿಹ ಕೀರ್ತಿ ।
ಶ್ರೀಕರ ಪ್ರಸನ್ವೆಂಕಟ ಶರಣಾರ್ಥಿ ॥ ೬ ॥

ಶಬ್ದಾರ್ಥ:— ಪಯಣ=ಪ್ರಯಾಣ. ಶಕಟ=ಬಂಡಿ. ಭಾಜನ=ಪಾತ್ರೆ. ಅರ್ತಿ=ಸಂತೋಷ. ಬೆಂಬತ್ತಿ=ಬೆನ್ನಹತ್ತಿ. ಕೊಂಬು=ವಾದ್ಯವಿಶೇಷ. ತಪ್ಪಟೆ=ವಾದ್ಯವಿಶೇಷ. ಹಲಿಗೆ (ತಮ್ಮಟೆ). ಸಾರಿ=ಹೋಗಿ. ನಿಭ=ಸದೃಶ. ಪುಲಿನ=ಉಸುಬು. ಉದ್ರೇಕ=ಉಲ್ಲಾಸ. ಶೈಲ=ಪರ್ವತ. ಲಾವಣ್ಯ=ಸೌಂದರ್ಯ. ವೆರಸಿ=ಕೂಡಿಕೊಂಡು. ಕಲೋಚ್ಚಾರ=ಮಂಜುಲ ಸಸ್ವರ. ಪಿಕ=ಕೋಗಿಲೆ. ಎಸಗು=ಉಂಟುಮಾಡು. ಭೂರುಹದಾಟ=ಗಿಡಮಂಗನಾಟ. ತೋಕ=ಬಾಲ.

ವಿ. ಸಂ.:— ಅದ್ರಿ.........ಬಳಿಸಿ=ಪರ್ವತತಪ್ಪಲು, ದೇಶ, ಯಮುನೆಯ ದಂಡೆಯನ್ನೆಲ್ಲ ಸುತ್ತುವರಿದು. ಸ್ವೇಚ್ಛೆಯ ಕಲೀಲ=ಅಪ್ರತಿಹತನಾಗಿ, ಮುಖ್ಯನಾಗಿ ಆಟನಾಡುವವ. ಸಾಂಗ ಸಾಂಗತ್ಯವೃತ್ತದಂತಹವು. ೧೯೬ ನುಡಿಗಳು.

---

೨೪

ರೇಗುಪ್ತಿ ರಾಗ, — ಏಕ ತಾಳ.

ಹರಿ ಹರಿ ಗೋವಿಂದ ಖಳ ।
ಹರಣ ಪ್ರಣತರಾನಂದಾ ॥ ಪಲ್ಲ ॥

ಕುತ್ಸಿತಮತಿ ಕಂಸನ ಭಟನೊಬ್ಬನು ।
ವತ್ಸಾಕೃತಿಯಲಿ ಬಂದಾ ॥
ಅಚ್ಯುತರಾಮರ ಕೊಲುವ ಉದ್ಯೋಗವ ।
ನಿಶ್ಚೈಸ್ಯವರೊಳು ನಿಂದಾ ॥ ೧ ॥

ವೃಕ್ಷದ ತುದಿಗೊಗೆದವನ ಮುಡುಹೆ ಬಕ– ।
ಪಕ್ಷಿಯು ತೆರ ಖಳನೋರ್ವ ॥
ವೃಕ್ಷದಿ ಬಾಯ್ದೆರೆದೆತ್ತಿದ ಗೋಣಿಲಿ ।
ಭಕ್ಷಿಸಲಿಕ್ಕವಾ ಬಂದಾ ॥ ೨ ॥

ಹರಿಕರಪಲ್ಲವ ಅವನ ವದನದಲಿ ।
ತುರುಕಲು ಉರಿದು ಕಾರಿದನು ॥
ದುರುಳನ ಚಂಚುಪುಟೆರಡನು ಮಾಡಿದ ।
ತ್ವರಿತದಿ ನಗುತೆ ಅಚ್ಯುತನು ॥ ೩ ॥

ಸರಸಿಜಭವಸುರವರರಂಬರದಲಿ ।
ನೆರೆದು ನುತಿಸಿ ಪೂಮಳೆಯ ॥
ಗರೆದರು ಅಣ್ಣನ ವೆರಸಿ ಮುಕುಂದನು ।
ಮರಳಿದ ಗೋಪತಿ ಬಳಿಗೆ ॥ ೪ ॥

ವ್ರಜನಾಥನು ಮಕ್ಕಳ ಬಿಗಿದಪ್ಪಿದ ।
ಭಜಿಸಿ ಸ್ತೋತ್ರವ ಮಾಡಿದನು ॥
ದ್ವಿಜವರ ಗರ್ಗನು ಹೇಳಿದ ನುಡಿಗಳು ।
ನಿಜವುತ್ಪಾತ ಗೆಲಿದನು ॥ ೫ ॥

ಎನುತಲಿ ಸುಖದಲಿ ವನದಲಿ ಮಂಗಳ ।
ದಿನ ದಿನ ವರ್ಧಿಸುತಲ್ಲಿ ॥
ವನಜನಯನನ ಗುಣಸಂಕೀರ್ತನೆ ।
ಘನಜನ ಪೊಗಳುವರಲ್ಲಿ ॥ ೬ ॥

ಗೋಪರು ಗೋಪಿಯರಾವ್ಗಳು ತರುಲತೆ ।
ದೇವಾಂತರು ಪ್ರಜರೆಲ್ಲ ॥
ಶ್ರೀವರ ಪ್ರಸನ್ವೆಂಕಟ ಕೃಷ್ಣರೇಯನ ।
ಭಾವುಕರ್ ಮಾನವರಲ್ಲ ॥ ೭ ॥

ಶಬ್ದಾರ್ಥ:—ಕುತ್ಸಿತ=ಕೆಟ್ಟ. ಭಟ=ಸೇವಕ. ವತ್ಸ=ಕರು. ಮಡುಹೆ=ಕೊಲ್ಲಲು. ಕರಪಲ್ಲವ=ಚಿಗುರೆಲೆಗಳಂತೆ ಕೋಮಲವಾದ ಹಸ್ತ. ಸರಸಿಜಭವ=ಕಮಲದಿಂದ ಹುಟ್ಟಿದಂಥ ಬ್ರಹ್ಮನು. ಕರೆದರು=ಸುರಿಸಿದರು. ವೆರಸಿ=ಕೂಡಿಕೊಂಡು. ವ್ರಜನಾಥ=ಗೋಕುಲಪತಿ (ನಂದನು). ವನಜ=ನೀರಲ್ಲಿ ಹುಟ್ಟಿದುದು ಕಮಲ. ಭಾವುಕರು=ಭಕ್ತರು.

ವಿ. ಸಂ.:—ಪ್ರಣತರಾನಂದ=ನಮಸ್ಕರಿಸಿದವರಿಗೆ ಆನಂದಕೊಡುವವನು. ಗರ್ಗ=ಯಾದವರ ಪುರೋಹಿತನು. ಪದ್ಯಗಳು ೨೦೩ ಸಾಂಗತ್ಯವೃತ್ತದಂತಹದು.

---

೨೫

ತೆಲಗ ಕಾಂಬೋದಿ ರಾಗ. — ಏಕ ತಾಳ.

ಸ್ವರ್ಗಕೆ ಸಮವೃಂದಾವನವು
ವೆಗ್ಗಳಿಸಿತು ಸೌಖ್ಯದೀ ವನವು ॥ ಪಲ್ಲ ॥
ಹರಿಸಂಕರ್ಷಣರೀರ್ವರರು ಹರುಷದಿ ।
ಚರಿಸಿದರಾಕಳ ಕಾಯುತಲಿ ॥
ವರ ಗೋವರ್ಧನ ಗಿರಿಯು ತಪ್ಪಲಿನಲಿ ।
ನಿರುತದಿ ಯಮುನೆಯ ತೀರದಲಿ ॥ ೧ ॥

ಅಲ್ಲಿದ್ದ ಲೋಕಂಗಳು ನಾಕಲೋಕವು ।
ಅಲ್ಲಿದ್ದ ಧೇನುಗಳು ಸುರಧೇನು ॥
ಅಲ್ಲಿಹ ವೃಕ್ಷಂಗಳು ಕಲ್ಪವೃಕ್ಷವು ।
ಅಲ್ಲಿಹ ನಾರಿಯರಪ್ಸರೆರು ॥ ೨ ॥

ಚಿಣ್ಣಿ ಬೊಗರೆ ಚೆಂಡು ಗುಮ್ಮಗುಸಕುಹಿಡಿ ।
ಅಣೆಕಲ್ಲು ಹಲ್ಲೆ ಗಜಗ ಘಲ್ಲೆ ॥
ಕಣ್ಣಮುಚ್ಚಳ ಮರನೇರಾಟ ನೀರಾಟ ।
ಸಣ್ಣವರೊಳು ಸೋಲುಗೆಲುವಾ ಆಟಾ ॥ ೩ ॥

ಸಂದೋಹನ ಮಾಡುತ ರಂಗ ರಂಗಾ ।
ಸಂದೋಹದಿಂದೆಂಬರು ರಂಗ ॥

ನಂದಾಬ್ಧಿಯಲಿ ಗೋಪಿಯರಂತರಂಗ ।
ನಂದಿಸಿದಾನಂದಚಂದ್ರ ರಂಗ ॥ ೪ ॥



ಜಲಸೇತುಬಂಧನದಾಟ ನಿಲಯನ ।
ಪಲಾಯನದಾಟ ಕಪಿಪ್ಲವನ ।
ಕಲಹಂಸೋಚ್ಚರ ಅಳಿಗಳ ಝೇಂಕಾರ ।
ಗಿಳಿಸಿಖಿಯುಚ್ಚರ ಪಿಕೋಚ್ಚಾರ ॥ ೫ ॥

ಗಜಸಿಂಹಗರ್ಜನೆ ಗೋವೃಷಗರ್ಜನೆ ।
ಸುಜಲದ ಘೋಷಣೆ ಭೇಕರವ ॥
ಸುಜನ ಗೋವಳರಿಗೆ ಶಿಕ್ಷಿಪ ದ್ವಿಜವರ- ।
ಧ್ವಜ ನಿಗಮೇಶ್ವರ ಅಜನ ಪಿತಾ ॥ ೬ ॥

ಲೋಲಾಕ್ಷಿಯರೊಳು ನೋಟ ಬೇಟ ವಿ- ।
ಶಾಲಗುಣಾಢ್ಯ ಸುರೇಡ್ಯ ಹರಿ ॥
ನೀಲಾಂಬುದಶಾಮಲ ಪಶುಗಳ ಪ್ರೀತಿ ।
ಪಾಲಿಸಿದನು ಗೋಪಾಲರೊಳು ॥ ೭ ॥

ವೃಂದಾವನದಿ ಗೋವಿಂದ ವೇಣುಸ್ವರ- ।
ದಿಂದ ಸ್ವಯಶೋವಿಖ್ಯಾತ ಗಡ ॥
ಇಂದಿರೆಯರಸ ಗೋವೃಂದವ ಕಾಯ್ದನು ।
ಹಿಂದಣ ಪುಣ್ಯ ವಸುಂಧರೆಗೆ ॥ ೮ ॥

ನಳಿನಗಂಧವನುಂಬ ಅಳಿಗಳ ಘೋಷ ಮಂ ।
ಜುಳವಾಗಿದೆ ವಿಹಂಗಗಳ ॥
ಬಳಗ ಮೃಗಾವಳಿಗಳ ಕ್ರೀಡೆಯೊಪ್ಪಿತು ।
ಬಲು ಕುಸುಮಾಕರ ಸ್ಥಾನದಲಿ ॥ ೯ ॥

ಎಲೆ ಬಲ ನೋಡಿವು ಎಳೆದಳಿರು ಕುಸುಮ-
ಗಳ ಗೊಂಚಲು ಫಲಭಾರಿಡುತ ॥



ತಲೆಬಾಗಿ ನಲಿವಿಲಿ ನಿಮಗೊಂದಿಸುತಿವೆ ।
ಎಳೆಪೆಲರ್ ಸೋಂಕಿ ಅಲರುದುರುತಿವೆ ॥ ೧೦ ॥

ಫಲವತಿ ಪುಷ್ಪಿಣಿಯುರು ತುಂಬಿದ ಉದಿ- ।
ಯಲಿ ಹಿರಿಯರಿಗೆ ವಂದಿಪ ತೆರದಿ ॥
ಇಳೆ ಸಾಕಿದ ಬೆಳೆಸಿದ ಉಪಕಾರಕೆ ।
ಲಲಿತ ಲತಾದ್ರುಮ ನತಿಸುತಿವೆ ॥ ೧೧ ॥

ಸ್ಥಾವರ ಜೀವದ ಯೋಗ್ಯತೆ ನೋಡಣ್ಣ ।
ದೇವ ನಿಮ್ಮರ್ಚನೆ ಮಾಡುತಿವೆ ॥
ಈ ಉರುತರುಲತೆ ಜನ್ಮವೇ ಧನ್ಯವು ।
ದೇವಮುನಿಗಳಿರ್ಪೆಗ್ ನಿಶ್ಚಯವು ॥ ೧೨ ॥

ಹರಿಯಗ್ರಜನಿಗೆ ಮಾನವನಿತ್ತು ಸಂ- ।
ಚರಿಸುವ ಸೌಭಾಗ್ಯಕೆ ಮೆಚ್ಚಿ ॥
ತರ ತರ ಬರುಹಿಗಳ್ ಗರಿಗೆದರಾಡಲ್ ।
ಎರಳೆವೆಮಿಕ್ಕದೆ ನೋಡಿವವು ॥ ೧೩ ॥

ಹರಿಯ ಸೌಂದರ್ಯಾಂಬುಧಿಲೀಸಾಡುವ ।
ಹರಿಣಾಕ್ಷಿಯರಕ್ಷಿಮೀನಗಳು ॥
ಮರುಳಿಟ್ಟು ನಿಂದವು ವರವೇಣುನಾದಕೆ ।
ಹರಿನೋಟಸ್ಮರಶರಪೀಡಿತರು ॥ ೧೪ ॥

ಕುಡಿತೆಗಣ್ ಮಡದಿಯರ್ ಮುಡಿ ನುಡಿ ಪಲ್ ಮೊಲೆ ।
ನಡು ನಡೆಗ್ಹರಿಣಮಯೂರಕೀರಾ ।
ದಾಡಿಮೇಭ ಹರಿಯುಂಚೆಯುಡವಿ ಗಡ ।
ಮಡುವಿಡಿದವು ನಾಚಿಕೆ ಹಿಡಿದು ॥ ೧೫ ॥

ಗೋಪಿಯರ್ ಗಾನವ ಪೋಲ್ವ ಭೃಂಗಾವಳಿ ।
ಗೋಪಿಯರ್ ನೋಟವು ಕುರಂಗಾಳಿ ।

ಗೋಪಿಯರ್ ನಡೆಯು ಪರಿಯು ಹಂಸಾಳಿಗಳ್ ।
ಶ್ರೀಪತಿ ಸೇವೆಗೊಪ್ಪಿದವಲ್ಲಿ ॥ ೧೬ ॥

ವೃಂದಾವನವದು ನಂದನೋದ್ಯಾನವು ।
ನಂದನ ಮನೆಯುಮರಾವತಿಯು ॥
ಇಂದಿರೆಯರಸ ಪ್ರಸನ್ನವೆಂಕಟ ಉ– ।
ಪೇಂದ್ರ ಎಲ್ಲರು ವೃಂದಾರಕರು ॥ ೧೭ ॥

ಶಬ್ದಾರ್ಥ:—ವೆಗ್ಗಳಿಸು=ಹೆಚ್ಚು. ನಿರುತದಿ=ಯಾವಾಗಲೂ. ನಾಕ=ಸ್ವರ್ಗ. ಸುರಧೇನು=ಕಾಮಧೇನು. ಗುಮ್ಮಗುಮುಕು=ಒಂದು ತರಹದ ಆಟ. ಹಿಡಿ=ಹಿಡಿಯಲು ಬರುವ ಆಟ. ಹಲ್ಲೆ=ಒಂದು ತರದ ಆಟ. ಘಲ್ಲಿ=ಆಟದ ತರಹ. ಸಂದೋಹನ=ಆಕಳ ಕರೆಯುವುದು. ಸಂದೋಹ=ಸಮೂಹ. ಪ್ಲವ=ಹಾರಾಟ. ಅಳಿ=ಗುಂಗೀಹುಳ. ಶಿಖಿ=ನವಿಲು. ಭೇಕ=ಕಪ್ಪೆ. ದ್ವಿಜವರ=ಗರುಡ. ಚೇಟ=ಶೃಂಗಾರಚೇಷ್ಟೆ. ವಿಶಾಲ=ಸರ್ವವ್ಯಾಪಿ. ಗುಣಾಢ್ಯ=ಜ್ಞಾನಾನಂದಾದಿ ಗುಣಗಳಿಂದ ಕೂಡಿದವನು. ಸುರೇಡ್ಯ=ದೇವತೆಗಳಿಂದ ಸ್ತುತಿಸಲರ್ಹನು. ವಸುಂಧರೆ=ಭೂಮಿ. ಬಲ=ಬಲರಾಮ. ತಳಿರು=ಚಿಗುರೆಲೆ. ನಲಿವಿಲಿ=ಸಂತೋಷದಿಂದ. ಎಲರ್=ಗಾಳಿ. ಅಲರ್=ಹೂವು. ಉರು=ಶ್ರೇಷ್ಠ. ಬರುಹಿ=ನವಿಲು. ಎರಳೆ=ಚಿಗರೆಯು. ಕುಡಿತೆ=ಬೊಗಸೆ. ಮಯೂರ=ನವಿಲು. ಕೀರ=ಗಿಳಿ. ಇಭ=ಆನೆ. ಅಂಚೆ=ರಾಜಹಂಸ ಪಕ್ಷಿಯು.

ವಿ. ಸಂ.—ಸಂದೋಹನ............ಎಂಬರುರುಗ=ಪ್ರತಿಯೊಂದು ಕೆಲಸ ಮಾಡುವಾಗಲೂ ಕೂಡ ರಂಗನನ್ನೇ ನೆನೆಯುತ್ತಿದ್ದರು. ನೀಲಾಂಬುದ ಶಾಮಲ=ನೀಲಮೇಘಗಳಂತೆ ಶಾಮವರ್ಣದವನು. ಸ್ವಯಶೋವಿಖ್ಯಾತ=ತನ್ನ ಕೀರ್ತಿಯಿಂದ ಪ್ರಖ್ಯಾತನು. ಕುಸುಮಾಕರಸ್ಥಾನದಲಿ=ಸರೋವರದೆಡೆಯಲಿ. ನಳಿನ............ಘೋಷ=ಕಮಲದೊಳಗಿನ ಸುಗಂಧವನುಣ್ಣುವ ಭೃಂಗಗಳ ಘೋಷ. ಎಳೆಎಲರ್.........ತಿವೆ=ಸುಳಿಗಾಳಿಯು ಬೀಸಿ ಹೂವುಗಳು ಕೆಳಗೆ ಬೀಳುತ್ತಲಿವೆ. ಫಲವತಿ=ಗರ್ಭಿಣಿಯರು. ಪುಷ್ಪಿಣಿಯರು=ಮೈನೆರೆದವರು. ಹರಿಯ ಸೌಂದರ್ಯಾಂಬುಧಿ......... ಮೀನಗಳು=ಕೃಷ್ಣಚಲ್ವಿಕೆಯೆಂಬ ಸಮುದ್ರದಲ್ಲಿ ಚಿಗರೆಯಂತೆ ಚಂಚಲವಾದ ಕಣ್ಣುಳ್ಳಬಲೆಯರ ನೋಟವೆಂಬ ಮೀನಗಳು. ಕುಡಿತೆಗಣ್, ನುಡಿ, ನುಡಿ ಪಲ್ ಮೊಲೆ, ನಡು, ನಡೆ ಇವುಗಳನ್ನು ಕಂಡು ಕ್ರಮವಾಗಿ ಚಿಗರೆ, ನವಿಲು, ಗಿಳಿ, ದಾಳಿಂಬ, ಆನೆ, ಸಿಂಹ, ಹಂಸಗಳು ನಾಚಿ ಅಡವಿ, ಗಿಡ, ಮಡುವಿನಲ್ಲಿ ಸೇರಿವವು. ವನದಲ್ಲಿ ಗೋಪಿಯರ ಗಾನವ ಪೊಲ್ವ.........ಹಂಸಾಳಿಗಳ್=ವನದಲ್ಲಿ ಕೃಷ್ಣನಿಗೆ, ಊರಲ್ಲಿ ಗೋಪಿಯರು ಗಾನಮಾಡಿ

ಸಂತೋಷಪಡಿಸುತ್ತಿರುವಂತೆ ಭ್ರಮರಸಮೂಹವು ಬಡಿಸುತ್ತಿತ್ತು. ಗೋಪಿಯರು ಕಡೆಗಣ್ಣಿಂದ ನೋಡುತ್ತಿರುವಂತೆ ಇಲ್ಲಿ ಹೆಣ್ಣು ಚಿಗರೆಗಳು ಕೃಷ್ಣನನ್ನು ನೋಡುತ್ತಿದ್ದವು. ಮಂದಗಮನೆಯರಾದ ಗೋಪಿಯರಿಂದ ಪ್ರೀತನಾದಂತೆ, ಹಂಸಗಳಿಂದ ಕೃಷ್ಣನು ಪ್ರೀತನಾಗುತ್ತಿದ್ದನು. ೨೨೦ ನುಡಿಗಳು. ಸಾಂಗತ್ಯವೃತ್ತದಂತಹ ಚರಣಗಳು.

---

## ೨೬

ರಾಗ ಕನ್ನಡ ಗೌಳ. —— ಅಟ್ಟ ತಾಳ.

ಧನ್ಯ ಧನ್ಯ ಯಮುನೆ ಗೋವರ್ಧನ್ನಗಿರಿಪತಿ ।
ಚಿನ್ಮಯಾಂಗಸ್ಪರುಶ ಪಾವನ್ನಮೂರುತಿ ॥ ಪಲ್ಲ ॥

ಎಳೆದಳಿರು ಶಾವಂತಿಗೆ ನೀಲೋತ್ಪಲ ಪೊಂಗ್ಯಾದಗೆಯ ।
ನಳಿನ ಚಂಪಕ ಪಾಟಲ ಬಕುಳ ಮೊಲ್ಲೆ ಮಲ್ಲಿಗೆಯ ॥
ಅಲರು ತುಳಸಿ ಬರುಹಿ ಬರುಹ ಗೆಳೆಯರೀವರು ಗೆಳೆಯರಿಗೆ ।
ಒಲಿದು ಇತ್ತು ತಾನಿಡುವನು ಚಲುವರರಸನು ॥ ೧ ॥

ಮುಕುತಬಳಗದೊಡನೆ ಸಂತತ ಲಕುಮಿ ಪೂಜಿಪಳು ।
ಮುಕುತಕುಸುಮಗಂಧಾಲಂಕಾರ ಶ್ರೀಕಾಂತೆ ತಾನಹಳು ।
ಮುಕುತಾಮುಕುತರಿಗೆ ದುರ್ಲಭ ವ್ಯಕತವ್ಯಕತನು ।
ಆಕಳ ಕಾಯ್ವರ ಮಕ್ಕಳು ಅರ್ಚಿಸೆ ಸ್ವೀಕರಿಸುತಿಹನು ॥ ೨ ॥

ಶುಕಪಿಕಗಳು ಮೃದುಧ್ವನಿಯು ಝೇಂಕಾರವದಿಂ ಕರೆವಂತೆ ।
ಪ್ರಕಟಿಸುತಿವೆ ಗ್ರಹಮೇಧಿಗಳಿಗೆ ಭಕುತಿವಿನಯದಂತೆ ॥
ಸುಖಿಗಳವರೇ ಸಾಧುಕುಲ ಸೇವಕರು ಭಾವುಕರು ಜೀವನ್- ।
ಮುಕುತರವರೆ ಪರೋಪಕಾರದಿ ಮುಕುತಿಪಡೆವರು ॥ ೩ ॥

ಮಧುಕರಗಳ ಕೂಡಿ ಝೇಂಕಾರ ಮುದದಿ ಮಾಳ್ಪರು ।
ಹೃದದ ಹಂಸಸಾರಸ ರಂಹಸ ಮದಿಸಿ ನಗುವರು ॥
ಕೆದರಿದಾ ಗರಿಬರುಹಿಗಳೊಡನೆ ಮುದದಿ ಕುಣಿಯುವರು ।
ಬೆದರಹುಲ್ಲೆಗಳಂತೆ ನೋಡಿ ಕವಲಿ ಜಿಗಿಯುವರು ॥ ೪ ॥

ಹರಿಬಲರೀರ್ವರು ಸರಿಗೋವಳರೊಳ್ ಬೆರಸಿ ತಿರುಗುತ ।
ತರುಲತೆಗಳ ಮೃಗಪಕ್ಷಿಗಳಚ್ಚರಿಯ ನೋಡುತ ॥
ಸರಸವಚನನುಡಿದರೆಲೆಲೆ ತಿರ್ಯಗ್ಜಾತ್ಯದ್ಯರ ।
ಪರಮಧರ್ಮವ ನೋಡಿ ಅತ್ಯಂತ ಹರುಷ ತೋರುವರು ॥ ೫ ॥

ಚಕೋರ ಕುರರೀ ಕ್ರೌಂಚ ತಿತ್ತಿರಿ ಶಕುಂತ ಕಾರಂಡ್ವ ।
ಬಕಗಳು ಪಾರಾವತ ಕಲವಿಂಕ ಚಕ್ರವಾಕಗಳ ॥
ಸುಕಳೋಚ್ಚಾರವ ಮಾಡುತ ಪಾಡುತ ಆಕಳ ಕಾಯ್ದನು ।
ಸಖ ಗೋವಳರ ನಿಕರಕ್ಕಕ್ಷಯ ಸುಖವನುಣಿಪನು ॥ ೬ ॥

ಮೇಘಗಂಭೀರರವದಿ ದೂರಿದ್ದ ಗೋಗಳ ಕರೆಯುವನು ।
ಮೃಗಪವ್ಯಾಘ್ರಗಜಗಳ ಧ್ವನಿಗೆ ದಿಗಿಲು ತೋರುವನು ॥
ಜಗದ ಪ್ರಭು ಮುಕುಂದ ದಣಿದ ಬಗೆಯ ಬಲ್ಲದವ ।
ನಗುತ ಗೋವಳರ್ಗೆಗಲಿನಲಿ ಬಾಹುಗಳನ್ನೀರುವ ॥ ೭ ॥

ಸಖರ ತೊಡೆಯ ತಲೆಗಿಂಬಿನಲಿ ಮುಖವನ್ನೇ ಇಡುವಾ ।
ಭಕುತವತ್ಸಲ ನಿದ್ರೆಯ ಮಾಡುವ ಸುಖದಿ ತರುಮೂಲಾ ॥
ಸುಖಸಮುದ್ರ ನಿದ್ರಾಮುದ್ರಾ ಸುಕಲೆದೋರಿದಾ ।
ಆಕಳಕಾಪ್ಸುರ ಕೈಯಿಂದಂಘ್ರಿಕಮಲಗಳೊತ್ತಿಸಿದಾ ॥ ೮ ॥

ಲಕುಮಿ ಭಜಿಸ ಪಾದಾ ಚತುರ್ಮುಖನರ್ಚಿಪ ಪಾದಾ ।
ಲೋಕಗಳಳೆದ ಪಾದಾ ಗಂಗೆಯ ಪ್ರಕಟಿಸಿದ ಪಾದಾ ॥
ಮುಕುತನ್ಯಕತ ಪಾದ ಕಾಳಿಂಗ ಭಕುತೋದ್ಧರ ಪಾದಾ ।
ಶಕಟವ ನೊದ್ದ ಪಾದಾ ಗೋವಳ ಸಖರೊತ್ತುವ ಪಾದಾ ॥ ೯ ॥

ಕುಣಿದು ಕುಣಿದು ದಣಿದು ನಡೆದು ತನುವು ಬೆವರಿದ ।
ವನಜನಯನ ಫಣಿಶಯನನು ಮಣಿದು ಮಲಗಿದಾ ॥
ತನಯರೊಡನೆ ಯುದ್ಧದಿ ಗಾಯನದಿ ಶಾಂತನು ।
ದನುಜಮಥನ ಪುಣ್ಯಕಥನ ಸುನಿದ್ರಿಯಾಂತನು ॥ ೧೦ ॥

ಕದನ ಚೌಪಟ ಮದನ ಜನಕ ವದನದಿ ಬಾಡಿವನು ।
ಸದನತ್ರಯನು ಆ ದನ ಕಾಯ್ದ ನ್ಯಶೋಧನಪೂರಣನು ॥
ಹದಿನಾಲ್ಕು ಲೋಕಾದ್ಯದನ ಕರ್ಮಜ್ಞ ಸುಧನರೊಡೆಯನು ।
ಈ ಧೇನುಪಳ್ಳಿಯ ಬದಿ ನದಿ ವನದಿ ದಧ್ಯೋದನ ಸವಿವನು ॥ ೧೧ ॥

ಅಣುಗರ ಕರವಿಡಿದು ನಗುತ ದಣಿದರ್ಭಕರಂತೆ ।
ತಣಿರ ಮರದೆ ನೆಳಲಿಗೈದಿ ಘನಶ್ಯಾಮಲ ಕೃಷ್ಣ ॥
ತಣಿರು ಕಸೆಪು ತೊಡಿ ತಲೆಗಿಂಬು ಗೆಣೆಯರು ಮಾಡಿದರು ।
ವನಜನಾಭನ ಗುಣಸಂಕೀರ್ತನೆ ನೆನೆದು ಪಾಡಿದರು ॥ ೧೨ ॥

ವನಮಾಲಿ ಗಂಧರ್ವಜನ ಪಾದ ಸಂಹನಚಾಮರಗಳಿಂ ।
ವನಜಾಸನನ ಪಿತನ ಒಲಿಸಿದರಣುಗ ಗೋವಳರು ॥
ಘನ ಶ್ರುತಿಗಳ ಮನಕೆ ನಿಲುಕದ ಸನಕಾದೀಶ್ವರನು ।
ವನಗೋಚರರ ಗುಣಗ್ರಾಹಿಯಾದ ಮುನಿಜನೇಡ್ಯನು ॥ ೧೩ ॥

ದಾಮಸಖಾರ್ಚಿತ ಗ್ರಾಮ್ಯರ ಕೂಡಾಡಿ ವ್ಯಾಳೋಹಿತ ವಿಶ್ವ ।
ಭೂಮಿಲತಾದ್ರುಮ ಯಮುನಾ ಪರ್ವತ ಸ್ತೋಮದಿ ಚರಿಸುವ ॥
ಕೋಮಲ ತೃಣ ಕುಸುಮಾವಳಿಗಳ ತಾ ಮಾಡುವ ಧನ್ಯರ ।
ಶ್ರೀಮನೋಹರ ಸ್ವಜನೋಪಕಾರ ಕಾಮಿತದಾತಾರಾ ॥ ೧೪ ॥

ಕರಜಾಕರಪಲ್ಲವ ಆಲಿಂಗನ ಚರಣಾಂಬುಜಗಳಿಂ ।
ಸ್ಪರುಶನದಿಂದ ಕರುಣನೋಟದಿ ಹೊರೆವ ಪೆಣ್ಣುಗಳ ॥
ಸ್ವರತ ಸ್ವಪ್ರಿಯ ಪರಮ ಪುರುಷಪರಾತ್ಪರ ಕೃಷ್ಣ ।
ವರ ಗೋಪಿಯರ ಸುರಧೇನು ಕಲ್ಪತರು ಪ್ರಸನ್ವೆಂಕಟ ॥ ೧೫ ॥

ಶಬ್ದಾರ್ಥ:— ತಳಿರು=ಚಿಗುರು. ಪೊನ್=ಕನಕ. ಪಾಟಲ=ಪುಷ್ಪವಿಶೇಷ. ಮೊಲ್ಲೆ ಮಲ್ಲಿಗೆ=ಅರಳಿದ ಮಲ್ಲಿಗೆ. ಬರ್ಹಿಬರಹ=ನವಿಲುಗರಿ. ಗೃಹಮೇಧಿ=ಗೃಹಸ್ಥ. ಹ್ರದ=ಕೆರೆ. ರಂಹಸ್=ಉತ್ಕಂಠಾ. ವದಿಸು=ಮಾತನಾಡಿಸು. ಹುಲ್ಲೆ=ಚಿಗರಿ. ಕದಲಿ=ಬೇರೆಯಾಗಿ. ಚಿಗಿ=ಜಿಗಿ. ತಿರ್ಯಕ್ ಜಾತಿ=ಪಶುಗಳು. ಚಕೋರ=ಜೊನ್ನವಕ್ಕಿ. ಕುರರೀ=ಪಕ್ಷಿ ವಿಶೇಷ. ಪಾರಾವತ=ಪಾರಿ

ವಾಳ. ಕಲವಿಂಕ=ಗುಬ್ಬಿ. ಸುಕಲೋಚ್ಚಾರ=ಶನ್ನಾದ ಮಧುರಸ್ವರ. ದಿಗಿಲು=ಭಯ. ಬಗೆ=ವಿಚಾರ. ಚೌಪಟಿ=ನಾಲ್ಕುಪಟ್ಟು. ಬದಿ=ಹತ್ತಿರ. ದಧ್ಯೋದನ=ಮೊಸರನ್ನ. ತಣಿರು=ತಳಿರು. ಕಸಿವು=ಹಾಸಿಗೆ. ಸೌಧವು=ಘನ ಗೃಹ. ಕರಜ=ಬೆರಳು. ಪೊರೆವ= ಪೊರೆವ ( ಕಾಪಾಡುವ ). ಸ್ವರತ=ತನ್ನಲ್ಲಿ ಸಕ್ತನಾದವ.

ವಿ. ಸಂ.—ಪರಮಾತ್ಮನನ್ನು ಲಕ್ಷ್ಮಿಯೊಬ್ಬಳೇ, ಮುಕ್ತರನ್ನು ಕೂಡಿಕೊಂಡು ಸೇವಾಸಾಧನಗಳೆಲ್ಲವೂ ತಾನಾಗಿಯೇ ಪೂಜಿಸಲು ಸಮರ್ಥಳೆಂದೂ, ಅನ್ಯರು ಶಕ್ತರಲ್ಲೆಂದೂ ಸಿದ್ಧಾಂತ. ವ್ಯಕತ= ( ವ್ಯಕ್ತ ) ತನ್ನ ಭಕ್ತರಿಗೆ ಪ್ರತ್ಯಕ್ಷನಾಗುವವನು. ಅವ್ಯಕತ=( ಅವ್ಯಕ್ತ ) ಆತನ ಪ್ರಸಾದವಿಲ್ಲದಲೆ ದೃಷ್ಟಿಗೆ ಅಗೋಚರನು. ಶುಕ......ವಿನಯರಂತೆ=ಭಕ್ತಿಯುತರೂ ಶಾಸ್ತ್ರಜ್ಞರೂ ಆದ ಗೃಹಸ್ಥರು ತಮ್ಮ ಮನೆಗೆ ಬಂದ ಅತಿಥಿಯನ್ನು ಸತ್ಕರಿಸುವಂತೆ ಆ ವನದಲ್ಲಿದ್ದ ಪಕ್ಷಿಗಳೆಲ್ಲವೂ ಕೃಷ್ಣನು ತಮ್ಮ ಮನೆಗೆ ಬರಲು ಝೇಂಕಾರ ಸ್ವರವಮಾಡಿ, ಅತಿಥಿಯನ್ನು ಕರೆಯುವವೋ ಎಂಬಂತೆ ತೋರಿಕೊಂಡವು. ಹರಿ......ತೋರುವರ=ಕೃಷ್ಣ ಬಲರಾಮರು ಗೋಪಾಲ ಬಾಲರೊಡನೆ ಅಡವಿಯಲ್ಲಿ ತಿರುಗಿ ವೃಕ್ಷ ಮೃಗಾದಿಗಳು ತಮ್ಮನ್ನಾದರಿಸುವಂತೆ ಕಂಡು, ತಮ್ಮನ್ನು ನೋಡಿ ಅತ್ಯಂತಾನಂದವನ್ನು ತೋರುವ ಆ ತಿರ್ಯಗ್ಜಾತ್ಯಾದಿಗಳ ಧರ್ಮಶ್ರದ್ಧೆಯನ್ನು ಕಂಡು ಆಶ್ಚರ್ಯದಿಂದ ಅವುಗಳ ವಿಷಯದಲ್ಲಿ ಸರಸ ಮಾತುಗಳನ್ನಾಡಿದರು. ಜಗದ...ಬಲ್ಲದವ=ಮುಕುಂದನು ಜಗದೊಡೆಯನಾಗಿದ್ದುಕೊಂಡು ದಣಿದನೆಂಬುವದು ವಿಚಾರಕ್ಕೆ ಅರಿದಲ್ಲವೇ? ಸದನತ್ರಯನ.=ಶ್ವೇತದ್ವೀಪ, ಅನಂತಾಸನ, ವೈಕುಂಠಗಳೆಂಬ ಮೂರು ಮನೆಗಳುಳ್ಳವ. ಹದಿ...ದ್ಯದನ=ಪ್ರಳಯ ಕಾಲದಲ್ಲಿ ಹದಿನಾಲ್ಕು ಲೋಕಗಳನ್ನು ತಿನ್ನುವವನು. ಮುನಿಜನೇಡ್ಯನು=ಮುನಿಜನಗಳಿಂದ ಸ್ತೋತ್ರ ಮಾಡಿಸಿಕೊಳ್ಳಲು ಯೋಗ್ಯನು. ೨೩೫ ನುಡಿಗಳು. ಸಾಂಗತ್ಯವೃತ್ತದಂತಹ ಚರಣಗಳು.

---

೨೭

ಮುಖಾರಿ ರಾಗ. ಏಕ ತಾಳ.

ಶ್ರೀಮಾಧವ ಬಲರಾಮರ ಸಖ ಶ್ರೀ । ದಾಮ ಬಿನ್ನವಿಸಿದ ಹಂಗೆ ।
ತಾಮಸ ಧೇನುಕನೂ ಮದಮತ್ತನು । ಈ ಮಹಾ ತಾಳ್ವನದೊಳಗೆ ॥ಪಲ್ಲ॥

ಖರನಾಕೃತಿಯಲಿ ಖಳನಿಕರದ ಗೂ । ಡಿರುವನು ಬರಗೊಡದೊಬ್ಬರಿಗೆ ।
ಸುರಭಿಸುರಸಫಲ ದುರಗಮವಾಗಿವೆ । ಹರಿ ನೀ ಕರುಣಿಸು ನಮಗೆ ॥೧॥

ಸುಖಮಯಮೂರುತಿ ಸಖನನುಡಿಗೆ ನಗೆ । ಮುಖದಲಿ ಕೂಡಿ ಗೋವರನು।
ಕುಖಳನ ತಾಳ್ವನ ಅಕ್ಕರದಿ ಪೊಕ್ಕು ತರು । ನಿಕರಗಳಲ್ಲಾಡಿದನು ॥೨॥

ಇತ್ತೆಣಿಕಿಲ್ಲದ ಕತ್ತೆಬಳಗದೊಳು । ಶತ್ರುಧೇನುಕ ಕೊಲಬಂದ ।
ಖ್ಯಾತ್ಕರಿಸುತ ಕಿವಿ ಎತ್ತಿ ಹಿಂಗಾಲ್ಗಳ । ಲೊತ್ತ್ಯೊದೆಯುತಲವನಿಂದ ॥೩॥

ಹೇಸರಗತ್ತೆಯ ತಾ ಸತ್ವರದಲಿ । ಬೀಸಿ ವೃಕ್ಷಾಗ್ರಕೆ ಒಗೆವ ।
ವಾಸುದೇವ ಮತ್ತಾಸಂಕರುಷಣ । ರಾಸಭಗಳನೆಲ್ಲ ಸಿಗಿದ ॥೪॥

ದುರುಳರು ತಮಸಿಗೆ ತೆರಳಲು ದುಂದುಭಿ । ಅರಳು ಮಲ್ಲಿಗೆಯು ಸೂಸಿದರು।
ತರಳನುಕುಂದನ ಸರಳ ವಿಕ್ರಮಂಗಳ । ಮರಳಿ ಮರಳಿ ಸಂರಸ್ತೊಗಳಿದರು ॥೫॥

ಸಂರಭಿಸದೃಶದಿಂ ಭರಿತ ಫಲಂಗಳ । ಹರಿ ಚಿರ ಗೋವರಿಗುಣಿಸಿದನು ।
ಹರುಷದಿ ಎಲ್ಲರು ಹರಿಯ ಗುಣಂಗಳ।ಸ್ಮರಿಸುತ ಗೋಗಳ ಮೇಸಿದರು॥೬॥

ನಳಿನದಳಾಂಬಕ ಬಲಗೋವಳರಿಂ। ಫಲಗಳ ಭುಂಜಿಸಿ ಮುದದಿ ।
ತಲೆಯಲಿ ಬರ್ಹಿ ಪೂಗಳ ಮುಡಿದಾಕಳು । ಗಳ ಕೂಡಿ ಬರುತಿಹ ವನದಿ ॥೭॥

ಸಿಂಗರವಾಗಿರೆ ಮುಂಗುರುಳೋಳಿಗೆ । ಮಂಗಳ ಗೋಖುರ ಧೂಳಿ ।
ಹೆಂಗಳ ಗೋಪೆರ ಕಂಗಳ ಮಧುಕರ । ರಂಗಾಸ್ಯಾಬ್ಜದ ಕೇಳಿ ॥೮॥

ಮೃಗಶಾಬಾಕ್ಷೆರ ಬಗೆಗೊಳುತೀಕ್ಷಿಪ । ಮುಗುಳು ನಗೆಯ ಸವಿನೋಟ ।
ಝುಗಿಝುಗಿಪಾಭರಣಗಳಿಗೆ ಭೂಷಣ । ದ್ಯುಗರು ಮೋಹಿಪ ಮೈಮಾಟ॥೯॥

ಹೆಂಗಳ ವಿಸ್ಮರ ಕಂಗಳ ಹಸಿವೆಗೆ । ರಂಗನ ವದನವೆ ಆಪ್ಯಾಯನ ।
ಪೊಂಗೊಳಲು ಶ್ರವಣಂಗಳ ಕ್ಷುಧೆಗೆ ಕ್ಷಣಂಗಳಿಗೆಲ್ಲ ಆಪ್ಯಾಯನ ॥೧೦॥

ನಳಿನಾಕ್ಷನ ಮುಖ ಬೆಳದಿಂಗಳಿನಲಿ । ಲಲನೆರ ನಯನಚಕೋರಂ ।
ನಲಿದವು ನಾಭಿಯ ಸಲಿಲಾಶಯದಲಿ । ಹೊಳೆವಕ್ಷಿಮೀನವಿಹಾರಾ ॥೧೧॥

ಚೆಲುವಪಾದಾಂಬುಜಗಳ ರಸವುಂಬುವ । ಅಳಿಗಳ ಸರಿಯಕ್ಷಿಭೃಂಗ ।
ಕೆಳದಿ ಗೋಪಿಯರ ಸುಲಲಿತ ಮನದಲಿ । ಹೊಳೆವುದು ಹರಿಯ ಸರ್ವಾಂಗ ॥೧೨॥

ಸವಿ ಹರಿನಾಮಗಳ ಸವಿಯುದವ್ಯತಕಣ। ಯುವತೆರ ಜಿಹ್ವೆಗಾನಂದ ।
ನವಭಕುತಿಯ ರಸ ನವಕದ ಚೆಲುವೆಯರು । ಟವಟವಿಪರು ಮುಖದಿಂದ
॥ ೧೩ ॥

ಶ್ರೀ ಗೋವಿಂದನು ಗೋಗಳ ಸಹ ವ್ರಜ। ಕಾಗಿ ಬರಲು ಜನನಿಯರು ।
ಜೇಗಪ್ಪಲು ವನದಾಗಿನ ವಾರ್ತೆಯ । ಆ ಗೋಪರು ಹೇಳಿದರು ॥ ೧೪ ॥
ಖಳರ ವಧಿಸಿ ಬಲು ಬಳಲ್ಪಿರೆನುತ ಪರಿ । ಮಳಜಂತೈಲದಲೆರೆದು ।
ಕಲಧೌತಾಂಬರ ಮಲಯಜವ್ಯಜನ ಸ್ರ । ಗ್ಗಳ ವೃಷ್ಟ್ಯೋದನದಿಂದ ॥೧೫
ನಿಜಸುಖಪೂರ್ಣನ ಭಜಿಸೆ ಸುಜಪವನು। ಸುಜನನಿ ತಾ ಮಾಡಿಸಲಂದು ।
ತ್ರಿಜಗತ್ಪತಿ ಮುಕ್ತಜನವಂದಿತಪದ । ರಜನಿಯಲೊಪ್ಪಿದನಂದು ॥೧೬॥
ಪ್ರಸನ್ನತರಚರಿತ ಪ್ರಸನ್ನಯಶೋಂಕಿತ । ಪ್ರಸನ್ನಮೂರುತಿ ದೀನಬಂಧು ।
ಪ್ರಸನ್ನವೆಂಕಟಕೃಷ್ಣ ಪ್ರಸನ್ನಗತಿಪ್ರದ । ಪ್ರಸನ್ನನಾಗಲಿ ನಮಗಿಂದು॥೧೭॥

---

ಶಬ್ದಾರ್ಥಃ—ತಾಳ್ವನ=ತಾಳೇವನ. ಖರ=ಕತ್ತೆ ದುರಗಮ=ಅಸಾಧ್ಯ (ಹೋಗಿತರಲು) ಖ್ಯಾತ್ಯರಿಸುತ್ತ=ಒದರುತ್ತ. ರಾಸಭ=ಕತ್ತೆ. ಸಿಗಿದ=ಸೀಳಿದನು. ಸುರಭಿ=ಅಮೃತ. ಓಳಿ=ಸಮೂಹ. ಮೃಗಶಾಬ=ಜಿಗರಿಮರಿ. ದ್ಯುಗರು=ದೇವತೆಗಳು. ಆಸ್ವಾದನ=ಭಕ್ಷ್ಯ (ತಿನಿಸುವದು) ಕ್ಷಣಂಗಳಿಗೆ=ಪ್ರತಿಕ್ಷಣಕ್ಕೆ. ಸಲಿಲಾಶಯ=ಸರೋವರ. ಕೇದಿ=ಗೆಳತಿ. ನವಕ=ಒಯ್ಯಾರ. ಟವಟವಿಪ=ಕೆಳತುಂಬಿರು. ಕಲಧೌತಾಂಬರ=(ಬಂಗಾರ ಬಣ್ಣದ) ಪೀತಾಂಬರ. ಮಲಯಜ=ಶ್ರೀಗಂಧ. ವ್ಯಜನ=ಬೀಸಣಿಕೆ. ಸ್ರಕ್=ಹೂಮಾಲೆ.

ವಿ. ಸಂ.:—ಹೆಂಗಳ......ಕೇಕಿ=ರಂಗನ ಮುಖಕಮಲದಲ್ಲಿರುವ ಗೋಪಸ್ತ್ರೀಯರ ಕಣ್ಣುಗಳೆಂಬ ಭ್ರಮರಗಳಿಗೆ (ಮುಂಗುರುಳುಗಳ ಸಮೂಹವು) ಆಟವಾಗಿತ್ತು. ಆವರೆ ರಂಗನ ಮುಖವೆಂದರೆ ಕಮಲವು. ಅದರ ಎಸಳಾಗಿಹ ಮುಂಗುರುಳುಗಳು ಅವುಗಳಮೇಲಿರುವ ಗೋಖುರ. ಧೂಳಿಯೇ ಪರಾಗವು. ಈ ಪರಾಗಕ್ಕೆಂದು ಮುತ್ತುವ ಭೃಂಗಗಳೇ ಗೋಪಿಯರ ಕಣ್ಣುಗಳು. ನಳಿನಾಕ್ಷ......ಚಕೋರನಲಿದವು=ಬೆಳದಿಂಗಳು ಬರುತ್ತಲೇ ಚಕೋರಗಳು ನಲಿಯ ಹತ್ತುವವು. ಅದರಂತೆ ಕೃಷ್ಣನ ಮುಖಕಾಂತಿಯೆಂಬ ಬೆಳದಿಂಗಳು ಆದರೆ ಕೃಷ್ಣನ ಮುಖವನ್ನು ನೋಡಿ ಗೋಪಿಯರಿಗೆ ಆನಂದವಾಯಿತು. ನಾಭಿಯ......ವಿಹಾರ=ನಾಭಿಸರೋವರದಲ್ಲಿ ಹೊಳಪಿನ ಗೋಪಿಯರ

ಕಣ್ಣುಗಳೆಂಬ ಮೀನಗಳು ಚಲ್ಲಾಟವಾಡುತ್ತಿದ್ದವು. ಅಂದರೆ ಕಣ್ಣು ನಾಭಿಯನ್ನು ನೋಡುವಲ್ಲಿ ಸಕ್ತವಾಗಿದ್ದವು. ಸಾಂಗತ್ಯವೃತ್ತ ನುಡಿಗಳು ೨೫೨.

---

೨೮.

ಸೌರಾಷ್ಟ್ರರಾಗ—ಅಷ್ಟತಾಳ.

ಕಾಳಿಯ ಫಣಿ ಮದಹರಣಾ । ಕೃ– । ಪಾಳು ಸುಜನರಾಭರಣಾ ॥
ಶ್ರೀಲಾಲಿತ ಮಂಗಲಚರಣ । ಮತ್ತ । ಖೂಳದನುಜ ಸಂಹರಣಾ
॥ ಪಲ್ಲ ॥

ಯಮುನೆಯೊಳೇಕದೇಶದಲಿ । ಅಹಿ । ರಮಣ ಕಪಟಿ ಹೊಂದಿರಲಿ ॥
ಅಮಲಜಲವು ವಿಷವಾಗಿ । ತೀರ । ಕ್ಷಮೆಗೆ ಹತ್ತಿದಂತೆ ಬ್ಯಾಗಿ ॥ ೧ ॥

ತೀರದ ತೃಣ ವೃಕ್ಷಗುಲ್ಮ । ಶಕೆ । ಸಾರಿ ಸುಟ್ಟರೆ ಅಲ್ಲಿಗೊಮ್ಮೆ ॥
ವೀರ ಗರುಡನವಿರ್ಮೂರಿತವ । ಕುಂಭ । ಹೇರಿ ಕದಂಬನುಳುಹಿದ ॥ ೨ ॥

ಒಂದು ದಿನವು ಗೋವಿಂದ । ಬಲ । ಬಾಂಧವನುಳಿವಲ್ಗೋದ ॥
ಚಂದದಿ ಗೋವಳರಿಂದ । ಗೋ । ವೃಂದವ ಚರಿಸುತನಿಂದ ॥ ೩ ॥

ಆಗಲೆ ನೀರಡಿಸಿದರು । ತಾವು । ಬೇಗ ಯಮುನೆಗೈದಿದರು ।
ಗೋಗೋವರು ವಿಷಜಲವಾ । ಕುಡಿ । ದಾಗಳೆ ನೀಗಿದರಸುವಾ ॥ ೪ ॥

ಯೋಗೇಶ್ವರನಾದ ರಂಗ । ದ । ಯಾಗುಣ ಕರುಣಾಪಾಂಗಾ ।
ಬೇಗನೆಬ್ಬಿಸಲಾಗವರು । ಹ । ರಿ ಗೋವಿಂದನೆಂದೆದ್ದರವರು ॥ ೫ ॥

ಪಾಹಿ ಪಾಹಿ ಕರುಣಾಳೋ । ಪಾಹಿ । ಪಾಹಿ ತಪ್ಪುಗಳನ್ನು ತಾಳೋ ।
ದೈಹಿಕ ಚಿಂತಾಮಣಿಯೆ । ಖಳ । ದಾಹಕ ಸದ್ಗುಣಖನಿಯೆ ॥ ೬ ॥

ಬಹಳಸ್ತುತಿಯ ಮಾಡಿದರು । ಮಹಾ । ಮಹಿಮನ ನೊರೆಹೋಗಲವರು ॥
ಅಹಿವರಶಯನ ಮುರಾರಿ । ಎನಲು । ವಹಿಲದೆ ಸಲಹಿದ ಶೌರಿ ॥ ೭ ॥

ಕಡವಿನ ಮರತುದಿಗೇರಿ । ಗಾಢ । ನಡುಬಿಗಿದಂಬರ ಹರಿ ।
ಘುಡು ಘುಡಿಸುತ ಧುಮುಕಿದನು । ವಿಷ । ಮಡುವನು ಹರಿ ಕದಡಿದನು
॥ ೮ ॥

ಸಂಕ್ಷೋಭಿಸಿ ಜಲವುಬ್ಬೆ । ಹಾ । ರ್ಯಾಕ್ಷಣ ಶತಧನು ಹಬ್ಬೆ ॥
ಅಕ್ಷಯ ವಿಕ್ರಮ ಹರಿಗೆ । ಮ । ತ್ತೀಕ್ಷುದ್ರಬಲವೇನವಗೆ ॥ ೯ ॥
ಭೀಷಣತರೆಗಳೆದ್ದಾಡೆ । ಮ । ತ್ತಾಶಿವಿಷನಿದನೋಡೆ ॥
ವಾಸಸ್ಥಾನಕೆ ಇಲ್ಲಿ ಬಂದು । ಈ । ಕ್ಲೇಶನಿತ್ತವನಾರೆಂದು ॥ ೧೦ ॥
ರೋಷದಿ ಎದ್ದವನಾಗಾ । ವಿಷ । ಶ್ವಾಸವನುಗುಳುತಲಾಗ ॥
ವಾಸುದೇವನ ಕಚ್ಚಬಂದ । ಕೊಂದು । ಘಾಸಿಸುವೇನೆಂದ ಮಂದ ॥ ೧೧ ॥
ಅಹಿಭಕ್ಷಕವಾಹನನ । ಈ । ಅಹಿ ಕಟ್ಟಿದ ಬಿಗಿದವನ ॥
ದಹಿಸುತ ಮೈಸುತ್ತಿದನು । ಹರಿ । ಬಹು ತಪ್ಪನು ತಾಳಿದನು ॥ ೧೨ ॥
ನೀಲನೀರದಶರೀರ । ಶ್ರೀ । ಲೋಲ ಸುಂದರ ಸುಕುಮಾರಾ ॥
ಕಾಲಾಹಿವೇಷ್ಟಿತ ತಾನು । ತನ್ನ । ಲೀಲೆಯಿಂ ನಿಶ್ಚೇಷ್ಟಿತನು ॥ ೧೩ ॥
ರಕ್ಕಸಹರಣನ ಕಂಡು । ಅತಿ । ದುಃಖದಿ ಗೋಗಳ ಹಿಂಡು ॥
ಸಖ್ಯದ ಸಖಗೋವಳರು । ಚಿ । ತ್ತಖೇದದಿ ರೋದಿಪರು ॥ ೧೪ ॥
ಶ್ರೀವತ್ಸದ ಲಾಂಛನನು । ಹಾ । ಸಾವಲೋಕದ ಚನ್ನಿಗನು ॥
ಶ್ರೀವಕ್ತ್ರದಿ ತೋರಿದನು । ಸ । ರ್ಪಾವೇಷ್ಟಿತನೊಪ್ಪಿದನು ॥ ೧೫ ॥
ಇತ್ತಲಿ ಗೋಕುಲದೊಳಗೆ । ಬಹು । ಉತ್ಪಾತವ ಕಾಣುತಾಗೆ ॥
ಹೃತ್ತಾಪದಿ ಬಳಲಿದರು । ಬಲ । ನುಕ್ತಿಯ ಕೇಳದಲವರು ॥ ೧೬ ॥
ಬಂದರು ಹರಿಯಿದ್ದೆಡೆಗೆ । ಗೋಪಿ । ನಂದಾದಿ ಗೋವರು ಬ್ಯಾಗೆ ॥
ಕಂದ ಕೃಷ್ಣನ ನೋಡಿದರು । ಮನ । ನೊಂದು ಶೋಕಾರ್ಣವದಿಹರು ॥ ೧೭ ॥
ಬಲನಾಶ್ರಯಿಸಿ ಬಂದಿಹರ । ಗೋ । ವಳರಾರ್ತಿವ ಪರಿಹಾರಾ ॥
ಖಳಭಕ್ತನುಕ್ಕನು ಮುರಿದಾ । ಅವನ । ತಲೆಯುಲಿ ತಾಂಡವನಾಡಿದ ॥೧೮॥
ಚಿತ್ರವಿಚಿತ್ರ ತಾಂಡವನು । ನಕ್ಷತ್ರಕುಲಪನಾಡಿದನು ॥
ಧಾತ್ರ್ಯಾದ್ಯರು ಸ್ತುತಿಸಿದರು । ದೇ । ವಸ್ತ್ರೀಯರು ನಟಿಸಿದರು ॥೧೯॥
ಗಂಧರ್ವರು ಪಾಡಿದರು । ಸುರ । ದುಂದುಭಿಗಳ ನುಡಿಸಿದರು ॥
ಅಂದದಿ ಪೂಮಳೆಗರೆದರು । ಆ । ನಂದಾಬ್ಧಿಯುಲಿ ನಲಿದರು ॥ ೨೦ ॥

ದುಷ್ಟಾಹಿಯ ಫಣಗಳಲಿ । ಶ್ರೀ । ಕೃಷ್ಣನು ನರ್ತಿಸುತಿರಲಿ ॥
ಕಟ್ಟಿಸಿದನು ಕಾಳಿಂಗಾ । ಮದ । ಬಿಟ್ಟನು ನಿರ್ವಿಣ್ಣಾಂಗ ॥ ೨೧ ॥
ನೆತ್ತರವನು ಕಾರಿದನು । ಬಹು । ವಕ್ತ್ರದಲಾ ಅತಿವಿಷನು ॥
ಭಕ್ತಸುಳುಹಿ ನಂದಸೂನು । ಪದ । ನೃತ್ಯಕಟ್ಟಣ ನಿಲಿಸಿದನು ॥೨೨॥
ಕಾಯದಿ ಬಲು ಕುಂದಿಸಿದಾ । ತಾ । ಸಾಯುಲು ನಿಶ್ಚಯಿಸಿದಾ ॥
ಆಯುಸದಿಂದ ದುಃಖಪಟ್ಟ । ನಾರಾಯಣನಲಿ ಚಿತ್ತವಿಟ್ಟ ॥ ೨೩ ॥
ಕಂಡರು ಅಹಿರಾಜನನು । ಬಹು । ಹೆಂಡರು ನಿರ್ವಿಷನನ್ನು ॥
ಕೊಂಡಾಡಿದರು ಜಗದ್ಗುರುವೆ । ಫಣಿ । ದಂಡಾರ್ಹನು ಅಹುದೇವೆ
॥ ೨೪ ॥
ದಂಡಿಸಿದದ್ದುಚಿತ ನಮ್ಮೊಳು । ಬುಧ । ಮಂಡಲಕೆಲ್ಲ ದಯಾಳೂ- ।
ದಂಡನೆ ತಪ್ಪುಗಳ ತಾಳು । ನಮ್ಮ । ದಂಡಪ್ರಣಮತುತಿ ಕೇಳು ॥೨೫॥
ನಿನ್ನಿಂದುದುಭವಸ್ಥಿತಿಯು । ಹರಿ । ನಿನ್ನಿಂದ ಜಗಕಪ್ರಯವು ॥
ನಿನ್ನಿಂದ ಬಂಧನ ಮೋಕ್ಷ । ಹರಿ । ನಿನ್ನಿಂದ ಸುರರಪರೋಕ್ಷ
॥ ೨೬ ॥
ಬಂದ ನಿನ್ನ ದಾಸಿಯರ ನೋಡೋ । ನಮ । ಗಿಂದ್ಯೆದೆತನವನು ನೀಡೋ॥
ಬಂದೆನಲವರ ನೋಡಿದನು । ಪದ । ದ್ವಂದ್ವಕಟ್ಟಣ ನಿಲಿಸಿದನು ॥ ೨೭ ॥
ದುಷ್ಟನ ಮದವಿಳುಹಿದನು । ಶ್ರೀ । ಕೃಷ್ಣನವನನುಳುಹಿದನು ॥
ನಷ್ಟೇಂದ್ರಿಯಪ್ರಾಣಾದವನು । ಬಂ । ದಿಷ್ಟು ಸ್ವಸ್ಥನಾದನವನು ॥ ೨೮ ॥
ವಂದಿಸಿವನು ವಿನಯಪಲಿ । ಸಲ । ಹೆಂವರ್ಚನೆಯ ವಿಧಿಯಲಿ ॥
ಅಂಪವ ಮಾಡಲು ಕೃಷ್ಣ । ಸ್ಥಳ । ಸಿಂಧುವಿನಲಿ ಮಾಡಿಟ್ಟ ॥ ೨೯ ॥
ಗರುಡನ ಭಯ ನೀಗಿಸಿದ । ತನ್ನ । ಚರಣಾಂಬುಜದಲಿ ಚಿಹ್ನಿಸಿದಾ ॥
ಉರಗನ ಪೆಡೆಯ ಶೋಭಿಸಿದ । ನಿಜ । ಚರಣಶರಣನ ಸಲಹಿದ ॥೩೦॥
ಅಭಯವ ಕೊಟ್ಟವನಟ್ಟ । ಈ । ತ್ರಿಭುವನಕೊಬ್ಬನೆ ಜಟ್ಟ ॥
ಅಬಲೆ ಯಮುನೆಯುಂಬುವನು । ಸುಧೆ । ನಿಭವಮಾಡಿದನು
ಮಹಿಮನು ॥ ೩೧ ॥

ಶುಕಮುನಿ ನೃಪಗ್ಹೇಳಿದನು । ನೃಪ । ಭಕುತಿಭರಿತ ಕೇಳಿದನು ॥
ಅಕಳ ಕಾವನ ಚರಿತೆಯನು । ಚತು । ರ್ಮುಖಭವರುಪೇಳ್ವುದನು ॥ ೩೨ ॥

ಹರಿಯಾಶ್ಚರ್ಯ ಕರ್ಮಗಳ । ಉ । ಚ್ಚರಿಸುತ ಗೋವರ ಮೇಳ ॥
ಹರುಷದಲಾರಾತ್ರಿಯಲಿ । ಸು । ಸ್ಥಿರಸಾದರು ಯಮುನೆಯಲಿ ॥ ೩೩ ॥

ನಂದನ ಸತಿ ಸುಖಿಸಿದಳು । ತನ್ನ । ಕಂದನ ಬಿಗಿದಪ್ಪಿದಳಃ ॥
ನಂದಾದ್ಯಖಿಳಗೋವಳರು । ಅಲ್ಲಿ । ಯೊಂದ್ಯಾಮಿನಿಯು ನೂಕಿದರು ॥ ೩೪ ॥
ಆ ನಿಶಿ ದಾವಾಗ್ನಿಯನು । ನುಂಗ್ಯಾ । ನಖಿಳರ ಸಲಹಿದನು ॥
ಸ್ಥಾನಕೆ ಸುಖದಿ ಐದಿದರು । ದ । ಯಾನಿಧೆ ದಯಪೂರ್ಣರು ॥ ೩೫ ॥
ಇಂತಾಮರಮುನಿಗೇಯಾ । ಅ । ನಂತಾದ್ಭುತಶುಭಚರಿಯಾ ॥
ಸಂತಸವಿಬುಧಸಂಪ್ರಿಯಾ । ವಿ । ಶ್ರಾಂತಿರಹಿತಗುಣಗೇಹಾ ॥ ೩೬ ॥

ಈ ಕಾಳಿಯ ಉದ್ಧರಣ । ಪಾ । ಪಾಕರಷಣ ಸುಖಕಾರಣ ॥
ಶ್ರೀಕರ ಪ್ರಸನ್ವೆಂಕಟೇಶಾ । ಸ । ರ್ವದಾ ಕರುಣಿಪನು

ಸರ್ವೇಶಾ ॥ ೩೭ ॥

ಶಬ್ದಾರ್ಥ:— ಅಹಿ=ಹಾವು. ಅಮಲ=ಸ್ವಚ್ಛ. ಕ್ಷಮೆ= ಭೂಮಿ. ಗುಲ್ಮ=ಕಂಟಿಯ ಗುಂಪು. ಸಾರಿ=ಹತ್ತಿ. ಒಮ್ಮ=ಒಮ್ಮೆ. ಅಮೃತ=ಅಮೃತ. ಕುಂಭ=ಕೊಡ. ಕದಂಬ=ಕಡಾಲದ ಮರ. ಐದಿದರು=ಹೋದರು. ನೀಗಿದರು=ಕಳೆದುಕೊಂಡರು ಅಸು=ಪ್ರಾಣ. ಅಪಾಂಗಾ=ಕಡೆಗಣ್ಣ ನೋಟ. ಚಿಂತಾಮಣಿ=ಕೇಳಿದ್ದನ್ನು ಕೊಡುವ ಒಂದು ರತ್ನ. ದಾಹಕ=ಸುಡುವ. ವಹಿಲದಿ=ಬೇಗ ದಿಂದ. ಶೌರಿ=ಶ್ರೀಕೃಷ್ಣ. ಅಕ್ಷಯ=ನಾಶರಹಿತ. ವಿಕ್ರಮ=ಪರಾಕ್ರಮ. ಆಶಿವಿಷ= (ಮುಖದಲ್ಲಿ ವಿಷವುಳ್ಳದ್ದು) ಹಾವು. ನಾಗ=ಹಾವು. ಘಾಶಿಬ=ತೊಂದರೆಗೊಳಿಸು. ನೀಲನೀರದ=ನೀಲಮೇಘ. ಕಾಲಾಹಿ=ಕಾಳಿಯಸರ್ಪ. ಲಾಂಛನನು=ಗುರುತುಳ್ಳವನು. ಚೆನ್ನಿಗನು=ಸುಂದರ. ವಕ್ತ್ರ=ಮುಖ. ವೇಷ್ಟಿತ=ಸುತ್ತಲ್ಪಟ್ಟವನು. ಉಕ್ತಿ=ಮಾತು. ಆರ್ತ=ದುಃಖಿದ. ತಾಂಡವ=ಕುಣಿತ. ಧಾತ್ರಿ= ಭೂಮಿ. ನಕ್ಷತ್ರಕುಲಪ=ಚಂದ್ರ. ನಲಿ=ಕುಣಿ. ತುತಿ=ಸ್ತೋತ್ರ. ಅಪ್ಪಯವು=ನಾಶ (ಅಪಾಯು). ಐದೇತನವನು=ಮುಕ್ತ್ಯೈದೆತನವನು. ಅರ್ಚನೆ=ಪೂಜೆ. ಸಿಂಧು=ಸಮುದ್ರ. ಯಾಮಿನಿ=ರಾತ್ರಿ. ನಿಶಿ=ರಾತ್ರಿ.

ವಿ. ಸಂ.— ಸುಜನಾಭರಣ=ತನ್ನಲ್ಲಿಯೇ ರತರಾದಂಥ ಸಜ್ಜನರಿಗೆ ಆಭರಣಗಳನ್ನು ಧರಿಸಿ ಕೊಳ್ಳುವದು ಸುಲಭವಿದ್ದಂತೆ, ಸುಲಭವಾಗಿಕೈಸಿಕ್ಕು, ಅವರಿಂದ ಧರಿಸಲ್ಪಟ್ಟು, ಆನಂದಕೊಡುವವನು.

ಅಹಿ.........ದಿರಲಿ=ಕಪಟಿಯಾದ ಸರ್ಪರ ಒಡೆಯನಾದ ಕಾಳಿಯು ವಾಸವಾಗಿರಲು. ಶತಧನು ಹಬ್ಬಿ=ಶತ (ನೂರು) ಬಿಲ್ಲುಗಳ ಪ್ರಮಾಣಾಂತರವನ್ನೇ ವ್ಯಾಪಿಸಲು. ಅಹಿ........ವಹನನ=ಸರ್ಪಗಳಿಗೆ ವೈರಿಯಾದ ಗರುಡನನ್ನೇ ವಾಹನವನ್ನಾಗಿ ಮಾಡಿಕೊಂಡವ (ವಿಷ್ಣು) ಸಲಸೇದರ್ಶನೆಯು ವಿಧಿಯುಲಿ=ವಿಧಿಪೂರ್ವಕವಾಗಿ ಪೂಜಿಸಲು. ಅಂದವ ಮಾಡಲು= ಅಂದು (ಆದಿನ) ಅವನು (ಪೂಜೆಯನ್ನು)ಮಾಡಲು. ಸಂತತ ವಿಭುಧಸುಪ್ರಿಯ=ಆನಂದರೂಪಿಯಾದ, ತನ್ನ ಭಕ್ತರ ಮೇಲೆ ಚನ್ನಾಗಿ ಪ್ರೇಮಮಾಡುವವನು. ವಿಶ್ರಾ.........ಗೇಹಾ=ಯಾವಾಗಲೂ ಪರಮಾತ್ಮನಲ್ಲಿಯೇ ಮನವಿಟ್ಟ ಗುಣಿಗಳಿಗೆ ಆಶ್ರಯನು. ಪಾಪಾ.......ಕರಣ=ಪಾಪಸಮೂಹವೇ ಉಳ್ಳಂಥವರ ಪಾಪವನ್ನು ಕ್ಷಣದಲ್ಲಿ ನಾಶಮಾಡುವದಕ್ಕೆ ಕಾರಣನು. ನುಡಿಗಳು ೩೮. ಸಾಂಗತ್ಯವಿಭೇಧವು.

---

೨೯

ಭೈರವಿರಾಗ. — ಅಟತಾಳ.

ಕಾಲಕಾಲ ದುರಿತಕೋಲಾಹಲದಿಂ ವ್ರಜಾ । ಜಗತ್ ।
ಪಾಲ ಪಾಲಿಸುತಿದ್ದ ನಂದನಾತ್ಮಜಾ ॥ ಪಲ್ಲ ॥

ಜನಕೆ ತುಷ್ಟಿಯಿಲ್ಲದಿಹ ಗ್ರೀಷ್ಮಋತು ಬರಲ್ ।
ವನಜನಾಭನಾಜ್ಞೆಯಿಂ ವಸಂತಕಾಲದೋಲ್ ॥
ದಿನದಿನಕ್ಕೆ ಅಧಿಕ ಸೌಖ್ಯದೋರಿ ಸಕಲರ
ಮನಸಿಗುಲ್ಲಾಸವಾಯ್ತು ಕೃಷ್ಣರಾಮರ ॥ ೧ ॥

ಒಮ್ಮೆಂದೊಮ್ಮೆ ವಿಷದ ಗಾಳಿಯಲ್ಲಿ ಬೀಸಿತು ।
ದುಮ್ಮನದಿಂದುಪದ್ರ ಜನವಿನಾಶಮಾಡಿತು ॥
ಬಮ್ಮನಿಂದವಧ್ಯವರವನೈದಿ ಉಗ್ರನೂ ।
ಆ ಮ್ಮಹಿಯಲ್ಲಿ ದೈತ್ಯ ವೃಕ್ಷರೂಪಿಲಿದ್ದನು ॥ ೨ ॥

ವೃಕ್ಷಗಂಧಗಾಳಿ ಸೋಕಿ ಸಕಲ ತರುಗಳು ।
ಕಕ್ಷವಹನವಾಗಿ ಹೋಗಿ ಕಾಡಕಿಚ್ಚಿನೋಳು ॥
ಆ ಕ್ಷಣಕ್ಕೆ ಒಣಗಿ ಹೋಗಿ ಪತ್ರಪುಷ್ಪಫಲ ।
ಅಕ್ಷಿಗೋಚರವಿಲ್ಲದಾಗೆ ಬತುಳ ಮಂಗಳ ॥ ೩ ॥

ಅದರ ಗಾಳಿ ಬೀಸಿ ರೋಗಗಳು ನರರು ರೋವತು ।
ಬೆದರುಪದ್ರ ಬಂದು ಬಿದ್ದರು ಬಲಮುಖಾದ್ಯರು ॥
ಸುದರಶನ್ನಧರನು ಸೀಳಿದ ವಿಷದ ತರುವನು ।
ಮುದವನಿತ್ತು ಹೊರೆದ ಅಗ್ರಜ ಗೋವುಪ್ರಜರನು ॥ ೪ ॥

ಸಕಲರಾರೋಗ್ಯಭಾಗ್ಯವಂತರಾದರು ।
ಮುಕುತವಂದ್ಯನಂಘ್ರಿ ಸೋಂಕಿ ಶಾಂತಪೂರ್ಣರು ॥
ಭಕುತಿಜ್ಞಾನವೈರಾಗ್ಯಯುಕುತರಾದರು ಜೀವನ್– ।
ಮುಕುತರಾಗಿ ಅಜನ ಲೋಕದಂತೆ ಬಾಳ್ದರು ॥ ೫ ॥

ಸಿಟ್ಟಿನೇಳು ಗೂಳಿಗಳನು ಶೀಘ್ರ ಸದೆದನು ಶ್ರೀ– ।
ಕೃಷ್ಣ ಕುಂಭಕನ್ನ ಕನ್ನಿಕೆಯಾಳ್ದ ಧೀರನು ॥
ದುಷ್ಟಮಥನ ಪುಣ್ಯಕಥನ ಯಶೋದೆಯುಂಣನ ।
ಶಿಷ್ಟತನುಜೆ ನೀಲಾದೇವಿಯುರಸ ಮೋಹನ ॥ ೬ ॥

ಹೀಗೆ ಶ್ರೀಕೃಷ್ಣರಾಮರಾಜರಣೆಗಳು ನಿತ್ಯ– ।
ಯೋಗಿಜನರ ಹೃದಯು ಧ್ಯಾನ ಜ್ಞಾನಕೊಪ್ಪಲು ॥
ಪೂಗಣೆಯುನಾಟ ಪುಣ್ಯ ಗೋವಳೆಯುರೊಳು ಪೂರ್ಣ– ।
ಭೋಗಿ ಪ್ರಸನ್ವೆಂಕಟಕೃಷ್ಣನ ಆಜ್ಞೆ ಮೆರೆಯುಲು ॥ ೭ ॥

ಶಬ್ದಾರ್ಥ:—ದುರಿತ=ಪಾಪ. ಓಲ್=ಅಂತೆ, ಹಾಗೆ. ದುಮ್ಮಾನ=ಚಿಂತೆ. ಅವಧ್ಯ=ಕೊಲ್ಲಲ್ಪಡಲಶಕ್ಯವಾದ. ಐದಿ=ಹೊಂದಿ. ಕಕ್ಸೆ=ಬದಿ, ಹತ್ತಿರ. ಉಪದ್ರ=ಪಿಡುಗು. ಸದೆದನು=ಕೊಂದನು. ಪೂಗಣೆಯು=ಕಾಮ.

ವಿ. ಸಂ:— ವಸಂತಕಾಲವು ಹೋಗಿ, ಗ್ರೀಷ್ಮಋತುವು ಪ್ರಾಪ್ತವಾಗಿದ್ದರೂ ಸ್ಥಳವಿಶೇಷದಿಂದಲೂ, ರಾಮಕೃಷ್ಣರ ವಾಸದಿಂದಲೂ, ಆ ಋತುವು ವಸಂತರ್ತುವಿನಂತೆ ವೃಂದಾವನದ ಜನರಿಗೆ ಸೊಗಸನ್ನೀ ಬೀರುತ್ತಿತ್ತೆಂದು ದಾಸರು ವರ್ಣಿಸಿರುವರು. ಅಕ್ಷಿಗೋಚರ......ಮಂಗಳ=ವಸಂತಕಾಲದಲ್ಲಿಯ ಪತ್ರ, ಪೂ, ಫಲಾದಿ ಮಂಗಳದಾಯುಕ ವಸ್ತುಗಳು ಇಲ್ಲದಂತಾದವು. ಕುಂಭಕಕನ್ನಿಕೆ=ನೀಲಾದೇವಿ (ಕುಂಭಕನೆಂಬವನೊಬ್ಬಗೊಲ್ಲ) (ಕರಿಯು ಕೈಗೆ ಕುಸುಮವನಾಲೆಯಿತ್ತು ಪುರದೊಳು) ಭೋಗದ್ವಿಪದಿ ವೃತ್ತ. ನುಡಿಗಳು ೨೯೬.

---

೩೦

ರಾಗ-ಕನ್ನಡಗೌಳ —— ಏಕ ತಾಳ

ನಾಕೇಶನ ವನವೀವೃಂದಾವನ ।
ಗೋಕುಲ ಪ್ರಜರೇ ನಾಕಜರು ॥
ಈ ಕಾಳಿಂದಿಯೇ ಸ್ವರ್ಧುನಿ ಶ್ರೀಬಲ- ।
ಶ್ರೀ ಕೃಷ್ಣರು ವಾಸವಾಗಿಹರು ॥ ೧ ॥

ಶುಷ್ಕಲತಾತರು ವರ್ಜವು ವನದಲಿ ।
ಪುಷ್ಕರಿಲ್ಲದ ನೀರಿಲ್ಲ ॥
ಪುಷ್ಕಳ ಕರೆವವು ಆವು ಮಹಿಷಿಯಜ ।
ದುಷ್ಕೃತಹರಹರಿ ಸಿರಿನಲ್ಲ ॥ ೨ ॥

ಶುಕಪಿಕಶಿಖಿಹಂಸಗಳ ಕಲೋಚ್ಚರ । ಸಿಖಿಳ ವನಸುಸ್ಥಳದಲ್ಲಿ ॥
ಸಕಲ ಕುಸುಮಫಲ ಸತತ ಸುಪೂರ್ಣವು । ಲಕುಮಿಯ ರಮಣನಿವ್ವಲ್ಲಿ
॥ ೩ ॥

ಕಕ್ಷಾಶನನಾಟವೆ ನಡೆಯದು ಕಮ । ಲಾಕ್ಷನ ಪಾದಸ್ಪರ್ಶದಲಿ ॥
ತೀಕ್ಷ್ಣಕರೇಂದುಕರಗಳೇ ತೋರವು । ಪಕ್ಷಿಗಮನನ ಸುಮಹಿನಲಿ
॥ ೪ ॥

ನಿರ್ಝರಜಲಸಂಕೀರ್ಣವು ಝರಿಗಳ । ಗರ್ಜನೆ ಶ್ರಾವ್ಯವಾಗಿಹವು ॥
ಪರ್ಜನ್ಯಾಪೇಕ್ಷೆಯು ತೋರದು ಶ್ರೀ । ನಿರ್ಜರಪತಿಯ ಸಂಚರವು
॥ ೫ ॥

ಕಂಜಬಕುಳಕಲ್ಹಾರೋತ್ಪಲರಜ । ವ್ಯಂಜಕದಾಮೋದದಲಿ ॥
ಮಂಜುಳಮಧುಕರಝೇಂಕರ ಮನೋಹರ । ಕಂಜಾಕ್ಷನ ಆಟಣೆಯ
॥ ೬ ॥

ಕುಸುಮಾಮೋದದ ಸಹ ಸಂಚರಿಸುವ । ನಸುವೆಳೆಯೆಲರಿನ ಸುಳಿವು
ಎಸೆವ ವಿಚಿತ್ರ ಮೃಗಾಳಿಯ ಕ್ರೀಡೆಯು । ಶಶಿಕುಲವರಸನ ನಲಿನಲಿವು
॥ ೭ ॥

ಹೀಗಿರುತಲ್ಲಿಯು ಶ್ರೀಕರವನದಲಿ । ಗೋಗೋಪರನು ಬೆರಸಿಹನು ॥
ಪೂಗೊಂಚಲವು ಪ್ರವಾಳ ಬರುಹಿಗರಿ । ಶ್ರೀಗೋವಿಂದನು ಮುಡಿದಿ
ಹನು ॥ ೮ ॥

ಗೋಗಳಚರಿಸುತ ಅತಿ ಅತಿ ಮೃದುರವ । ರಾಗದ ವೇಣುಸ್ವನದಿಂದಾ ॥
ಯೋಗಿಜನೇಶ್ವರ ಮೋಹಿಪ ಭುವನಜ । ನೌಘನ ವಿಧಿಭವಸುರವಂದ್ಯಾ
॥ ೯ ॥

ವೇದವು ದಕ್ಷಿಣ ಪಕ್ಷವು ಗಡ ಪ್ರ । ಣೋದವು ಉತ್ತರ ಪಕ್ಷ ॥
ವೇದಾತ್ಮನ ಕಿವಿಮೇಲೊಪ್ಪಿತು ವಿ । ನೋದಕೆ ಶ್ರೀಕಾಕಪಕ್ಷ
॥ ೧೦ ॥

ಶ್ರೀಕಂಜೋದ್ಭವ ವಿಪಹಿಪ ಪುರಹರ । ನಾಕೇಶನ ನಾಟಕನೀಗೆ ॥
ಈ ಕಾನನದಾಟವು ನಟವೇಷವು । ಯಾಕಿನ್ನಿವು ಬೇಕಿನ್ನವಗೆ
॥ ೧೧ ॥

ಹಾರಾಟವು ಗೋವತ್ಸಗಳ ದಂಡಿಗೆ । ಯೇರಾಟವು ಭ್ರಮಣದ ಆಟಾ ॥
ಹಾರವದ್ಹಾಸ್ಯವು ಫಲಗಳನೊಗೆಯುತ । ಚೀರಾಟವು ಕಣ್ಮುಸುಕಾಟಾ
॥ ೧೨ ॥

ಚೆಂಡು ಚಿಣ್ಣಿ ಪದಕಳಿ ಬೊಗರಿಗಳು । ಗುಂಡೆತ್ತಾಟವು ಮರದಾಟಾ ॥
ಹಿಂಡುಗೋವಳರ್ಹರಿಬಲರಾಮರು ಪೃಥಕ್ । ಮಂಡಲ ಮಾಡ್ಯಾಡುವ
ಆಟಾ ॥ ೧೩ ॥

ಯಮುನೆಯ ತೀರದಿ ಗಿರಿತಪ್ಪಲಬದಿ । ರಮಣೀಯ ಕುಂಜಪುಳಿನಸ್ಥ
ಳದಿ ॥
ಅಮಿತ ಕ್ರೀಡೆಯನಾಡಲು ನೋಡುವ । ದಮರರು ತಾವ್ ಸುಖಹೊಂದಿ
॥ ೧೪ ॥

ಅಲ್ಲಲ್ಲಾಕಳಗಳ ಕಾಯುತ ಸಖ । ಗೊಲ್ಲರ ಬೆರಸಿ ಮುಕುಂದ ॥
ಉಲ್ಲಾಸದಲಿರೆ ದೈತ್ಯ ಪ್ರಲಂಬನು । ಗೊಲ್ಲರ ವೇಷವಿ ತಾ ಬಂದ
॥ ೧೫ ॥

ದಾಶಾರ್ಹರ ಕೊಲಬೇಕೆನುತಲಿ ಖಳ । ದ್ವೇಷದಿ ನೆಳೆತನವಿಡಿದ ॥
ಶ್ರೀಸರ್ವಜ್ಞಶಿಖಾಮಣಿಯುವನೊಳು । ತಾ ಸಖ್ಯವನು ಬೆರಸಿದ
॥ ೧೬ ॥

ಭಾಂಡೀರವನದ ವಟತಳ ಗೋಗಳ। ಹಿಂಡನು ಅಗಲಿರೆ ಮುರಮಥನ॥
ಮಂಡಲವೆರಡನು ಮಾಡಿದ ದಾಮನ । ತಂಡಕೆ ದಾಮಾವೃಷಭರನು
॥ ೧೭ ॥

ಮೇಳೈಸಿದ ಸೋತವ ವಾಹಕ । ಸೋಲ್ದವನೇ ವಾಹ್ಯನು ಎಂದೆನುತ ॥
ಹೇಳಿದ ಭದ್ರಸೇನಾದಿ ಸಕಲ ಗೋ । ಪಾಲರರಿಗೆ ಜಗತ್ಕರ್ತ ॥ ೧೮ ॥

ಸೋಲುಗೆಲುವಿನಲಿ ವಾಹಕ ವಾಹ್ಯಕೆ । ಸಾಲುಗೋವಳರಾಡೆಂದು ॥
ಶ್ರೀಲೋಲನು ತಾ ಅಸುರನ ಸಹ ಗೋ । ಪಾಲಕರೊಡನೆ ಜೇರಿದ್ದು
॥ ೧೯ ॥

ಪಕ್ಷದ್ವಯುವನು ಮಾಡ್ಯಾಡಲು ಖಳ । ರಾಕ್ಷಸ ಕಂಸನ ಭಟನು ॥
ಋಕ್ಷಬಲನ ಎತ್ತ್ಯೊಯ್ದನು ತಾನಂತ । ರಿಕ್ಷಕ್ಕೆ ಜರುತಿರೆ ಬಲನು
॥ ೨೦ ॥

ಬೆದರುತ ಹರಿಸ್ತುತಿ ಮಾಡಲು ಸಾಸಿರ । ವದನನ ಸಮವು ಬಲಬಂದು॥
ಮದಮತ್ತನನಿಗೆ ಸಿತಪ್ರಾಣಾಯಿತು । ಕಂಧರನ ಗೌರವವ ಕಂಡು
॥ ೨೧ ॥

ಕುಟಿಲ ಖಳನ ಅಲಂಕಾರಾಕಾಶದಿ । ತಟಿತದ್ಯೂಮಣಿಯಂತೆ ಜ್ವಲಿಸೆ ॥
ಪಟುಬಲನೊಪ್ಪಿದ ದುಷ್ಟನ ಪೃಷ್ಠದ । ತಟದಿ ಶಶಿವೋಲ್ ಥಳಥಳಿಸೆ
॥ ೨೨ ॥

ರೋಷದಿ ದೃಢಮುಷ್ಟಿಯುಲಿ ಗುದ್ದಿದ । ದ್ವೇಷಿಯ ನೆತ್ತಿಯು ಮೇಲೆ ॥
ವಾಸವನ್ವಜ್ರದಿ ಗಿರಿಕೆಡೆದೋಲ್ ಶಿರ । ಸಾಸಿರಶೀರ್ಣಾಗೈವ ಬೀಳೆ
॥ ೨೩ ॥

ನೆತ್ತರು ಕಾರುತ ಗಿರಿಯೋಲ್ ಬಿದ್ದಿರೆ । ಸುತ್ರಾಣ ಗೋವರುಗಳು ನೋಡಿ॥
ಸ್ತೋತ್ರವ ಮಾಡಿವರ್ ಸಾಧು ಸಾಧು ಭಲ। ಶತ್ರುಹನನ ಕೊಂಡಾಡಿ
॥ ೨೪ ॥

ಸುಮನವೃಷ್ಟಿಯನು ಸುಮನಸರ್ಗರೆದರು । ಅಮಿತ ದುಂದುಭಿವಾದ್ಯ
ವನು ॥
ಕಮಲನಯನಬಲ ಬಲಶಾಲಿಗಳು ತಮ್ಮ ರಮಣೀಯ । ಗೃಹಕೈದಿದರು
॥ ೨೫ ॥
ಪ್ರೇಮದಿ ನಂದಯಶೋದೆರೋಹಿಣಿ । ಈ ಮಕ್ಕಳನಪ್ಪಿದರು ॥
ಆ ಮಹಾತೋಷಕೆ ಎಣೆಯುಂಟೆ ಬಲ । ರಾಮಶ್ರೀಹರಿಗೆ ಸಮರುಂಟೆ
॥ ೨೬ ॥
ಗಂಧಮಾಲ್ಯಾಂಬರ ಭೂಷಿತರಾಗಿಹ । ಸುಂದರವರರು ಒಪ್ಪಿದರು ॥
ವೃಂದಾರಕವಂದಿತ ಪ್ರಸನ್ವೆಂಕಟ । ಮಂದಿರದರಸುಗಳಿವರು
॥ ೨೭ ॥

ಶಬ್ದಾರ್ಥ :— ನಾಕೇಶ=ಇಂದ್ರ. ನಾಕಜರು=ದೇವತೆಗಳು. ಸ್ವರ್ಧುನಿ=ಸುರನದಿ. ಪುಷ್ಕರ=ಕಮಲ. ಅಜ=ಕುರಿ, ಆಡು. ನಲ್ಲ=ಪತಿ. ಪಿಕ=ಕೋಗಿಲೆ. ಶಿಖಿ=ನವಿಲು. ಕಲೋಚ್ಚರ=ಮಧುರಧ್ವನಿ. ಕಕ್ಷಾಶನ=ಕಟ್ಟಿಗೆ ತಿನ್ನುವವ (ಅಗ್ನಿ). ತೀಕ್ಷ್ಣಕರ=ಸೂರ್ಯ. ಸಂಕೀರ್ಣ=ಸಮೂಹವು. ಶ್ರಾವ್ಯ=ಶ್ರುತಿ ಮನೋಹರ. ಪರ್ಜನ್ಯ=ಮಳೆ. ನಿರ್ಜರಪತಿ=ದೇವತೆಗಳ ಒಡೆಯ. ಕಂಜ=ಕಮಲ. ಕಲ್ಹಾರ=ಬಿಳಿ ಕುತೂರಿಹೂವು. ಉತ್ಪಲ=ಕೆಂಪುಕಮಲ. ರಜ=ಧೂಳಿ. ವ್ಯಂಜಕ=ವ್ಯಕ್ತವಾಗುವ. ಆಮೋದ=ಸುವಾಸನೆ. ಅಟಿಕೆ=ತಿರುಗಾಟ. ನಸು=ಸ್ವಲ್ಪ. ಎಲರ್=ಗಾಳಿ. ನಲಿವು=ಕುಣಿದಾಟ. ಬರುಹಿ=ನವಿಲು. ಬೆರಸಿಹನು=ಕೂಡಿರುವನು. ಜನೌಘ=ಜನಸಮೂಹ. ಶಾಕಪಕ್ಷ=ಜೂಜುಪೆ. ಪಕ್ಷ=ಬದಿ (ಗಲ್ಲ). ವಿಪ=ಗರುಡ. ಅಹಿಪ=ಶೇಷ. ವದಕಳಿ=ಕಾಲಿನಿಂದಾಡುವ ಒಂದಾಟವು. ಪುಳಿನ=ಉಸುಬು. ಮೈಳೈಸಿದ=ಗೊತ್ತುಮಾಡಿದನು. ವಾಹ್ಯನು=ಹತ್ತುವನು. ರುಕ್ಷ=ಕ್ರೂರ. ಕುಧರ=ಶೇಷನ ಅವತಾರನಾದ ಬಲರಾಮನು. ತಟಿತ್=ಮಿಂಚು. ಕೆಡೆ=ಬೀಳುಗೆಡವು. ಶೀರ್ಣ=ತುಣುಕು. ಸುಮನ=ಹೂವು. ಸುಮನಸರ್=ದೇವತೆಗಳು.

ವಿ. ಸಂ:-- ಹಾರವದ ಹಾಸ್ಯವು=ಹಾಹಾ ಎಂದು ನಗುವದು. ಭಾಂಡೀರವವೆಂಬ ಹೆಸರಿನ ವನವು. ಸೋಲು......ರಾಡೆಂದು=ಸೋಲುಗೆಲುವಿನ ಆಟವನಾಡಿ, ಸೋತವನು ವಾಹಕನಾಗಲಿ, ಗೆದ್ದವನು ವಾಹ್ಯನಾಗಲಿ, ಈ ರೀತಿಯಾಗಿ ಸಾಲಾಗಿ, ಎಲ್ಲ ಗೋವಳರೇ ನೀವು ಆಡಿರಿ ಎಂದು ಹೇಳಿದನು. ಸಾಂಗತ್ಯವೃತ್ತದಂತಹದು. ನುಡಿಗಳು ೩೨೧.

೩೧

ಮೋಹನಕಲ್ಯಾಣಿ ರಾಗ — ಏಕ ತಾಳ.

ವೃಷ್ಣಿವರ್ಯ ಕೃಷ್ಣನಂಘ್ರಿ ಸ್ಪೃಷ್ಟವಾದ ಗೊಷ್ಠಕೆಲ್ಲ ।
ತುಷ್ಟಿಯಾಯಿತು ವೃಷ್ಟಿಕಾಲ ಕಷ್ಟದೋರದು ॥
ತುಷ್ಟವಾಗ್ಯಥೇಷ್ಟವಾರಿ ಪುಷ್ಟ ಪೈರ್ಗಳಷ್ಟು ಬೆಳಿಂಯೆ ।
ಮಿಷ್ಟ ಅಶನ ಸ್ಪಷ್ಟಜ್ಞಾನಸುಷ್ಠ್ವಾನ್ನೆಚ್ಚಿತು ॥ ೧ ॥
ನೀಲನೀರದಾಳಿ ಸಿಡಿಲ್ಗಾಳಿಕೆಂಧೂಳಿಗಳ ।
ಏಳಿಗೆಯು ಕೋಲುಮಿಂಚು ಮೇಲೆ ಮೇಲೆಯೆ ॥
ಲೋಲ್ಶೈಸೆ ಸ್ಥೂಲಧಾರೆ ಜಾಲಮುಸುಕಿ ಬಹಳ ವರ್ಷ ।
ಕಾಲ ಒಪ್ಪೆ ಶ್ರೀಲಲನೆಯ ಲೋಲನಿದ್ದಲ್ಲಿ ॥ ೨ ॥
ಕೆರೆ ಬಾವಿಗಳು ತೋರೆಗಳು ಪುಷ್ಕರಣಿಗಳು ಭರಿತ ಜಲದಿ ।
ಹೊರಚಲ್ಲಿದವಿರದೆ ಯಮುನೆ ಬೆರಸಿ ನಡೆದವು ॥
ತರುವೀರುಧಾವುರುಪುಷ್ಪಾಗೆ ವರಜಂಬು ಖರ್ಜೂರ ದ್ರಾಕ್ಷೆ ।
ಪರಿಪಕ್ವದಿ ಮೆರೆದವಲ್ಲಿ ಹರಿಯ ವನದಲಿ ॥ ೩ ॥
ಮಾನವರ್ಗೆ ಗೋನಿಕರ ನಾನಾಜಾತಿ ಪ್ರಾಣಿಗಳಿಗೆ ।
ಪ್ರಾಣಕಾಯು ನಯನ ನಂದಸೂನುವಿದ್ದಲ್ಲಿ ॥
ಶ್ರೀನಾಥ ಸಖನಿಕಟದಿ ವನದ ನವೀನ ಜಂಬು ।
ವಾನು ಖರ್ಜೂರಾನುಂಡನು ಆನಂದಾತ್ಮನು ॥ ೪ ॥
ಕೆಚ್ಚಲಭಾರದಿ ಚರಿಪ [illegible]ಚ್ಚಿಲಾವ್ಗಳುಚ್ಚುಣಲು ।
ನಿಚ್ಚ ಕರೆದನಚ್ಚರಿಯ [illegible]ಚ್ಚಾರಂಗಳಿಂ ॥
ಪಚ್ಚವರ್ಣೆ ಸ್ವಚ್ಛರೂಪೆ ಅಚ್ಚನೀಲೆ ಹೆಚ್ಚಿನಮ್ಮ ।
ಮಚ್ಚಿನಮ್ಮ ಉಚ್ಚಗುಣಿಯೇ ಹಚ್ಚಗಿಣಿಯೇ ಬಾ ॥ ೫ ॥
ಗಂಗೆ ಗೌರಿ ತುಂಗಭದ್ರೆ ಮಂಗಳೇ ಧೂಮ್ರಾಂಗೆ ಗೋವೆ ।
ರಂಗೆ ಭೀಮೆ ಸಿಂಗರೇ ಸುಸಂಗೆ ತ್ರಿವೇಣಿ ॥
ಭೃಂಗೆ ಚಿಂಚೆ ಪಿಂಗೆ ಹಂಡೆ ಶೃಂಗಿ ಕೃಷ್ಣೆ ರಂಗು ಮುತ್ತೆ ।
ಪಿಂಗಳೆ ಹೇಮಾಂಗಿಯೆಂದು ರಂಗ ಕರೆದನು ॥ ೬ ॥

ವಾರುಣಿ ಕವೇರಕುವರಿ ನೀರದಾಂಗೆ ನೀರಜಾಕ್ಷಿ ।
ಸಾರಸ್ವತಿಯೇ ಭೀರುನೇತ್ರೆ ಚಾರುವದನೆ ಬಾ ॥
ಶ್ರೀರಮಣ ಗಭೀರ ರವದಿ ಸಾರಿ ಕರೆಯೆ ದೂರದಿಂದಂ- ।
ಬಾರವದಿ ತೂರಿಬಂದವು ವೀರವೇಗದಿ ॥ ೭ ॥

ಬಂದು ಬದಿಯ ಹೊಂದಿ ಹರಿಯು ಸ್ಕಂದದಲ್ಲಿ ಸ್ಕಂದನಿಟ್ಟು ।
ನಂದದೀ ಆನಂದಾತ್ಮನ ಇಂದು ಲೇಹಿಪವು ॥
ಮಂದಹಾಸದಿಂದ ಕೃಷ್ಣ ಒಂದೊಂದಾವು ಸುಂದರ ಕೈ- ।
ಯಿಂದ ತಂರಿಸೆ ಅಂದು ವೋಕ್ಷಾನಂದವೋರಿತು ॥ ೮ ॥

ಇರಸಲ್ಮಳೆಯು ಗರೆಯುಲಾಗೆ ಹರಿಬಲಗೋವರರು ಹೊಕ್ಕು ।
ಗಿರಿಗುಹ್ಯದಿ ಚರವಿಸಿದರು ಕಂದಮೂಲವ ॥
ಪರಮ ಫಲಗಳ್ ವರ ದಧ್ಯನ್ನ ಚಿರವ್ಯಂಜನ ಹರಿಯ ಮೇಲೆ ।
ಹರುಷದಿಂದುಂಬರು ಕೂಡೆ ನಿರುತ ತೃಪ್ತರು ॥ ೯ ॥

ಎಳೆಯ ಹುಲ್ಲು ಮೆಲುವಾಗ ಕಂಗಳನ್ನು ಮುಚ್ಚಿ ಗೋವು ॥
ನಳಿನಾಕ್ಷನ ಚಲುವ ಮೂರತಿ ಹೊಳೆವು ನೋಡಿವವು ॥ ೧೦ ।

ಶರತಕಾಲ ಬರವಾಯಿತು ನಿರುಮಲದಿ ಸರಗಳೊಪ್ಪೆ ।
ವಿರಹಿತಾಭ್ರ ಶಾರ್ವರೀಶ ಸರ್ವರಿಗಿಷ್ಟನು ॥
ಪರಮತಿಗ್ಮಕಿರಣತಾಪ ಸರಿದು ಹೋಗೆ ಇರುಳಿನಲ್ಲಿ ।
ಸ್ಮರನ ಬಾಣ ಸರಸಿಜಾಕ್ಷೆರ್ಗೆರಗುತ್ತಿದ್ದುವು ॥ ೧೧ ॥

ರಂಗನಂಗಸಂಗಕೆ ಗೋಪಾಂಗನೇರು ಸಂಗಡಿಸಿ ।
ಸಂಗೀತದಿ ಮಂಗಳ ಗುಣಂಗಳ್ಹೇಳ್ವರು ॥
ಅಂಗನೇರು ಅಂಗಜನ್ನ ಸಂಗರಮುತ್ತಾಂಗಿಯರು ।
ಸಿಂಗರ ವನಂಗಳಲ್ಲಿ ಹಿಂಗದಿಪ್ಪರು ॥ ೧೨ ॥

ಕುಸುಮನಾಭ ಕುಸುಮಿತವನಪಸರವಲ್ಲಿ ಪಶು ಕಾಯುತ್ತ ।
ವಿಸುನಿಕೊಳಲ ರಸತುಂಬಿ ನಾದಿಸುತಲಿರ್ದನು ॥
ಹೊಸ ಪ್ರಾಯದ ಅಸಿಯರು ಪರವಶರಾಗುಲ್ಲಸದಿ ರತಿ ।
ರಸಿಕೆರೆಲ್ಲ ರಸಿಕನ ಇಚ್ಛಿಸುತಲಿರ್ದರು ॥ ೧೩ ॥

ವರವರ್ಣೆಯರು ವಿರಹತೆರೆಯು ಶರಧಿಲೀಸುತಿರಲು ಕಂಡು ।
ಸ್ಮರನಯ್ಯನುದ್ಧರಿಸಿದನು ಕರುಣವಾರಿಧಿ ॥
ಇರುಳು ಹಗಲು ಹರಿಯ ಲೀಲೆ ಸ್ಮರಿಸುತಿಪ್ಪರರಸಿಯರು ।
ಪರಮಭಕ್ತಿಭರಿತರಾಗಿ ಹರಿಣನೇತ್ರೆಯರು ॥ ೧೪ ॥

ಅಹೋರಾತ್ರಿ ಶ್ರೀಹರಿಯ ರೂಹುಧ್ಯಾನ ಮೋಹಿತರು ।
ದೇಹೇಂದ್ರಿಯಗೇಹಪ್ರಾಣಸ್ನೇಹವವನಲ್ಲಿ ॥
ಬಾಹ್ಯವಿಷಯರಾಹಿತೆಯರು ಆ ಹೆಂಗಳ ಮೋಹರವು ।
ಮಹಾಪುರುಷರಾಹೋಲಿಕೆಯುಳಿಹರು ವ್ರಜದಿ ॥ ೧೫ ॥

ಕಣ್ಣಿಲಿ ರಂಗನ್ನ ಮೂರ್ತಿ ಕರಣಗಳಿಗೆ ಅವನ ವಾರ್ತೆ ॥
ಮನ್ನವು ಧ್ಯಾನಾನ್ವಿತ ಕೀರ್ತನ್ನೆ ಜಿವ್ಹೆಗೆ ॥
ಕನ್ಯೆಯರು ಧನ್ಯರು ಪಾವನ್ನೆಯರು ಚಿನ್ಮಯ ಪ್ರ- ।
ಸನ್ನ ವೆಂಕಟವಮಾನ್ಯೆಯರು ಪುಣ್ಯಶಾಲೆರು ॥ ೧೬ ॥

ಶಬ್ದಾರ್ಥ:-ವೃಷ್ಣಿವರ್ಯ=ವೃಷ್ಣಿಕುಲದಲ್ಲಿ ಶ್ರೇಷ್ಠ. ಸ್ಪೃಷ್ಟವಾದ=ಮುಟ್ಟಲ್ಪಟ್ಟ. ತುಷ್ಟಿ=ಸಂತೋಷ. ವೃಷ್ಟಿ=ಮಳೆ. ನೀರದ=ಮೇಘ. ಲೋಲೈಸೆ=ಮಿಂಚು ಚಮಕಿಸಲು. ವರ್ಷಕಾಲ=ಮಳೆಗಾಲ. ಪುಷ್ಕರಣಿಗಳು=ಸರೋವರಗಳು. ವೀರುಧ=ಬಳ್ಳಿ. ಜಂಬು=ನೇರಲಹಣ್ಣು. ಮಚ್ಚು=ಪ್ರೀತಿ. ಚಿಂಚೆ=ಸಾಂಬಾರಗಾಗಿ ಬಣ್ಣದವಳೇ. ರಂಗುಮುತ್ತೆ=ಮುದ್ದು ಬಣ್ಣದವಳೇ. ಕವೇರ=ಒಬ್ಬ ಋಷಿಯ ಹೆಸರು. ಭೀರುನೇತ್ರೆ=ಬೆದರುಗಣ್ಣವಳೇ. ಸ್ಕಂದ=ಕುತ್ತಿಗೆ. ಲೇಹ್ಯವು=ನೆಕ್ಕುವವು. ದಧ್ಯಾನ್ನ=ಮೊಸರನ್ನ. ವ್ಯಂಜನ=ಬಾಡಿಸಿಕೊಳ್ಳುವ ಪದಾರ್ಥ. ಹರಿ=ಪರ್ವತ. ಅಭ್ರ=ಮೋಡ. ಶಾರ್ವರೀ=ಕತ್ತಲೆ. ತಿಗ್ಮ=ಉಗ್ರ. ಹಿಂಗದೆ=ಬಿಟ್ಟುಬಿಡದೆ. ಮಿಸುನಿ=ಬಂಗಾರ. ಅಸಿಯರು=ಚಲುವೆಯರು. ರೂಹು=ರೂಪ. ಗೇಹ=ಮನೆ. ಮೋಹರ=ಗುಂಪು.

ವಿ. ಸಂ.:—ಮಾನವರ್ಗೆ......ಸೂನುವಿದ್ದಲ್ಲಿ=ಎಲ್ಲ ಪ್ರಾಣಿಗಳ ಶರೀರ, ಪ್ರಾಣ, ಕಂಣು ಮೊದಲಾದುವು ನಂದಸೂನುವಾದ ಕೃಷ್ಣನಿದ್ದಲ್ಲಿಯೇ ಇರುತ್ತಿದ್ದವು. ಜೋಟಿಲಾವ್ಗಳು=ಮೊದಲುಗರವನ್ನು ಹಾಕಿದಗೋ. ಭೋಗಪಟ್ಟಿದಿಯ ಸಮೀಪದ್ದಾದ ವೃತ್ತವು. ನುಡಿಗಳು. ೩೩೯

೩೨

## ವೇಣುಲೀಲೆ.

ಕನ್ನಡ ಗೌಳ, ರಾಗ — ಅಟ್ಟತಾಳ.

ವೇಣುಗೋಪಾಲನ ವೇಣು ವರ್ಣಿಪಾರು ।
ಜಾಣೆ ಗೋಪೇರೆಲ್ಲ ಗಾನಾಮೃತಾನುಂಡು ॥
ಬಾಣಪಂಚಕನ ಬಾಣದಟ್ಟಿಗಳಿಗೆ ।
ಪ್ರಾಣ ಡೆಂಢೆಣಿಸಿ ಧ್ಯಾನಿಪರು ॥ ಪಲ್ಲ ॥

ಎಳೆ ನೇಸರ್ಗಳ ಬಳಗದಂತಿಪ್ಪ । ಹೊಳೆವ ರತುನಮೌಳಿಕುಂಡಲ್ಗಳ ।
ಬೆಳಗಿಲಿಹ ಕಪೋಲದ ಕಾಂತಿ ಪ । ವಳದುಟಿಯಲ್ಲಿ ಬಿಂಬಿಸಲು ॥
ನಳಿನದಳವ ಪೋಲುವ ನೇತ್ರಭ್ರೂ । ವಿಲಾಸಾಪಾಂಗದಿ ಕೊಳಲನಾದಿಪ ।
ತಳಿರು ಬರುಹಮಲ್ಲಿಗೆದಂಡೆಗೊ । ಚಲುಗಳ ಗುಂಜೆದೊಂಗಲಿನ ॥ ೧ ॥

ವಾಮಬಾಹುವಿನಲಿ ವಾಮಗಂಡಾವಿಟ್ಟು । ಹೇಮವೇಣೂರಂಧ್ರನಾ ಮುಟ್ಟಿ ಅಂಗುಲಿ ।
ನೇಮದಲಿ ಸರಿಗಾಮಪಧಾನಿ । ಯಾ ಮಂಜುಳ ಸ್ವರನುಡಿಸಲು ॥
ರಾಮೆಯುಂಬಾಧರ ಸೋಮರಸಾವನ್ನು । ಪ್ರೇಮದಿ ಸವಿವ ಶ್ರೀಮದ್ವೇಣುವಿಲಿ ।
ಈ ಮಹಾಭಾಗ್ಯವ ಕಾಮಿನೇರ್ನೋಡಿರೆಂ । ದೂ ಮಾತನಾಡುವರ್ ರಾಮೇಯರು ॥ ೨ ॥

ಬ್ರಹ್ಮಗಂಧರ್ವಗಾನವಿರ್ಮ್ಮರುವಾ ಗೀತಾ । ಅಮ್ಮರಗಂಧರ್ವರಮ್ಮರನಾರೇರು ।
ಉಮ್ಮಯುದಿಂ ಕೇಳಿ ಸಮ್ಮೋಹಿಸಿದರು । ಈ ಮ್ಮಹಿಯೂ ವೃಜರಮ್ಮಣೇರು ॥
ಬ್ರಹ್ಮಗಚ್ಚರಿಯು ರಮ್ಮೆಯುರಸನ್ನ । ಸನ್ಮಾರ್ಗಿಯಾ ವೇಣು ಸುಮೂರ್ಥೆಯಿಂ ಕೇಳಿ ।
ಸುಮೃಗಪಕ್ಷಿಗಳ್ ತಾಮ್ಮರುಳಿಟ್ಟವು । ರಮ್ಯಾರಣ್ಯದಿ ತಂತ ವ್ಮೊಳು ॥ ೩ ॥

ಚೂತಪ್ರವಾಳಾಬರ್ಹೋತ್ಪಲತಾವರೆ । ಪ್ರೀತಿಲಿ ಮೂಡಿದ ನಾಥಗೋ
ಪಾಲನ ।
ಗೀತಕೆ ಭೂರುಹವ್ರಾತಲತೆಗಳು । ಸೋತು ಅಶ್ರುವೋಕ್ಷವಾತವವು॥
ಆತನ ನೀಲಜೀಮೂತಾಂಗ ವೀಕ್ಷಿಸಿ । ಪೂತನವಿಲ್ಗಳ ಯೂಥವು
ನರ್ತಿಸೆ ।
ಶ್ರೋತರಕಮೃತವಾತ ಹುಲ್ಲೆಗಳು । ಜಾತಾನಂದದಿಂದ ಕೂತ
ವಂದು ॥ ೪ ॥

ಗೋವಿಂದಾಟವಿಲಿ ಗೋವಿಂಡುಗಳನು । ಕಾವುತ ಸ್ವರ್ಣಮಯಾ ವೇ
ಣುನಾದಿಸೆ ।
ಆವು ಕಿವಿಗೊಟ್ಟು ಯಾವಸವಂ ಕಚ್ಚಿ । ತಾ ವತ್ಸವಂ ಬಿಟ್ಟು ಹುಚ್ಚ
ನಿಟ್ಟು ॥
ಆವೇಕ್ಷಿಸಿ ಕೃಷ್ಣಲಾವಣ್ಯಸುಧೆಯ । ಸೇವಿಸಿ ನೇತ್ರದಿ ತೀವಿದಾನಂ
ದದಿ ।
ತಾವಶ್ರುಗರೆದವು ಭಾವುಕಜನರ । ಭಾವದಿ ಲಾಂಗೂಲಗ್ರೀವವೆತ್ತಿ ॥೫॥
ದೇವನಾರಿಯರ ನೀವಿ ಸಡಿಲ್ದವು । ಭಾವೇರ ಮೂಡಿಯ ಪೂವು ಚಲ್ಲಿ
ದವು ।
ಭಾವಜನಂಬಿಗೆ ಆ ಪೆಂಗಳ್ಳುಚ್ಚಿಟ್ಟು । ಶ್ರೀವೇಣುವಿನ ರಸವನುಂಡು ॥
ಗೋವೇರ ಸುಕೃತ ದಾವದೊ ರಂಗನ್ನ । ಸೇವೆಗೆ ಸನ್ನದ್ಧಳಾವೇಳೆ
ಕಾಳಿಂದಿ ।
ತಾ ವೇಗಬಿಟ್ಟೂರ್ಮಿಬಾಹ್ವಿಂದಲಪ್ಪಿದಳ್ । ದೇವನಂಘ್ರಿವನಜಾವ
ನಂದು ॥ ೬ ॥
ಶ್ರೀವರ ಶ್ರೀಕೃಷ್ಣಾಟವಿಯ ಸಂಚರಿ । ಸುವಾಗ ಪಾದರಾಜೀವದ
ಗಂಧವು ।
ಭೂವಿಯ ತೃಣಾದಿ ಸವ್ಯಾಪಿಸಿರಲು । ದೇವಪುಳಿಂದೆಯರ್ತಾವವನು ॥
ಗ್ರೀವಕುಚದಲಿಟ್ಟು ವಾಸುದೇವನ । ಪಾವನ ಚಾರಿತ್ರ ಭಾವಭರೋ
ತರಾ ।

ಗಾವಳಿ ಮಾರ್ಗದಿ ಕೋವಿದರ್ಕ್ಹೇಳಿದರ್ । ದೇವಗಂಧರ್ವರ ಠೀವಿ
ಯಲಿ ॥ ೭ ॥

ಮೇಘಶ್ಯಾಮಲನ ರಾಗರಸಾಮೃತ । ಭೋಗಗನಾ ತುಂಬಲಾಗ ದೇವ
ರ್ಕಳು ।
ಆಗಸದಿಂ ಪೂವಾಳೀಗರೆದರರ್ಥಿ । ಯಾಗಿರೆ ಸಾಧುಗಳೌಘ ಕಂಡು ॥
ಮೇಘಾಳಿ ರಂಗನ ಮೇಗಾತಪತ್ರಂಗ । ಳಾಗಿರ್ದವಲ್ಲಿಯು ಗೋಗೋಪ
ಗೋವೇರು ।
ಆಗೋವರ್ಧನಾದ್ರಿ ಭಾಗಧೇಯಕೆ ತಲೆ । ದೂಗಿದರು ಸ್ವರ್ಗಾಗಾ
ರೆಂದು ॥ ೮ ॥

ಅನಂತ ಬ್ರಹ್ಮಾಂಡವನ್ನಾಳ್ವ ದೇವ ಗೋ । ಕಾನನದಾಟಣೆ ಗೋನೀ
ಕ ರಕ್ಷಣೆ ।
ಮಾನವಲೀಲೆಗದೇನು ಭೂಷಣವೋ । ತಾನಣ್ಣನೊಡನೆ ವಿನೋದಕೆ ॥
ಆ ನಂದ್ಯಶೋದೆಯ ಸೂನುವೆನಿಸಿದ । ಆನಂದಶತಕನಾನಾದಿಜನಕ ।
ಶ್ರೀನಾಥಗೋಪಕಾಮಿನೀಯರಾಳ್ವ ದ- । ಯಾನಿಧೆ ಪ್ರಸನ್ವೆಂಕಟಕೃಷ್ಣ
॥ ೯ ॥

ಶಬ್ದಾರ್ಥ:— ಬಾಣಪಂಚಕ= ಕಾಮ. ಅಟ್ಟುಳಿ=ಕಾಟ. ಡೆಂಥಣಿಸು=ಬೆದರಿಕೆ
ಯಿಂದ ನಡಗು. ನೇಸರ=ಸೂರ್ಯ. ಮೌಳಿ=ಕಿರೀಟ. ಗಂಡ=ಗಲ್ಲ. ರಾಮೆ=ಲಕ್ಷ್ಮಿ. ರಾಮೆ
ಯರು=ರಮಣಿಯರು. ಉಮ್ಮಯ=ಆನಂದ. ( ತಲ್ಲೀನತೆ ) ಪ್ರವಾಳ=ಚಿಗುರು. ಬರ್ಹ=ನವಿಲು
ಗರಿ. ಆತವು=ಧರಿಸಿದವು. ಜಿಮೂತ=ಮೋಡ. ಪೂತ=ಗರಿಗೆದರಿದ. ಶ್ರೋತರ=ಕಿವಿ. ಯಾವಸ
( ಯವಸ )=ಹುಲ್ಲುಕಡ್ಡಿ. ಲಾಂಗೂಲ=ಬಾಲ. ಗ್ರೀವ=ಕುತ್ತಿಗೆ. ನೀವಿ=ನಿರುಗೆಕಟ್ಟು. ಮೂಡಿ
(ಮುಡಿ)=ಹೆರಳುಮುಡಿ. ವೆಂಗಳು=ಹೆಂಗುಸುರು. ಗೋವೇರು=ಗೋಪಿಯರು. ಊರ್ಮಿ=ತೆರೆ.
ಪುಳಿಂದೆಯರು=ಬೇಡತಿಯರು. ಕೋವಿದರು=ಬಲ್ಲವರು. ಠೀವಿ=ಭಂಗಿ, ರೀತಿ. ಆಗಸ=ಆಕಾಶ.
ಪೂವಾಳಿ=ಹೂವಿನಮಳೆ. ಔಘ=ಸಮೂಹ. ಮೇಗೆ=ಮೇಲೆ. ಆತಪತ್ರ=ಕೊಡೆ. ಭಾಗಧೇಯ=
ದೈವ. ಆಗಾರ=ಮನೆ. ಅನೀಕ=ಸಮೂಹ. ಆನಂದಶತಕ=ಆನಂದಪರಿಪೂರ್ಣ.

ವಿ. ಸಂ:— ಭಾವುಕಜನರಭಾವದಿ=ಭಕ್ತಿಯುಕ್ತರಾದಜನರುಗಳ ಬಗೆಯಿಂದ. ಊರ್ಮಿ
ಹಸ್ತದಿಂದ......ನಂದು=ತೆರೆಗಳೆಂಬ ಕೈಗಳಿಂದ ಕೃಷ್ಣನ ಪಾದಕಮಲಗಳನ್ನು ಅಪ್ಪಿದಳು. (ಮುಟ್ಟಿ

೯ಳು) ಪಾವನಚರಿತ್ರೆ......ಶೀವಿಯಲಿ=ಜಾಣಬೇಡತಿಯರು ಕೃಷ್ಣನ ಪವಿತ್ರವಾದ ಚರಿತೆಯನ್ನು, ದೇವಗಂಧರ್ವರು ಪಾಡುವಂತೆ, ರಾಗಗಳ ಸಮೂಹದಿಂದ ಭಕ್ತಿಯುತರಾಗಿ ಪಾಡಿದರು. ಸಾಂಗತ್ಯವಿಭೇದವು. ನುಡಿಗಳು ೧೪೯.

---

೩೩

## ವಸ್ತ್ರಾಹರಣ.

ರಾಮಕ್ರಿಯಾರಾಗ. — ಅಟ ತಾಳ.

ಹೈಮಂತದ ಪ್ರಥಮ ಮಾಸದಿ । ಶ್ರೀ । ಸೋಮಶೇಖರನರ್ಧಾಂಗಿಯ ಹೊಂದಿ ।
ಸೀಮಂತಿನಿಯರರ್ಚಿಸಿದರಂದು । ನಿತ್ಯ । ಯಮುನೆಯ ವಾರಿಲಿ ಮಿಂದು ॥ ೧ ॥

ಮಳಲ ಗೌರಿಯ ಮಾಡಿ ನೋಂತರು । ಮಂ । ಗಳಹವ್ಯಾನ್ನವನುಂಡು ಕಾಂತೇರು ।
ಫಲಪುಷ್ಪಗಂಧಮಾಲೆಗಳಿಂದ । ಕೆಂ । ದಳಿಲುಧೂಪದೀಪ ಬಲಿಯಿಂದ ॥ ೨ ॥

ನಂದನಾತ್ಮಜ ತಮ್ಮ ಪತಿಯಾಗ । ಚೀ । ಕೆಂದುಮೆಯನು ಬೇಡಿದ ರಾಗ ।
ಸುಂದರ ಕಾತ್ಯಾಯನಿಯರ್ಚನೆ । ಭಕ್ತಿ । ಯಿಂದ ಪ್ರದಕ್ಷಿಣೆ ವಂದನೆ ॥ ೩ ॥

ಉಚ್ಚ ಪಾಡಿ ಹರಿಗುಣಕೀರ್ತ್ನೆ । ಮತ್ತೆ । ನಿಚ್ಚನಿಚ್ಚಂಬಿಕೆಯಳ ಪ್ರಾರ್ಥ್ನೆ ।
ಅತ್ಯಂತಯಾಚ್ನೆಯ ತಿಳಿದನು । ಈ । ಅಚ್ಯುತನಲ್ಲಿಗೆ ಬಂದನು ॥ ೪ ॥

ಯೋಗಿಜನೇಶ್ವರ ಕಂಡನು । ಅವರ್ । ನೀಗಿದಂಬರವೆತ್ತಿಕೊಂಡನು ।
ಭಾಗ್ಯೆಯರ್ ಮಿಂದು ಬಾಹನ್ನಕಾ । ಕೃಷ್ಣ । ವೇಗದಿ ನೀಪವಡರಿ ನಕ್ಕ ॥ ೫ ॥

ಮೊಗುವ ಬಾಲೆರ ನೋಡಿ ನಗುತಿದ್ದ । ಬಲು । ಸುಗುಣೇರು ಬನ್ನಿರಿ ಲ್ಲಿಗೆಯೆಂದ ।
ತೆಗೆದುಕೊಳ್ಳಿರಿ ನಿಮ್ಮಾಂಬರವೆಂದ । ನರ್ಮ । ಗಳ ಮಾತಿಲಿ ಶ್ರೀ ಗೋವಿಂದ ॥ ೬ ॥

ನಿಮನಿಮ್ಮುಡಿಗೆಯನು ನಿಮಗೀವೆ । ಬನ್ನಿ । ಶ್ರಮವೇಕೆ ನೀರೊಳಗೆ ನೀವೆ ॥
ಹಿಮವು ವೃತಸ್ಥೆಯರಿಗೆ ಕಷ್ಟ । ಅ । ಕ್ರಮುವಿನ್ನು ಅಕಟಾಯೆಂಡನು ಕೃಷ್ಣ ॥ ೭ ॥

ಕಾಮಜನಕನ ನರ್ಮಕೆ ನಾಚಿ । ಆ । ಕಾಮಿನಿಯರಿಗೆ ಕಾಮವು ಹೆಚ್ಚಿ ॥
ಶಾಮಸುಂದರ ನಿನ್ನ ದಾಸೇರು । ಎಲೆ । ಸ್ವಾಮಿ ನಾವು ವಿವಸ್ತ್ರೆಯರು ॥ ೮ ॥

ಅಚ್ಯುತ ನಮ್ಮುಡಿಗೆಯ ನೀಡೈ । ನಿ । ಮ್ಮಿಚ್ಛಾನುಗೆಯರು ಕನ್ಯೆರು ನೋಡೈ ॥
ಸಚ್ಚಿದಾನಂದ ನಂದಜ ಸಾಕು । ಶ್ರೀ । ವತ್ಸಲಾಂಛನ ಬಿನ್ನಹ ಪರಾಕು ॥ ೯ ॥

ಕೋಮಲೆಯರು ಬಲು ತೋದೆವು । ಧರ್ಮ । ಧಾಮ ಚಳಿಗೆ ಮುಟ್ಟಿ ಗಾದೆವು ॥
ಸ್ವಾಮಿ ನಂದಗೆ ಹೇಳ್ವೆವು ಕೇಳೈ । ನಿಮ್ಮ । ಕಾಮಿಸುವೆವು ವಸ್ತ್ರವ ನೀಡೈ ॥ ೧೦ ॥

ದಾಶಾರ್ಹ ಕನ್ಯೆರಿಗೆಂದನು । ವೃ । ಜೇಶಗೆ ಹೇಳಿ ಮಾಡುವುದೇನು ॥
ದಾಸೇರಾದರೆ ಬನ್ನಿ ಬಳಿಗೀಗೆ । ನಿಮ್ಮ । ವಾಸಂಗಳನು ಕೊಡುವೆನು ಬ್ಯಾಗೆ ॥ ೧೧ ॥

ಶೀತದಿಂದೆರಡು ಅಂಗೈ ಹಚ್ಚಿ । ರತಿ । ನಾಥನ ಸದನದ ಕದ ಮುಚ್ಚಿ ।

ಸೋತು ಲಜ್ಜೆಯ ನೀಗಿ ಮುಖದಲಿ । ಕಾಳಿಂ । ದೀತೀರ್ಥ ಉ
ಹರಿಯಿದ್ದಲ್ಲಿ ॥ ೧೨ ।

ಬಂದು ಭೂರುಹದೆಡೆ ನಿಂತಿಹ । ಬಂದ । ಸುಂದರಿಯರ ಭಾವ
ದಿಹ

ಇಂದುಮುಖಿಯರ ದಿವ್ಯಾಂಬರ । ತನ್ನ । ಸ್ಕಂದದಲಿಟ್ಟ ವಿಶ್ವೇಶ್ವ
॥ ೧೩ ।

ಸ್ನೇಹಾವಲೋಕದಿ ನೋಡಿದಾ । ವಸ್ತ್ರ । ದೇಹಿಕರೊಳು ಮಾ
ನಾಡಿದ

ಹೇ ಹರಿಣಾಕ್ಷೇರೇ ಕೇಳಿರಿ । ಅಂಬಿ । ಕಾಹೇಲನವ ಮಾಳ್ಪ ಚಲು
ಯರೆ ॥ ೧೪ ॥

ನಗ್ನ ಮಿಂದಪರಾಧ ಕ್ಷಮಿಸೆಂದು । ಕರ । ಯುಗ್ಮವ ಮುಗಿದು ಬೇಡಿ
ಬಂದು ॥

ವಿ ಘ್ನೇಶನಮ್ಮಗೆ ಜೇಡಲು । ನಿಮ್ಮ । ನಘಾಂಬರವೀವೆ ಈಗ
॥ ೧೫ ॥

ಕೇಳಿ ಕೆಲದೆರೊಂದು ಕರದಲಿ । ಇಂದು । ಮೌಳಿಯರ್ಧಾಂಗಿಗೆ ನಮಿಸಲಿ
ಶ್ರೀಲೋಲನವರ್ತಿರಸ್ಕರಿಸಿದಾ । ಎರಡು । ತೋಳೆತ್ತಿ ನಮಿಸಿ ಪ್ರಾಂಜ
ಲಲೆಂದ ॥ ೧೬ ॥

ಎಂದ ಮಾತಿಗೆ ಲಜ್ಜಿಸಿದರು । ಬಾಹು । ದ್ವಂದ್ವವೆತ್ತ್ಯಭಿವಂದಿಸಿದರು
ಇಂದಿರೇಶಗೆ ವಸ್ತ್ರಬೇಡಲು । ಪ್ರಿತಿ । ಯಿಂದಿತ್ತ ಜೇರೆ ಜೇರೆ ವಯ
॥ ೧೭ ॥

ತಮತಮ್ಮಾಂಬರವನು ಉಟ್ಟರು । ಶ್ರೀ । ಕಮಲಾಕ್ಷನಲ್ಲಿದೃಷ್ಟಿಯಿಟ್ಟರು
ಸುಮುಖನ ಲಜ್ಜೆಯಿಂದೀಕ್ಷಿಸಿ । ಶ್ರೀ । ರಮಣನ ಸಂಗವಪೇಕ್ಷಿ
॥ ೧೮ ।

ನವಸಂಗಮುದೋರೆನೋಟದಿ । ಅಂ । ಘ್ರಿವನಜಸ್ಪರ್ಶೇಚ್ಛೆಯು
ಹೊಂದಿ ॥

ಯುವತೆ ವ್ಯಾಕಸ್ಥರ ನೋಡಿದ । ಸಂ । ನವರಸವಾರ್ಧಿಲಿ ರಮಿಸಿದ ॥ ೧೯ ॥

ವೇದೋಕ್ತಿಯಂತೆ ಕಾಮಿನಿಯರ್ಕರ್ಣವು । ವಿತ್ತ । ವೇದೇಶ್ವರನು ಪೂರಣಕಾಮಾ ॥

ಬೋಧಿಸಿದನು ತನ್ನರ್ಚನೆಫಲ । ಪ್ರಾಪ್ತ । ವಾದುದು ನಡೆಯೆಂವ ಶ್ರೀಲೋಲ ॥ ೨೦ ॥

ನಂವಜನಾಜ್ಞಾದಿ ಬಂದರು । ತಮ್ಮ । ಮಂದಿರಕೆ ಚಂದ್ರಮುಖಿಯರು ॥

ಸುಂದರ ಪ್ರಸನ್ವೆಂಕಟೇಶನ । ನಂಬಿ । ನಂದಿಸಿದರು ಕನ್ಯೆರನುದಿನ ॥ ೨೧ ॥

ಶಬ್ದಾರ್ಥ:—ಹೈಮಂತ=ಹಿಮಋತುರ್ತುವಿನ. ಸೀಮಂತಿನಿಯರು=ಹೆಂಗುಸರು. ವಾರಿ=ನೀರು. ಮಿಂದು=ಸ್ನಾನವಾಡಿ. ಮಳಲು=ಉಸುಬು. ನೋಂತರು=ವ್ರತವಾಡಿದರು. ಹವ್ಯಾನ್ನ=ನೈವೇದ್ಯದ ಅನ್ನ. ಉಮೆ=ಪಾರ್ವತಿ. ಯೊಜ್ಞೆ=ಬೇಡಿಕೆ. ನೀಗಿದ=ಕಳೆದ. ಬಾಹನ್ನಳ=ಬರುವವರಿಗೆ ನೀಪ=ಕಡಾಲದಮರ. ಮೊಗುವ=ನೀರುಹಾಕಿಕೊಳ್ಳುವ. ಅಂಬರ=ವಸ್ತ್ರ. ಸರ್ವ=ಚೇಷ್ಟೆ. ವಿವಸ್ತ್ರೆಯರು=ವಸ್ತ್ರವಿಲ್ಲದವರು. ಭೂರುಹ=ಗಿಡ. ದೇಹಿಕರು=ಬೇಡುವವರು. ಅನರ್ಘ್ಯಾಂಬರ=ಬೆಲೆಯಿಲ್ಲದ ವಸ್ತ್ರ. ಕೆಳದೇರು=( ಗೆಳತಿಯರು ) ಪ್ರಾಂಜಲಿ=ಬೊಗ್ಗಸಿ.

ವಿ. ಸಂ.ಸಾಂಗತ್ಯವಿಭೇದವು. ನುಡಿಗಳು ೩೬೯.

---

೩೪

ಕಾಮಕ್ರಿಯಾ ರಾಗ — ಅಟ್ಟತಾಳ

ವರ್ಣಿಪ ಕವಿಗಳಿಂದವ್ವಘೆ ಸು । ಖಾರ್ಣವ ಮುಂದೋರುವುದುವ್ವಘೆ ॥ ಪಲ್ಲ ॥

ಇಂದಿರೆಯರಸನು ವೃಂದಾವನವುಳಿ । ದೊಂದಿನ ದೂರೈದಿದನು ಗಡ ॥

ಸಂಪಟಿಸಿದ ತರುವೃಂದವು ಛತ್ರಗ । ಳಂದಾಗಲಿ ಹರಿತುತಿಪ ಗಡ ॥೧॥

ಕೇಳ್ಳೈ ಸುಬಲವಿಶಾಲಸ್ತೋಕ । ಬಾಲ ಶ್ರೀದಾಮಗೋಪಾಲರುಕ್ತಾ ॥

ಕೇಳ್ಳೈ ಸುರಪ್ರಸ್ಥಾಲತೆ ತರುಗಳು । ಕಾಲಕಾಲಕತಿವುಪಕರಿಸುತಿವೆ॥೨॥

ಭಾಳ ಬಿಸಿಲು ಬಿರುಗಾಳಿ ಸಿಡಿಲು ಮಳೆ। ಕಾಳಗಿಚ್ಚು ಚಳಿಗಾಲವನು ।
ತಾಳಿ ಮನುಷ್ಯರ ಜಾಲಕಾಶ್ರಯವಾಗಿ । ಮೇಲೆ ನಮ್ಮಾಪ್ತರಂತಿಹವ
ಹುದೆ ॥ ೩ ॥

ಫಲಕುಸುಮವು ಎಳೆದಳಿಲಿಂ ಘನಗಂಧ । ಸಲೆ ಕಂದಮೂಲತ್ವಚೆ
ಗಳಿಂದ ॥
ಬಲುಪ್ರಾಣಿಗಳನು ಸಲಹುತಲಿವೆ ಹೀ । ಗಿಳೆಯುಲಿ ಗ್ರಹಮೇಧಿಗಳಾಗಿ
॥ ೪ ॥

ಔಚಿತ ಕರ್ಮಾದಿಯೂಚಿಸಿದರ್ಥಾದಿ । ಯಾಚಕರ ಕರೆದು ಅರ್ಚಿಸುವ॥
ಆಚಾರಾನ್ವಿತರೇ ಚತುರ್ವಿಧಮುಕ್ತಿ । ಗೋಚರರೇ ಪ್ರಿಯರೇ ನಮಗೆ
॥ ೫ ॥
ಶ್ರುತಿಬಳಿಗೆಳೆವರು ಅತಿಥಿಗಳ್ ಭಜಕರು । ಕ್ಷಿತಿಭೂಷಣರ್ ಭಗವ–
ಜ್ಜನರು ॥
ಸ್ತುತಿಗರ್ಹರು ಪರಸತಿಧನವಿರತರು । ಸತತ ಸತ್ಪಥಗರು ಮತು
ಪ್ರಿಯರು ॥ ೬ ॥

ಮತ್ಕಥಾಶ್ರವಣಸಂಕೀರ್ತನೆಸ್ಮರಣೆ । ಮತ್ಪದಸೇವನೆ ನಿತ್ಯಾರ್ಚನೆ ॥
ಮತ್ತಭಿವಂದನೆ ದಾಸ್ಯ ಸಖತ್ವವು ಆತ್ಮನಿವೇದನೆ ಭಕ್ತಿಮುಕ್ತಿ ॥ ೭ ॥
ಎನಗೆ ಪ್ರಕೃತಿ ಸ್ತ್ರೀ ವನಜೋದ್ಭವಸುತ । ತ್ರಿನಯನ ವಿಪಹಿಪ ತನು ॥
ಜಜರು ॥
ಅನಿಮಿಷಪತಿ ನಪ್ತೃವು ಸುರಋಷಿ ನೃಪ। ಜನಸೇವಕರೆಂಬುವ ಮುಕುತ
॥ ೮ ॥

ಸೃಷ್ಟ್ಯಾದಿಕಾರಣ ಶಿಷ್ಟಸಂರಕ್ಷಕ । ದುಷ್ಟಹರಣನಾ ತುಷ್ಟಿತನು ॥
ಸ್ಪಷ್ಟಮಹಿಮ ಯಥೇಷ್ಟ ನಿಗಮವೇದ್ಯ । ವಿಷ್ಣು ಕೃಷ್ಣನೆಂಬವ ವೈಷ್ಣ–
ವನು ॥ ೯ ॥
ಈ ಲಸದ್ಧರ್ಮ ಪ್ರತಿಕೂಲರೆ ಅಧಮರು । ಭೂಲಲನೆಗೆ ಭಾರಕರವರು ॥
ಹೇಳಲೇನವರ ಜನ್ಮಾಳಿಗಳ್ ತರುಲತೆ । ಗೀಳಿಲು ನಿರಯದ ಪಾಲವರು
॥ ೧೦ ॥

ಫಲಪೂಗೊಂಚಲಿಂ ತಲೆಬಾಗಿಹ ತರು । ಗಳ ಮಧ್ಯ ಯಮುನಾ ಜಲ-
ಪೇಂಟೆ ।
ತಳಿತುಪವನದಲಿ ಗೆಳೆಯರು ಹಸಿದು ಶ್ರೀ । ಬಲಪ್ರಸನ್ವೆಂಕಟಗೆ
ಬೇಡಿದರು ॥ ೧೧ ॥

ಶಬ್ದಾರ್ಥ:—ಉಘೆ=ಜಯಜಯಾ ಕಾರ ತೋರುವದೊಂದುಉದ್ಗಾರವು. ಉಳಿದು=ಬಿಟ್ಟು. ಐದಿದನು=ಹೋದನು. ಸಂದಣಿಸಿದ=ದಟ್ಟಾಗಿದ್ದ. ತರು=ಗಿಡ. ವೃಂದ=ಸಮೂಹ. ತುತಿಪ=ಸ್ತೋತ್ರ ಮಾಡುವನು. ಭಾಳ=ಬಹಳ. ಬಿರು=ದೊಡ್ಡ. ತಳಿಲು=ತಳಿರು. (ಚಿಗುರು.) ಗೃಹಮೇಧಿ= ಗೃಹಸ್ಥಾಶ್ರಮಿಯು. ಔಚಿತ=ಯೋಗ್ಯ. ತ್ವಚೆ=ತೊಗಟೆ. ಎಳೆವರು=ಒಯ್ಯುವವರು. ಮತು= ಮತ್ (ನನ್ನ) ವಿಪ=ಪಕ್ಷಿಗಳಪಾಲಕ (ಗರುಡ) ಅಹಿಪ=ಸರ್ಪಗಳಪಾಲಕ. (ಶೇಷ) ನಪ್ತೃ=ಮೊಮ್ಮಗನು. ಲಸತ್=ಪ್ರಕಾಶವುಳ್ಳ. (ಶ್ರೇಷ್ಠ.) ನಿರಯ=ನರಕ. ಈಂಟು=ಕುಡಿ. ತಳಿತು=ಚಿಗುರಿ.

ವಿ. ಸ.:—ಸುಬಲ......ರುಕ್ಮ=ಇವೆಲ್ಲ ಗೋಪಾಲರ ಹೆಸರುಗಳು. ಸುರಪ್ರಸ್ಥ= ಗೋಪಾಲನೊಬ್ಬನ ಹೆಸರು. ಸಾಂಗತ್ಯವಿಭೇದವು. ನುಡಿಗಳು ೩೮೦.

---

೩೫.

## ಸತ್ರದಡಿಗೆಯ ಊಟ

**ಸೌರಾಷ್ಟ್ರ ರಾಗ ಏಕತಾಳ.**

ಮಹಾಬಾಹುಶಾಲಿ ಕೇಳು ರಾಮಾ ರಾಮಾ । ದುಷ್ಟ-
ದಾಹಕ ಶ್ರೀಕೃಷ್ಣ ಕೇಳ್ ಪೂರ್ಣಕಾಮಾ ॥
ಬಾಹಳ ಬಾಧಿತರಾದೆವು ಕ್ಷುಧೆಯಲೀಗ । ನಿರು-
ವಾಹಾ ನಿಮ್ಮಿಂದಲೆಂದರ್ ಗೋವರಾಗ ॥ ೧ ॥

ಹೀಗೆಂದ ವಿಜ್ಞಾಪನೆಯ ಕೇಳಿ ಶೌರಿ । ದಯಾ-
ಸಾಗರ ನಿರೂಪಿಸಿದ ದುಃಖಹಾರಿ ॥
ಯಾಗಶಾಲೆಯಲ್ಲಿ ಸತ್ರವೆಂದು ನೀವು । ಹೋಗಿ-
ಯಾಗೀಗಳಿಗನ್ನ ಬೇಡಿ ಪೇಳ್ದೆವಾವು ॥ ೨ ॥

ಯಜ್ಞಪತಿಯಾಜ್ಞೆಯಿಂದ ಯಜ್ಞಕೈದಿ । ಮುನ್ನಿ-
ಜರ್ಗೆ ಅನ್ನವ ಬೇಡಿದರ್ ಸುವಿನಯದಿ ॥
ಸ್ವರ್ಗಕಾಮಾಕರ್ಮರವರು ಮತ್ತರಾಗಿ । ಬಾಲ-
ಕರ್ಗೆ ಗರ್ಜಿಸಿದರು ವಿನಯವಾ ನೀಗಿ ॥ ೩ ॥

ಕಾಲವಲ್ಲವೆಂದು ನಾಸ್ತಿಕರು ನುಡಿಯಲು । ಗೋ-
ಪಾಲಕರು ತಿರುಗಿ ಬಂದು ಹರಿಗೆ ಹೇಳಲು ॥
ಬಾಲೆಯರ್ಗೆ ಬೇಡಿ ಪುರುಷರನ್ನು ಬೇಡದೆ । ಯಾಗ-
ಶಾಲೆಗೈದಿ ಪುನರಪಿ ಅನ್ನ ಬೇಡಿದರಂದೆ ॥ ೪ ॥

ಕೃಷ್ಣನಾಜ್ಞೆ ಕೇಳಿ ಬಾಲೆರು ಹೃಷ್ಟಮನದಲಿ । ಶ್ರೀ-
ಕೃಷ್ಣನ್ನ ಸಂದರ್ಶನಾಶೆ ಮಾಳ್ಪ ಭರದಲಿ ॥
ಮೃಷ್ಟೋದನ ಭಕ್ಷಪಾಯಸಾಜ್ಯಕ್ಷೀರವು । ಯ-
ಥೇಷ್ಟ ಶಾಕಪಪ್ಪಡಪಳಿದ್ಯಾದಧಿವ್ಯಂಜನವು ॥ ೫ ॥

ತಂಡತಂಡದ್ಹರಿವಾಣಗಳ ಚಷಕದೊಳಗೆ । ತುಂಬಿ-
ಕೊಂಡು ಬಂದರಿಂದುವದನೇರ್ಹರಿಯಿದ್ದೆಡೆಗೆ ॥
ಗಂಡರ ಮಕ್ಕಳ ಆಪ್ತರೆಲ್ಲರ ಬಿಟ್ಟು । ಶ್ರೀ-
ಪುಂಡರೀಕನಯನನಂಘ್ರಿಯಲ್ಲಿ ಚಿತ್ತಿಟ್ಟು ॥ ೬ ॥

ಬ್ರಾಹ್ಮಣೆಯರು ಷಡ್ರಸದನ್ನ ತಂದು ನಮಿಸಲು । ಪರ-
ಬ್ರಹ್ಮನುಂಡ ಗೋಪಾಲಕರ ಕೂಡಿ ದಯಾಳು ॥
ಬ್ರಹ್ಮಜ್ಞನಾರಿಯರ ಭಕ್ತಿರಸವನುಂಡನು । ಅವರ್ಗೆ-
ಬ್ರಹ್ಮನಿರ್ವಾಣವನಿತ್ತ ಪುರುಷಶೌಂಡನು ॥ ೭ ॥

ಮತ್ತೊಬ್ಬಳು ಬಾಹನ್ನಕ ಗಂಡ ತರುಬಲು । ಆಕೆ-
ಮುಕ್ತಿಪತಿಯ ನೆನೆದು ತನ್ನ ಪ್ರಾಣಬಿಟ್ಟಳು ॥
ಇತ್ತ ಯಜ್ಞಪತ್ನಿಯರನ್ನವಿತ್ತು ಕೃಷ್ಣನ । ಗುಣ-
ಕೀರ್ತನೆ ಪಾಡಿ ಪರವಶದಲ್ಲಿದ್ದರಾದಿನ ॥ ೮ ॥

ಗೋಗೋವರ ಬೆರಿಸಿ ಕೃಷ್ಣ ವ್ರಜಕೆ ತೆರಳಲು । ಈ–
ನಾಗಗಮನೆಯರ್ದ್ವಿಜ್ಞ ಮುಂದಕ್ಕೇಳದಿರಲು ॥
ಯೋಗಿಧ್ಯೇಯ ವಿಶ್ವನಾಥನವರ ಮನ್ನಿಸಿ । ಪೋಗ–
ಲಾಗ ನಾರಿಯರ್ ತಮ್ಮ-ತಮ್ಮ ವಾಟಹೊಂದಲು ॥ ೯ ॥

ಯಜ್ಞದೀಕ್ಷಮುನಿಗಳವರ ಭಾವವರಿತರು । ತಮ್ಮ–
ಅಜ್ಞವೃತ್ತಿಯನ್ನು ನೆನೆದು ಖಿನ್ನರಾದರು ॥
ಯಜ್ಞೇಶ್ವರರಿಗೀಶ್ವರನಾವಜ್ಞಮಾಡಿದ । ಅನ–
ಭಿಜ್ಞರಾವು ನಮ್ಮಕರ್ಮ ಧಿಗಧಿಗೆಂದರು ॥ ೧೦ ॥

ತಮ್ಮ ಹೆಂಗಳ ಸುಕೃತಕ್ಕೆ ಒಪ್ಪಿಕೊಂಡರು । ಇನ್ನು–
ನಮ್ಮ ಜ್ಞಾನಯೋಗತಪವು ಸುಡುಸುಡೆಂದರು ॥
ಬ್ರಾಹ್ಮಣರು ಪಶ್ಚಾತ್ತಾಪರಾಗಿ ನುಡಿದರು । ಪೂರ್ಣ–
ಬ್ರಹ್ಮ ಪ್ರಸನ್ವೆಂಕಟಕೃಷ್ಣನ ಒಲಿಸಿಕೊಂಡರು ॥ ೧೧ ॥

ಶಬ್ದಾರ್ಥ:—ದಾಹಕ=ನಾಶಮಾಡುವವ. ಸುಡುವವ. ಕ್ಷುಧೆ=ಹಸಿವು. ಶೌರಿ=ಕೃಷ್ಣ. ಮೃಷ್ಟೋದನ=ಪಕ್ವಾನ್ನ. ಆಜ್ಯ=ತುಪ್ಪ. ಪಪ್ಪಡ=ಹಪ್ಪಳ. ತಂಡತಂಡ=ಬೇರೆ ಬೇರೆ ತರದ. ಚಷಕ=ಪಾತ್ರೆ. ಶೌಂಡ=ಶ್ರೇಷ್ಠ. ನಿರ್ವಾಣ=ಮುಕ್ತಿ. ಬಾಹನ್ನಕ=ಬರುವಷ್ಟರಲ್ಲಿ. ಧ್ಯೇಯ = ಧ್ಯಾನಿತನಾಗಲುಯೋಗ್ಯ. ವಾಟ=ಹಾದಿ. (ಪ್ರಾಕೃತಭಾಷೆಯ ಶಬ್ದ ಇದು) ಅವಜ್ಞಾ=ಅವಮಾನ. ಅನಭಿಜ್ಞರು=ಅರಿಯದವರು.

ವಿ. ಸಂ. ಒಂದಾನೊಂದು ದಿನ ಕೃಷ್ಣನು ಗೋಪರೊಡನೆ ವನದಲ್ಲಿ ವಿಹರಿಸುತ್ತಿರಲು, ಗೋಪರು ಕ್ಷುಧಾಪೀಡಿತರಾಗಿ ಅನ್ನ ಬೇಕೆಂದು ರಾಮಕೃಷ್ಣರನ್ನು ಕೇಳಹತ್ತಿದರು. ಬ್ರಾಹ್ಮಣ ಸ್ತ್ರೀಯರುಗಳನ್ನು ಅನುಗ್ರಹಿಸುವ ಕಾಲವಿದೆಂದು, ಕೃಷ್ಣನು ಆ ತನ್ನ ಗೆಳೆಯರಿಗೆ ಅಲ್ಲಿಯೇ ಸಮೀಪದ ವನದಲ್ಲಿ, ಆಂಗಿರಸನೆಂಬ ಸತ್ರವನ್ನು ನಡೆಸುವ ಬ್ರಾಹ್ಮಣರ ಕಡೆಗೆ ತನ್ನ ಹೆಸರು ಹೇಳಿ ಅನ್ನ ತರಲು ಕಳಿಸಿಕೊಟ್ಟನು. ಅವರು ಸತ್ರಕ್ಕೆ ಹೋಗಿ ಬ್ರಾಹ್ಮಣರನ್ನು ಕೇಳಲು, ಅವರು ರಾಮಕೃಷ್ಣರ ವಿಷಯಕವಾದ ಅಜ್ಞಾನಮೂಲಕವಾಗಿ, ಗೋಪರನ್ನು ಗರ್ಜಿಸಿ ಕಳುಹಿಬಿಟ್ಟರು. ಆ ನಂತರ ಕೃಷ್ಣನು ಅವರನ್ನು ಬ್ರಾಹ್ಮಣಸ್ತ್ರೀಯರ ಬಳಿಗೆ ಕಳಿಸಲು, ಅವರು ಯಜ್ಞಕ್ಕೆಂದು ಮಾಡಿರುವ ಯಾವತ್ತೂ ಭಕ್ಷ್ಯಭೋಜ್ಯಗಳನ್ನು ಪರಮಾತ್ಮನಿಗೆ ಅರ್ಪಿಸಲು ತಂದುಬಿಟ್ಟರು. ಆಗ

ಕೃಷ್ಣನು ಎಲ್ಲರೊಡನೆ ಅವರು ತಂದುದನುಂಡು, ಅವರ ಭಕ್ತಿಗೆ ಮೆಚ್ಚಿ ಅವರಿಗೆ ಮೋಕ್ಷವನ್ನಿತ್ತ ನೆಂದು ಭಾಗವತದ ಕಥಾಭಾಗವು. ಸಾಂಗತ್ಯವಿಧೇದವು. ನುಡಿಗಳು ೪೯೧.

೩೬.

## ಗೋವರ್ಧನೋದ್ಧಾರ

ಘಂಟಾರವ ರಾಗ. ಅಟತಾಳ.

ನಿತ್ಯೋತ್ಸವ ಪುಣ್ಯಸಂಕುಲ, ನಂದಗೋಕುಲ ।ನಂದ।ಪುತ್ರನ ಲೀಲಾ ।
ಸ್ತೋತ್ರವ ಮಾಳ್ಪರ್ಗೆ ಕಡೆಯಿಲ್ಲ, ಶೇಷಗಳವಲ್ಲ ।ದುಷ್ಟ। ದೈತ್ಯಹೃತ್ಶೂಲ।
ಭೃತ್ಯದೇವಾನ್ವಯ ಪ್ರತಿಪಾಲಾ, ವೇಣುಗೋಪಾಲ । ವಿಕ್ರ। ಮತ್ರಯ ಶೀಲಾ ।
ಮುಕ್ತಾಮುಕ್ತಾಮರಜನಧ್ಯೇಯಾ, ಮುನಿಕುಲಗೇಯಾ ॥ ೧ ॥

ಗೋಷ್ಠದ ಜನರೆಲ್ಲ ಒಂದಿನಾ, ದೇವೇಂದ್ರನ ।ಅಬ್ದ! ತುಷ್ಟಿಗುತ್ಸವದಿ ।
ಮೃಷ್ಟಾನ್ನಪಾನಸಿದ್ಧವ ಮಾಡೆ, ಇತ್ತತ್ತೋಡ್ಯಾಡೆ ।ಶ್ರೀ।ಕೃಷ್ಣ ನಿಂದಿಸಿದ।
ಇಷ್ಟಾರ್ಥವೀವ ಗೋವರ್ಧನ, ಗಿರಿವೃದ್ಧನ ।ಈತ।ಗಿಷ್ಟು ಪೂಜೆಯನು ।
ಶಿಷ್ಟರು ಮಾಡೆಂದಾಜ್ಞಾಪಿಸಿದಾ, ಬುದ್ಧಿಗಲಿಸಿದ ।ಗಿರಿ।ಗಟ್ಟು ಉಣಿಸಿದ ॥ ೨ ॥ ಮುಕ್ತಾ ॥

ಬಹುಗುಣೋಪೇತಾನ್ನವುಂಡನು, ಗೂಢಲಿಂಗನು ।ಆ। ಮಹೀಧ್ರ ಪೊಕ್ಕನು ।
ಮಹಾವಿಶ್ವತತ್ವವ ತೋರ್ದನಾ, ಜನಾರ್ದನಾ ।ಕಂಡ। ಸಹಸ್ರಾಕ್ಷ ಇದನು ।
ಬಹು ಕೋಪತಾಳ್ದನು ಘನವೊತ್ತಕಾಜ್ಞೆಯನಿತ್ತ ।ನ। ಪ್ರಾತಹ ಮಳೆ ಗರೆದ ।
ಶ್ರೀಹರಿಯೆ ಕೃಷ್ಣನೆಂಬುದು ಮರೆತ, ಐಶ್ವರ್ಯೋನ್ಮತ್ತ ।ಪ್ರಳಯ।ದ ಹನಿ ಯಿಂದ ॥ ೩ ॥ ಮುಕ್ತಾ ॥

ಆಕ್ರಂದಿಸಿದ ಪ್ರಾಣಿಗಳನೆಲ್ಲ, ನೋಡಿ ಸಿರಿನಲ್ಲ ।ಪ।ರಾಕ್ರಮಶೀಲಾ ।
ನಕ್ಕು ಸತ್ಕರಪಲ್ಲವದಿಂದ, ಗಿರಿಯೆತ್ತಿದಾ ।ಚಿಕ್ಕ।ಮಕ್ಕಳುಚ್ಚೀಲಿಂದ್ರ ।

ನಕ್ಕೆತ್ತಾಡುವಂತೇಳ್ದಿನಾ, ಮತ್ತಸೂದನ ।ತನ್ನ। ಒಕ್ಕಲುಳುಹಿದ ।
ಅಕ್ಕರದಿ ದೀನವತ್ಸಲಾ, ಜಿತಖಳಜಾಲ ।ಇಂದ್ರ।ನುಕ್ಕನು ಮುರಿದ
॥ ೪ ॥ ಮುಕ್ತಾ ॥

ಆರೊಂದಿನಿಂದ್ರ ಭೋರ್ವರ್ಗಳಿಗರೆದ, ಹರಿಯೆಲ್ಲರ ಹೊರೆದ ।ನಿತ್ಯ।
ಭೂರ್ಯನ್ನಪಾನಾ ।
ಚಾರುಶಯ್ಯಾಸನವಿತ್ತನು, ವಿಶ್ವಕರ್ತನು ।ಶ್ರೀ।ನಾರಾಯಣನು ।
ಸೇರಿದ ಸಜ್ಜನರನು ಕಾವ, ಬೊಮ್ಮಾದ್ಯರ ದೇವ ।ಸಾ।ಸರನಯನನು ।
ಶ್ರೀರಮಣನ ಮಹಿಮೆ ನೋಡಿದ, ವೈಯಿಂಡಾಡಿದ ।ಇಳಿಯು। ಸಾರಿ
ಸ್ತುತಿಸಿದಾ ॥ ೫ ॥ ಮುಕ್ತಾ ॥

ಪ್ರಿಯೋಕ್ತಿಗಳ ರಚನೆಯಿಂದ, ಉಪನಿಷದಿಂದ ।ಸಾಧು।ಪ್ರಿಯ
ಗೋವಿಂದ ।
ನಾಯೇನನರಿಯೆ ನಿನ್ನವನೆಂದ, ತನ್ನ ಸಲಹೆಂದ ।ವಿಧಿ।ವಾಯುಭವಾ-
ದ್ಯಮರ ।
ನಾಯಕ ಜನಕೆಲ್ಲ ಗುರು ನೀನು, ಬಾಲಕ ನಾನು ।ಜಗ।ನ್ನಿಯಾಮಕನು ।
ನೀಯಾಕಳ ಕಾವ ಬಗೆ ಹೇಳೊ, ಮಹಾದಯಾಳೊ ।ಎನ್ನಯ ತಪ್ಪು
ತಾಳೊ ॥ ೬ ॥ ಮುಕ್ತಾ ॥

ವೇದಕ್ಕೆ ನಿಲುಕದ ಗುಣವಾರಿಧಿ, ವಿಶ್ವಕ್ಕೇಕಾದಿ ।ವೇ।ದೋದರಜನಕ ।
ಆಧಾರ ಪೋಷಕ ಶಿಕ್ಷಕ, ಮೋಕ್ಷದಾಯಕ ।ನಿನ್ನ। ಸದೃಶರಾರಿಲ್ಲ ।
ಅಧಿಕರ್ಕಾಲತ್ರಯದಲಿಲ್ಲ, ಲಕುಮಿಯು ನಲ್ಲ ।ನಿನ್ನ। ಹೊರೆತಾರಿಲ್ಲ ।
ಈ ದತ್ತ ಸಿರಿಯಿಂದ ಉಕ್ಕಿದೆ, ಮದ ಸೊಕ್ಕಿದೆ ।ಬಂದು। ಪಾದಕೆರಗಿದೆ
॥ ೭ ॥ ಮುಕ್ತಾ ॥

ಕ್ಷಮಿಸೆನ್ನವಗುಣ ದಯಮಾಡೈ, ಕೃಪೆಯಲಿ ನೋಡೈ ।ಪಾದ।ಕಮಲ-
ವಾಶ್ರಯಿಸಿದೆ ।
ಕುಮತಿ ನಿನ್ನವರನು ಕೆಡಿಸಿದೆ, ಕೇಡನೆಣಿಸಿದೆ ।ನೆಂದು। ಅಮರೇಂದ್ರ
ತುತಿಸಿ ।

ನಮಿಸಿ ನಮಿಸಿ ತಾ ನುಡಿಯಲು, ಕೃಷ್ಣ ದಯಾಳು ।ತಾ। ಕ್ಷಮಿಸಿ ನುಡಿದನು ।

ಅಮರೇಶ ನಿನ್ನರ್ಚನೆ ಕೆಡಿಸಿದೆ, ಮದವಿಳಿಸಿದೆ ।ಇನ್ನು। ಭ್ರಮೆ ಬೇಡೆಚ್ಚರವು ॥ ೮ ॥ ಮುಕ್ತಾ ।

ಸುರಭಿ ಪಯೋಧರ ತೊರೆದಳು, ಮಳೆಗರೆದಳು ।ಶ್ರೀ।ಹರಿಗಭಿಷೇಕ ।

ಪರಮಭಕುತಿಯಿಂದೆರೆದಳು, ಸ್ತುತಿಮಾಡ್ದಳು ।ನಮಿಸಿ। ಸುರಪತಿಯೊಡನೆ ।

ಸುರಲೋಕಕ್ಕೈದಿದಳ್ ಮಾನಿಯು, ಹವಿರ್ಧಾನಿಯು ।ಈ। ಹರುಷ ವಾರಿಧಿಯು ।

ವರಗೋಕುಲಸ್ಥರ ಸುಖಿಸಿತು, ನಿತ್ಯ ಸಲಿಸಿತು ।ಶ್ರೀ। ಪರಸನ್ವೆಂಕಟ ದಯದಿ ॥ ೯ ॥ ಮುಕ್ತಾ ॥

ಶಬ್ದಾರ್ಥ:—ಗೇಯ=ಗಾನಮಾಡಿಸಿಕೊಳ್ಳಲ್ಪಡುವ. ಸಂಕುಲ=ಸಮೂಹ. ಅಳವು=ಸಾಮರ್ಥ್ಯ. ವಿಕ್ರಮತ್ರಯ=ಮೂರು ಪದನ್ಯಾಸಗಳು. ಅಬ್ದ=ವರ್ಷ. ಉಪೇತ=ಕೂಡಿದ. ಮಹೀಧ್ರ=ಪರ್ವತ. ಸಹಸ್ರಾಕ್ಷ=ಇಂದ್ರ. ಘನ=ಮೋಡ. ಮೊತ್ತ=ಸಮುದಾಯ. ಸಪ್ತಾಹ=ಏಳು ದಿನ. ಆಕ್ರಂದಿಸು=ರೋದನಮಾಡು. ನಲ್ಲ=ಗಂಡ. ಉಚ್ಚೈಃಶ್ರವ=ನಾಯಿಚತ್ತರಿಗೆ. ಸೂದನ=ನಾಶಮಾಡುವವ. ಒಕ್ಕಲು=ಜನಗಳು. ಉಕ್ಕು=ಸೊಕ್ಕು. ಭೂಯರ್ನ್ನ=ಬಹಳನ್ನ. ಚಾರು=ಮನೋಹರ. ಹವಿರ್ಧಾನಿಯು=ಯಜ್ಞವನ್ನು ಪೂರೈಸುವವಳು. ( ಯಜ್ಞಕ್ಕೆ ಬೇಕಾಗುವ ಬಹುಸಾಮಗ್ರಿಗಳು ಈಕೆಯಿಂದಲೇ ಹುಟ್ಟುತ್ತವೆ. )

ವಿ. ಸಂ. ನಂದಾದಿ ಗೋಕುಲದ ಸಕಲ ಜನರೂ, ವರುಷವರುಷಕ್ಕೆ ಮಾಡುತ್ತ ಬಂದಿರುವ, ಪರ್ಜನ್ಯೋತ್ಸವವನ್ನು ಮಾಡುವುದೆಂದು, ಅದರ ಸಂಭಾರಗಳನ್ನು ಜೊತೆಗೊಳಿಸುವ ಭರದಲ್ಲಿದ್ದರು. ಈ ಉತ್ಸವವು ಇಂದ್ರನ ಉದ್ದಿಶ್ಯವಾಗಿದ್ದದರಿಂದ, ಆ ಇಂದ್ರನಿಗೂ ತಾನು ನಿಯಾಮಕನೆಂದು ಲೋಕಕ್ಕೆ ತಿಳಿಸುವದಕ್ಕಾಗಿ ಶ್ರೀಕೃಷ್ಣನು, ಜನರನ್ನೆಲ್ಲ ಮೆಲುಮಾತುಗಳಿಂದ ಸಮ್ಮತಿಸಿ ಗೋವರ್ಧನ ಪರ್ವತವನ್ನು ಪೂಜೆಮಾಡಲು ಹಚ್ಚಿದನು. ಆಗ ಇಂದ್ರನು ಕ್ರೋಧಪರವಶನಾಗಿ ಶ್ರೀಕೃಷ್ಣನ ನಿಜಾಂಶವನ್ನರಿಯದೆ, ಗೋಕುಲಪ್ರಜೆಗಳನ್ನು ಶಿಕ್ಷಿಸುವೆನೆಂಬ ಹಮ್ಮಿನಿಂದ ಪ್ರಳಯ ಮೇಘಗಳಿಗೆ ಆಜ್ಞೆಯನ್ನಿತ್ತನು. ಆದರೆ ಅವುಗಳ ಆಟವು ಶ್ರೀಕೃಷ್ಣನ ಮುಂದೆ ನಡೆಯಲಿಲ್ಲ. ಸ್ವಾಮಿಯು ಗೋವರ್ಧನ ಗಿರಿಯನ್ನೇ ಕಿರಿಬೆರಳಿನಲ್ಲಿ ನೆಗಹಿ ಜನರನ್ನು ರಕ್ಷಿಸಿದನು. ಹಿಂದಿನಿಂದ

ಗರ್ವಹೋಗಿ, ಇಂದ್ರನು ಕಣ್ದೆರೆದು ಹರಿಗವನು ಶರಣು ಬಂದನು. ವಿಕ್ರಮತ್ರಯ=ಶ್ರೀಹರಿಯು ವಾಮನಾವತಾರದ ಕಾಲಕ್ಕೆ ಬಲಿಯಲ್ಲಿ ಮೂರಡಿ ಭೂಮಿಯನ್ನು ದಾನಬೇಡಿ, ತ್ರಿವಿಕ್ರಮಾವತಾರದಿಂದ ಮೂರೂ ಲೋಕಗಳನ್ನೇ ವ್ಯಾಪಿಸಿದನೆಂದು ಪುರಾಣವು ಗೂಢಲಿಂಗ, ಕೃಷ್ಣನೇ ಸಾಕ್ಷಾತ್ ವಿಷ್ಣು ಎಂದು ಯಾರಿಗೂ ತಿಳಿದಿರಲಿಲ್ಲ. ಮಹಾವಿಶ್ವತತ್ವ, ಶ್ರೀಕೃಷ್ಣನಾದಂಥ ವಿಶ್ವವ್ಯಾಪಕ ತತ್ವ. ವೇದೋದರ ಜನಕ=ವೇದಗಳು ಉದರದಲ್ಲುಳ್ಳ ಬ್ರಹ್ಮನ ಪಿತನು (ವಿಷ್ಣು) ನುಡಿಗಳು ೪೦೦ ಸಾಂಗತ್ಯ ವಿಭೇದವು.

---

೩೭

## ವರುಣಪಾಶಬಂಧಮೋಚನ.

ಕೋ[illegible]ರಾಗ — ಏಕತಾಳ

ಹರಿಪ್ರವಣರು ಗೋಪಾಲಕರು । ಶ್ರೀ–
ಹರಿಕಥಾಮೃತವೃತಸ್ತುತಿರತರು ॥ ಪಲ್ಲ ॥

ಕಾಂಬುದು ಕೇಳ್ವುದು ಕೊಂಬುದು ಕೊಡುವುದು ।
ಸಂಭಾಷಣ ಪ್ರಾಣ ನಡೆ ಶ್ವಾಸ ॥
ಸಂಭ್ರಮಮನೋರಥಲ್ಲ್ಯವಸ್ಥಾತ್ರಯ ।
ಅಂಬುಜನಾಭನಿಗರ್ಪಿಪರು ॥ ೧ ॥

ಕರಣತ್ರಯವು ಸುಕೃತದುಷ್ಕೃತಬಂಧಕವು ।
ಪರಮಪದವು ಸತ್ತ್ವಾತ್ರಯವು ॥
ಹರಿಯಾಧೀನವು ಸಿರಿಸರಸಿಜಭವ ।
ಹರಸುರರ್ ಹರಿದಾಸರೆನುತಿಹರು ॥ ೨ ॥

ಗೋದೋಹನ ರವ್ಯುದಯ ದಧಿಮಂಥನ ।
ಮೋದಗೃಹದ ಕೃತ್ಯಾದಿಯಲಿ ॥
ಶ್ರೀಧರಬಲಭದ್ರರೌದಾರ್ಯವಿಕ್ರಮ ।
ಆದರದಲಿ ನಿತ್ಯ ಪಾಡುವರು ॥ ೩ ॥

ಹರಿದಿನ ನಿರಶನ ನಿರ್ಜಲವ್ರತದಲಿ ।
ಹರಿಜಾಗರ ಮಾಡಿ ವ್ರಜನಾಥ ॥

ವರಯಮುನಾ ಸ್ನಾನವ ಮಾಡುತಿರಲು ।
ವರುಣದೂತರು ಕಟ್ಟಿಕೊಂಡೊಯ್ಯಲು ॥ ೪ ॥

ಹೇ ! ಕೃಷ್ಣ ! ರಾಮ ! ಎನುತ ಕೂಗಿದರು ಅ– ।
ನೇಕಾರ್ತಸ್ವರದಲಿ ಗೋವಳರು ॥
ಶ್ರೀಕೃಷ್ಣಕೇಳಿ ವರುಣಾಲಯ ಕೈದಲು ।
ಶ್ರೀಕಾಂತನ ಕಂಡು ಪ್ರಣಮಿಸಿದ ॥ ೫ ॥

ತವ ಪಿತನರಿಯದೆ ದೂತರು ತಂದರು ।
ಭವಹರ ತ್ರಾಹಿ ತ್ರಾಹಿ ಪಾಹಿಯೇನುತ ॥
ಸ್ತುವಿಸಿದ ಈ ಘನ ಸವೆಯದ ತಪ್ಪು ಕ್ಷಮಿ– ।
ಸ್ಯವಲೋಕಿಸು ನಿನ್ನ ಭಟನೆಂದ ॥ ೬ ॥

ಇಂದೆನ್ನ ಜನ್ಮ ಸಫಲವು ಸರ್ವಸಿದ್ಧಿ ।
ಇಂದಿಗೆ ನಿನ್ನಪದವಾರಿಜವ ॥
ಹೊಂದಿದೆ ನಮಿಸಿದೆ ಮಹಿಮೆಯನರಿಯದೆ ।
ತಂದರು ತಂದೆಯ ತಂದೆ ನಮೊ ॥ ೭ ॥

ಬಲುಃ ಅಪರಾಧವ ಕ್ಷಮಿಸು ದಯಾನಿಧೆ ।
ಸಲೆ ನಿನ್ನಯ್ಯನ ಗ್ರಹಿಸು ಹರೆ ॥
ಸಲಹೆನ್ನನು ಎಂದು ಬಹಳ ಭಕುತಿಯಿಂದ ।
ನಳಿನಭವೇಶನ ಪೂಜಿಸಿದಾ ॥ ೮ ॥

ಎನ್ನ ಸಂಶಯವೆಲ್ಲ ದೂರವು ಯದುಪತೆ ।
ಧನ್ಯನೆನಿಸಿದೆ ತವಾರ್ಚನೆಯಿಂ ॥
ಎನ್ನುತ ಪುನಃಪುನಃ ಪ್ರಣಮಿಸಿ ರಮೆಯರ ।
ಸನ್ನನ ಪ್ರಸನ್ನೀಕರಿಸಿದನು ॥ ೯ ॥

ಅಪ್ಪಂಗೆ ತಾನಭಯವನಿತ್ತು ಶ್ರೀಪತಿ ।
ಅಪ್ಪನಿಗಾಶ್ಚರ್ಯ ತೋರ್ದ ಹರಿ ॥

ಒಪ್ಪುವ ಬಂಧುಬಳಗಕೆಲ್ಲ ಹೇಳಿದ ।
ತಪ್ಪದೆ ನಂದ ವ್ರಜಕೆ ಬಂದು ॥ ೧೦ ॥

ಅತ್ಯಾನಂದದಿ ನುಡಿವರು ನಿನ್ನ ಮಗ ।
ಮುಕ್ತಾಮುಕ್ತವಂದಿತಚರಣ ॥
ನಿತ್ಯಾನಂದನ ಈಶ್ವರತ್ವವ ನಾವ್ ।
ಪ್ರತ್ಯಕ್ಷ ನೋಡಿದೆವೆಂದರವರು ॥ ೧೧ ॥

ತನ್ನೀಶ್ವರತ್ವದ ಬಗೆಯನು ತಿಳಿಯಬೇ- ।
ಕೆನ್ನುವ ನಿಜಭಕ್ತಗೋಪಾಲರ ॥
ಬಿನ್ನಹವಾಲಿಸಿ ಬ್ರಹ್ಮಹ್ರದದೊಳು ।
ಚೆನ್ನಾಗಿ ಮುಳುಗಿಸಿ ತೋರಿದನು ॥ ೧೨ ॥

ಅವಿದ್ಯಾಕಾಮ್ಯಕರ್ಮವ ಮಾಡಿ ಬಲು ಬಲು ।
ಹೇವದಿಂ ಸ್ವರ್ಗಭವಕ್ಕೈದುತಿಹ ॥
ಪ್ರಾವೃತರ್‍ಗಳಿಯುವ ಮೌನಿಜನಸ್ಥಳ ।
ದೇವ ತೋರಿದ ಅಪವರ್ಗವನು ॥ ೧೩ ॥

ಅನಂತ ಛಂದಸ್ಸುಗಳಿಂದ ಸ್ತುತ್ಯನನು ।
ಆನಂದಜ್ಞಾನಮಯರೂಪನನು ॥
ಆ ನಂದಗೋಪರಾನಂದದಿ ಕಂಡರು ।
ಆನಂದಯೋಗಮಯನಾಶ್ರಿತರು ॥ ೧೪ ॥

ಅತ್ಯದ್ಭುತ ಮಹಿಮಾತಿಶಯನ ಕೃಪ ।
ಸತ್ಯೇಶಭವವಿಪಾಹಿಪರಿಂ ನುತನು ॥
ನಿತ್ಯಾನಂದ ಪ್ರಸನ್ನವೆಂಕಟ ಕೃಷ್ಣ- ।
ಭಕ್ತರು ಜೀವನ್ಮುಕ್ತರವರು ॥ ೧೫ ॥

ಶಬ್ದಾರ್ಥಃ—ಪ್ರವಣರು=ಭಕ್ತರು. ಗೋದೋಹನ=ಆಕಳಕರೆವುದ. ದಧಿಮಥನ=ಮೊಸರು ಕಡೆಯುವದು. ಆರ್ತಸ್ವರ=ಸಂಕಟದಸ್ವರ. ತ್ರಾಹಿ=ರಕ್ಷಿಸು. ಸ್ತುವಿಷ=ಸ್ತೋತ್ರವಮಾಡು. ಪದವಾರಿಜ=ಪದಕಮಲ. ಅಪ್ಯ=ಅಪ್ಪ. ನಳಿನಭವ=ಬ್ರಹ್ಮ. ತವ=ನಿನ್ನ. ಅರ್ಚನೆ=ಪೂಜಾ.

ಅಪ್ಪಂಗೆ=ವರುಣನಿಗೆ. ಬಗೆ=ರೀತಿ. ಕಾಮ್ಯಕರ್ಮ=ಫಲಾಪೇಕ್ಷೆಯಿಂದ ಮಾಡುವ ಕರ್ಮಗಳು. ಪ್ರಾವೃತರು=ಸಂಸಾರದಿಂದ ಮುಕ್ತರಲ್ಪಟ್ಟವರು. ಅಪವರ್ಗ=ಮೋಕ್ಷ. ಛಂದಸ್ಸು=ವೇದ. ಸತ್ಯೇಶ=ಬ್ರಹ್ಮ. ವಿಪ=ಗರುಡ. ಅಹಿಪ=ಶೇಷ. ಅವಿದ್ಯಾ=ಅಜ್ಞಾನ

ವಿ. ಸಂ. ಅವಸ್ಥಾತ್ರಯ=ಜಾಗ್ರತ, ಸುಷುಪ್ತಿ, ಸ್ವಪ್ನ ಎಂಬೀಮೂರು ಅವಸ್ಥೆಗಳು. ಕರಣತ್ರಯ=ಕಾಯ, ವಾಕ್, ಮನ ಎಂಬ ಮೂರು ಕರಣಗಳು. ಸತ್ತಾತ್ರಯ=ಸ್ವರೂಪಸತ್ತಾ, ಪ್ರವೃತ್ತಿಸತ್ತಾ, ಪ್ರಮಿತಿಸತ್ತಾ. ಜ್ಞಾನಾನಂದಮಯ=ಪರಮಾತ್ಮನು ನಿರ್ಗುಣನೆಂದರೆ ಗುಣತ್ರಯಗಳಿಂದ ರಹಿತನೇ ಹೊರತು, ಬೇರೆ ಅಲ್ಲ. ಜ್ಞಾನಾನಂದಾದಿ ಗುಣಗಳವನಲ್ಲುಂಟು. ಇದು ಸಾಂಗತ್ಯ ವಿಭೇದವು ಪದಗಳು ೪೧೫.

---

೩೮

## ರಾಸಕ್ರೀಡೆ

ಕೇದಾರಗೌಳರಾಗ — ಝಂಪೆತಾಳ.

ಕಾಮನಯ್ಯನ ಕಾಮಿನಿಯರ । ಕಾಮುಕಭಕ್ತಿಯೆ ಮುಕ್ತಿ ।
ಸೋಮಕುಲಾಬ್ಧಿಸೋಮ ನೀರದ । ಶಾಮನ ಪ್ರೇಮಪಾತ್ರರು ॥ ಪಲ್ಲ ॥

ಮುಗ್ಧಾಂಗಿಯಳ ಮುಖವನು ಪ್ರಿಯನು । ಸ್ನಿಗ್ಧ ಸುಹಾಸದಲಿ ಚುಂಬಿಸುವಂತೆ ।
ದುಗ್ಧಾಬ್ಧಿಯಜಾತನುದಯದಲಿ ಪ್ರಾಕ್ । ದಿಗ್ವಧುಸಂಗಮ ಮೆರೆಯಲು ।
ಸುಗ್ಗಿಯಾಯಿತು ಗೋಪಾಲಕರ ವಧು । ವರ್ಗಕೆಂಬಿಲ್ಲ ಕಬ್ಬುಬಿಲ್ಲಿನವನಸು ।
ಮಾರ್ಗಣಕ್ಕೆ ಮರುಳುಗೊಂಡರಾಗವರ್ । ಉಗ್ಗಡ ವೇಣುನಾದಕ್ಕೆ ॥ ೧ ॥

ಕುಸುಮತರುಲತಾಖ್ಯ । ಶಿಸುಗಳೆಸೆವ ಕರಸ್ಪರ್ಶದಿಂದಲಿ ।
ಶಶಿಯು ಪರಾಮೃಶನ ಮಾಡಿ । ಸುಸುಖವೀವ ತೆರದಲಿ ॥
ಪಸರಿಸಿದನು ಶೀತಕಿರಣಗಳ್ । ಬಿಸಜಸಖನ ತಾಪವಡಗೆ ।
ಶಿಶಿರಋತುವಿನ ಯಶಸು ವಸದಿ । ಶಶಿಮುಖಿಯರೆದೆಗೆ ಇಸಿತು ॥ ೨ ॥

ಶ್ರೀಕರನವಾರುಣಕುಂಕುಮದಿಂದ । ಲಕುಮಿ ಮುಖವು ಒಪ್ಪುವ ತೆರದಿ
ಸುಕಳಾನಿಧಿಯ ಬಿಂಬವ ವಸದಿ । ಶ್ರೀಕೃಷ್ಣ ಕಂಡು ವೇಣುವನು ॥

ಜೀಕಾದ ವಾಮಪ್ರಿಯರಿಗೋಸುಗ । ನೇಕಮಂಜಳ ರಾಗಂಗಳ ನುಡಿಸಿದ।
ಆ ಕಾಂತೆಯರಾಗ ಕೇಳಿದರು ಮೂರಸಾ। ಯಕದಿ ಉರುಚಿತ್ತಸೇಗದಿ ॥ ೩ ॥

ನೂಕಿ ಲಜ್ಜೆಯನು ನಡೆದರೆಲ್ಲಾರು । ಶ್ರೀಕಾಂತನನ್ನೊಡಗೂಡಲಾಗಿ ಮನೆ– ।
ಯಾ ಕೆಲಸವನು ಬಿಟ್ಟು ಮೋಹಿಸಿದರ್ । ಮಕ್ಕಳು ಸ್ವಕೀಯ ಪುರುಷರ ॥
ಆಕಳ ಕರೆಸಿ ವೃಷಕೆ ಮುರುವ । ಹಾಕಿ ಶಿಶುಗಳಾಕ್ರೋಶವ ಕೇಳದೆ ।
ತೋಕರೆಂದಳತೀಮಾನವೆತ್ತಿಕೊಂಡು । ರಾಕಾಚಂದ್ರಾಸ್ಯೆಯರು ನಡೆದರು ॥ ೪ ॥

ಕರೆವ ಹಾಲ ಬಿಸುಟು ತನ್ಮಯ । ತರಳರ್ಗೆ ಸ್ತನಪೂರ್ಣ ಕೊಡಪಿ ।
ಪರಿವೇಷಣವ ಮಾಡುತ ಬಿಟ್ಟರು । ಹರಿಯ ಕೊಳಲ ಧ್ವನಿಗೇಳಿ ॥ ೫ ॥
ಕರವಲಯವ ಕಾಲಿಗಿಟ್ಟುಕೊಂಡು । ಚರಣಭೂಷಣ ಕೈಗೆ ಸಿಕ್ಕಿಸಿ ।
ಕರಣಕುಂಡಲ ನಾಸದಲಿಟ್ಟು । ಬರಿಯ ಮುಗುತಿ ಕಿವಿಗಿಟ್ಟು ॥
ಕೊರಳಮಾಲೆಯನೆ ಕಟಿಗೆ ಸುತ್ತಿ । ಕೊರಳಿಗೆ ಕಾಂಚೀದಾಮವ ಹಾಕಿ ।
ನೆರೆ ನಿವಾರಿಸುವರನು ನೂಕಿ । ಪರಮಪುರುಷನ್ನೈದಿದರು ॥ ೬ ॥

ಥವನಧವನ ಬಿಟ್ಟು ಶಿರಿಮಾ । ಧವನ ಭಕುತಿನಟ್ಟು ವಿರಹದಾ– ।
ಹವದಿ ನೊಂದು ವಿಷ್ಣುಭಾವುಕೆ । ರವರು ವೇಣುರವರಸ ॥
ಸವಿದು ಪ್ರಿಯವಿಯೋಗದುಸ್ಸಹ । ಲವ ಯುಗವೆಂಬ ಗುಣತ್ರಯಂಗಳ।
ಹವಣ ಮುರಿದು ಜಾರಭಕುತಿ । ಭಾವದಿ ಅಚ್ಯುತನ ನೆನೆದರು॥ ೭ ॥

ಅವ್ಯಕ್ತಪ್ರಮೇಯ ಗುಣಗಣಾಬ್ಧಿಯು । ಸುವ್ಯಕ್ತಮಾಡಿದ ಕಾಮಿನಿಯರ್ಗೆ ಸ್ನೇಹ ।
ನವ್ಯ ನವ್ಯ ಸುಖವರ್ಗಿತ್ತ ನಿರ್ಲಿಪ್ತ । ಭಾವ್ಯಜ್ಞಾನಾತ್ಮಮೂರುತಿ ದೇವಾ ॥
ದಿವ್ಯಜ್ಞಾನವು ಭಕ್ತಿಭರಿತ ಗೋಪವರ್ಗೆ । ದಿವ್ಯಜ್ಞಾನೋಪದೇಶವನು ಮಾಡಿದ ।
ದಿವ್ಯಜನಗುರು ಮೋಹಿಸಿದನು ಕಾ । ಮವ್ಯಥೆ ಉದ್ರೇಕವಾಗುವಂತೆ ॥ ೮ ॥

ಆ ಗೋಪ್ಯ್ನಾರಿಯರ ನೋಡಿ ಮುಕುಂದ । ಈಗಾಗಮನವೇಕೆಂದ ನಿಮಗೆ ಭೀಕರಾ- ।
ದಾ ಘೋರರಾತ್ರಿಲಿ ದುಷ್ಟವಿಹಾರವು । ನಾಗಾರಿಮಧ್ಯೆಯುಗ್ರುಚಿತ ವಲ್ಲ ॥
ಬೇಗದಿ ನಿಮ್ಮಾಪ್ತರು ಅರಸಿ ಕಾಣ । ದಾಗಿದ್ದು ಬೇದಮೊಳ್ಪುದೇ ಆಧ ರ್ಮವು ।
ಸಾಗಿಬಂದುದಕೆ ಕಂಡಿರಿ ನಮ್ಮನು । ಪೂಗೊಂಚಲುತರುಲತೆಗಳ ॥ ೯ ॥
ರಮ್ಯವನವು ಪಲ್ಲವಶಾಖೆಕುಂಜ । ಧರ್ಮಾನುಜಾವೇಗಸೌಂದರ್ಯ ನೋಡಿ ।
ನಿಮ್ಮ ಮುಖಬಾಲಕಾರ್ಕದೀಪದಲಿಯೆ । ನಿಮ್ಮಾಳ್ವತೈವಾವ ಪುರುಷರ ॥
ಸಮ್ಮತವಲ್ಲ ಉಪೇಕ್ಷೆಯು ಸ್ತ್ರೀಯರ । ಜನ್ಮಕ್ಕೆ ವರ್ಯರ ಸೇವೆಯೇ ಮುಖ್ಯವು ।
ಧರ್ಮವಲ್ಲನ್ಯಪುರುಷರ ಸೇವೆಯು ಸಖ್ಯ । ಸಂಭಾಷಣ ಸಹವಾಸವು ॥ ೧೦ ॥
ಸನ್ನೀಕ್ಷಣ ಶ್ರವಣ ಕೀರ್ತನೆ ಧ್ಯಾನದ । ಪುಣ್ಯವೇ ಅಧಿಕವಾ ಮದ ಸೇವೆಗೆ ।
ಸನ್ನಿಕರಷಣ ಫಲವಧಿಕವಲ್ಲ । ಇನ್ನೈದಿರೆಂದ್ಹರಿ ನುಡಿದರೆ ॥
ಕನ್ಯೆಯರಿಗೆ ಹೃತ್ತಾಪವಡರಿತು । ಇನ್ನೇಕೀ ಜನ್ಮವೆನುತ್ತಾರ್ತಸ್ವನದಿ ।
ಚಿನ್ಮಯ ಹರಿ ವ್ಯರ್ಥವಾಯಿತು ಎಂದು ವಾಕ್ । ಸನ್ನಿರೋಧರಾಗಿ ತಲೆಬಾಗಿ ॥ ೧೧ ॥
ಕಣ್ಣಲಿ ಅಶ್ರು ತುಂಬಿಬಂದು ಧಾರಿಟ್ಟವು । ಪೊನ್ಗೊಡವೊಲೆಯು ಗಂಧಾ ನುಲೇಪದ ।
ಹೊನ್ನಕುಪ್ಪುಸವ ತೋಯಿಸಿ ಪದವಿಳೆಯ । ಕನ್ಯೆರುಂಗುಟದಿ ಲೇಖಿಸುತ್ತ ॥
ಕನ್ಯೆರಾತಂಕದ ನುಡಿಯ ಕೇಳಿದ । ರಿನ್ನೇನು ಪ್ರಿಯನ ಪ್ರಿಯಕರ ವಾಕ್ಯ ।
ವನ್ನು ನುಡಿದಾನೆಂದು ರೋದಿಸಿ ಶಿಷ್ಟೆರು । ಸನ್ನಗದ್ಗದ ನುಡಿಯಲಿಂತೆಂ ದರು ॥ ೧೨ ॥

ಇಷ್ಟವಲ್ಲೈ ಖಳನೃಶಂಸರಾ ಮಾತು। ಕಷ್ಟದಿ ನೊಂದೆವು ಸಮಸ್ತವಿಷಯ ।
ಬಿಟ್ಟು ಬಂದಿಹೆವು ನಿನ್ನಂಘ್ರಿಮೂಲವ। ನಬಿಟ್ಟಪೆ ಪೂಜಿಪೆವೆಂದೆಮ್ಮ ಮನವು।
ಕೃಷ್ಣ ನಿನ್ನುಳಿದು ಅನ್ಯಾಶ್ರಯ ಕಾಣೆವು । ಶಿಷ್ಟರಾರ್ತಬಂಧೋ ಕೇಳೊ ಮುಮುಕ್ಷರ್ಗೆ ।
ನಿಷ್ಠೆ ನಿಮ್ಮಲ್ಲಿದ್ದು ಸ್ಥಿತಿಯುಸ್ಥಿತಿಯ । ಕೆಟ್ಟಾಸೆಯೇಕಿನ್ನವರಿಗೆ ॥ ೧೩ ॥

ಸ್ತ್ರೀಯರ್ಗೆ ತಮ್ಮ ಪತಿಯೇ ಸುಹೃತ್ಸ್ನೇಹ । ನೀಯೆಂಬವದು ಧರ್ಮವು ನೀನೆಂದುದು ಸತ್ಯ ।
ಪ್ರೀಯರು ನಿನ್ನ ಸಂಪರ್ಕದಿಂದೆಲ್ಲಾರು। ಪ್ರೀಯನಃ ಸರ್ವರಿಂದೆಂದರ ಸುತ।
ಶ್ರೀಯಂಘ್ರಿಯ ಸ್ನೇಹ ತೊಡಕಿ ಬಂದೆವು । ಪ್ರೀಯೋತ್ತಮ ನಮ್ಮ ಆಶೆ ವೃಥಾಮಾಡೋ ।
ದೀಯಧರ್ಮವು ನಿಮಗೆ ಸಲ್ಲದು ಹೃ। ದಯತಾಪವಾರಕ ಕೇಳೊ ಶ್ರೀ ಹರೆ ॥ ೧೪ ॥

ನಿಮ್ಮ ಶ್ರೀಪಾದಾಬ್ಜ ಬಿಟ್ಟೇಳಲೊಲ್ಲವು । ನಮ್ಮ ಕಾಲ್ಗಳು ಮುಂದಕೆ ತವಾಧರ- ।
ದಮ್ಮರುತವನ್ನು ಸೇಚಿಸು ಮಂ । ದಸ್ಮಿತೇಕ್ಷಣಲಕ್ಷಣನಾಗಿ ॥
ಸನ್ಮಾರ್ಗ ವೇಣುನಾದವನು ಕೇಳಿಸು । ರಮ್ಮಣೆಯರರ್ಥ ಪೂರೈಸೊ ಮುಕುಂದ ।
ನಿಮ್ಮಂಘ್ರಿ ಪದ್ಮದ ವಿರಹಜಾಗ್ನಿಯ । ಶಮ್ಮನವನು ಮಾಡು ಶ್ರೀಪತೆ ॥ ೧೫ ॥

ನಿನ್ನ ಕೃಪಾಂಬುಧಿಲಿಂದೆಮ್ಮ ಸಂದಿಸು । ಇನ್ನೆಮ್ಮುಪೇಕ್ಷಿಪೆಯಾದರೆ ಪ್ರಾಣವ ।
ಚಿನ್ಮಯಾಂಘ್ರಿ ಗೊಪ್ಪಿಪೆವು ನೀಸೇ ಸಾಕ್ಷಿ । ಕನ್ಯೆ ಲಕುಮಿ ನಿಮ್ಮ ಹೃನ್ಮಂದಿರ- ॥
ವನ್ನಾಶ್ರಯಿಸಿದ್ದು ತೃಪ್ತಿ ಇಲ್ಲದೆ । ಹೊನ್ನ ಶ್ರೀತುಲಸಿಯನಾದಳು ಶ್ರೀಪಾದ।
ವನ್ನು ಬಿಡಳು ನಾವೆಂತು ಬಿಡುವೆವು । ಧನ್ಯವು ವರಜನಪ್ರಭೋ ॥೧೬॥

ಇಂದೆಮ್ಮ ಸ್ವೀಕರಿಸುವದು ಧರ್ಮವೇ। ಇಂದಿರೆಯರಸ ಮೂಲೋಕ
ಸುಂದರ ।
ಎಂದೆಂದು ಸರಿಮಿಗಿಲಿಲ್ಲದಚ್ಯುತ । ಬಂದೆವು ತಪಿಸಿಯಿಂದೀಗ ।
ಹೊಂದಿಸು ಕೈಯ್ಯ ನಮ್ಮುರೋಜಗಳಿಗೆ । ಇಂದೀವರೇಕ್ಷಣ ಪ್ರಸನ್ನವದನ ।
ಎಂದು ಪ್ರಾರ್ಥಿಸಿದರಬಲೆಯರು ದಯದಿ । ಸಿಂಧು ಮುಕುಂದ ಸಲ
ಹೆಂದರು ॥೧೭॥
ಅಂದು ಯೋಗೇಶ್ವರೇಶ್ವರ ದಯಾಂಬುಧಿ । ಇಂದುಮುಖಿಯರ ರಮಿಸಿದ
ಸ್ವರಮಣ ।
ಮಂದಸ್ಮಿತೇಕ್ಷಣರೋಚಿಯಿಂದಚ್ಯುತ । ಇಂದು ಭಾಮೆಯರ ಮಧ್ಯದಲ್ಲಿ॥
ಚಂದಾದ ವೈಜಯಂತಿಕೊರಳಿಂದ ಗೋಪೇರ । ವೃಂದದಿ ರಾಜೀವನೀಲೋ
ತ್ಪಲಕುಸುಮ ।
ಗಂಧಮಾರುತನೆಡೆ ಗಾನಕೇಳಿ । ಕುಂದರದನೆಯರು ನಂದದಿಂದ ॥ ೧೮ ॥
ಕಾಳಿಂದಿಕೂಲ ಭ್ರಾಜದ್ಧ್ವನಂಗಳಲಿ । ಆ ಲೋಲನೇತ್ರೇರ ಕ್ರೀಡಿಸಿ
ಅಲ್ಲಲ್ಲಿ ।
ಮೆಲ್ಲಿದೆಗಾರ್ತೆರ ತೋಳಲಿ ತೋಳಿಟ್ಟು। ಭಾಳ ನರ್ಮೋಕ್ತಿಯಿಂದಲೊಪ್ಪಿ ॥
ಶ್ರೀಲೋಲ ಹಾಸೋಕ್ತಿಗಳಿಂದ ಕೂಡಿ ಕ । ರಾಳಕ್ರೀಡೆಯಿಂದ ವಾಸವ
ಜಗುಳಿಸಿ ।
ಪುಲಿಟ್ಟೆಡೆಮೊಲೆಯಲ್ಲಿ ಲೇಖಿಸಿದ । ಸಾಲು ಕರಜಾಗ್ರಗಳಿಂದಲಿ ॥ ೧೯ ॥
ಕಾಮಾಗ್ನಿಯಿಂ ತಪ್ತರಾಮೆಯರಿಗೆ ಪೂರ್ಣ । ಕಾಮ ಮನ್ನಿಸಿದರೆ ಮತ್ತ
ರಾದರು ।
ಪ್ರೇಮಾವಲೋಕನಭಾಗ್ಯವುದಿಸಿತು । ಸೋಮಪೂರ್ಣಸುಮುಖಿಯರಿಗೆ ॥
ಶ್ರೀಮಾಧವ ತಮ್ಮ ವಶ್ಯನೆಂಪರಿತು । ವಾಮದೃಶೆಯರು ತಿಳಿದರಾಕ್ಷಣ ।
ಈ ಮಹಾಪರಾಧವ ಕಂಡು ದೇವೇಶ । ತಾ ಮತ್ತೆ ಅಪ್ರತ್ಯಕ್ಷನಾದನು
॥ ೨೦ ॥
ಶ್ರೀಭೂದುರ್ಗಾಲೋಲ ಲೀಲಾವಿಶಾಲನು। ತ್ರಿಭುವನೇಶ್ವರ ತ್ರಿಭವನಾಧಿಪ।
ಭೂಭೃತಸಂಭೃತ ಸನ್ನುತ ಶ್ರೀಪದ್ಮ । ವಾಭನಂತಾನಂತಭಾನುಭಾ ॥

ಭೂಭಾರ ಸಂಹಾರಸಾರಕೃಪಾಕರ । ಸ್ವಭಾವ ವೈಭವಜ್ಞಾನಾನಂದಧರ ।
ಶ್ರೀಭೃತ್ ಪ್ರಸನ್ನವೆಂಕಟಕೃಷ್ಣ ಸರ್ವೇಷ್ಟ । ಶೋಭಿಸಿದನು ವ್ರಜದಿ ॥೨೧॥

ಶಬ್ದಾರ್ಥ:— ಅಯ್ಯ=ಅಪ್ಪ. ಕಾಮುಕಭಕ್ತಿ=ಕಾಮವಾಸನೆಯಿಂದುಂಟಾದ ಭಕ್ತಿ. ಸೋಮ=ಚಂದ್ರ. ನೀರದ=ಮೇಘ. ಶ್ಯಾಮ=ನೀಲವರ್ಣ. ಮುಗ್ಧಾಂಗಿ=ಮೋಹವನ್ನುಂಟು ಮಾಡುವ ಶರೀರವುಳ್ಳವಳು. ಸ್ನಿಗ್ಧ=ಸ್ನೇಹಯುಕ್ತ. ದುಗ್ಧಾಬ್ಧಿ=ಹಾಲಿನಸಮುದ್ರ. ಜಾತ= ಹುಟ್ಟಿದವನು ( ಚಂದ್ರ ). ಪ್ರಾಕ್=ಪೂರ್ವ. ಕಬ್ಬುಬಿಲ್ಲಿನವ=ಕಾಮ. ಸುಮಾರ್ಗಣಕ್ಕೆ= ಬಾಣಗಳಿಗೆ. ಉಗ್ಗಡ=ಶ್ರೇಷ್ಠ. ಹೆಚ್ಚಿನ. ಶೌಭ್ಯ= [illegible] ಉಪಚಾರ. ಬಿಸಜ=ಕಮಲ. ಬಿಸಜ ಸಖ=ಕಮಲಮಿತ್ರ ( ಸೂರ್ಯ ). ಶಶಿರುತು=ಶರದೃತು. ಯಶಸು=ಕೀರ್ತಿ. ಇಸಿತು= ತಾಗಿತು. ಅರುಣ=ಕೆಂಪು. ಸುಕಲಾನಿಧಿ=ಚಂದ್ರ. ಪ್ರಾಮದೃಶೆಯರು=ಪ್ರೇಮದೃಷ್ಟಿಯಿಂದ ಕೂಡಿದವರು. ಮಾರ=ಕಾಮ. ಸಾಯಕ=ಬಾಣ. ಶೋಕ=ಮಗು. ರಾಕಾ=ಪೌರ್ಣಿಮಾ. ಪರಿವೇಷಣ=ಸುತ್ತು. ನಾಸ=ಮೂಗು. ಕಟಿ=ಟೊಂಕ ( ನಡು ). ಕಾಂಚೀದಾಮ=ನಡುವಿಗೆ ಹಾಕುವ ಪಟ್ಟಿ. ಧವ=ಗಂಡ. ಭಾವುಕೆಯರು=ಭಕ್ತೆಯರು. ಲವ=ವೇಳೆಯ ಕಿರಿಯಳತೆ. ಹವಣ=ಪ್ರಮಾಣ. ದಿವ್ಯಜನಗುರು=ದೇವರ ದೇವ. ಉದ್ರೇಕ=ಹೆಚ್ಚು. ನಾಗಾರಿಮಧ್ಯೆಯರು= ಗಜಗಳಿಗೆ ವೈರಿಯಾದ ಸಿಂಹನಂತೆ ನಡುವುಳ್ಳವರು. ಅಂದರೆ ಬಡನಡುವಿನವರು. ಧರ್ಮಾನುಜಾ= ಯಮುನೆ. ನಿಮ್ಮಾಳ್ವ=ನಿಮ್ಮ ಪತಿಯು. ಪೂಜ್ಯರು=ಪೂಜ್ಯರು. ಮದಸೇವೆಗೆ=ನನ್ನ ಸೇವೆಗೆ. ಸನ್ನಿಕರ್ಷಣ=ಸಾಮೀಪ್ಯ. ಐದಿರಿ=ಹೋಗಿರಿ. ಹೃತ್ತಾಪ=ಹೃದಯತಾಪ. ಪೊನ್=ಬಂಗಾರ. ಸನ್ನಗದ್ಗದ=ಬಹಳ ಗದ್ಗದ ( ಸ್ವರ ). ನಿಷ್ಠೆ=ಭಕುತಿ. ಸ್ಮಿತ=ಮುಗುಳುನಗೆ. ನಂದಿಸು= ಆನಂದಿಸು. ವರಜನಪ್ರಭು=ಸಜ್ಜನರ ಒಡೆಯ. ನೀಕರಿಸು=ನಿರಾಕರಿಸು. ತಪಿಸಿ=ದುಃಖಬಟ್ಟು. ಉರೋಜಗಳು=ಸ್ತನಗಳು. ಸ್ಮರಮಣ=ಕೃಷ್ಣ. ರೋಚಿ=ಕಾಂತಿ. ಕಾಳಿಂದೀ=ಯಮುನಾ. ಕೂಲ=ದಂಡೆ. ಭ್ರಾಜತ್=ಹೊಳೆಯುವ ( ಒಪ್ಪುವ ). ಧ್ವಾನ=ಸ್ವರ. ಲೋಲ=ಚಂಚಲ. ಮೆಲ್ಲೆದೆಗಾತಿ=ಮೃದುವಾದ ಎದೆಯುಳ್ಳವಳು. ಜಗುಳಿಸು=ಸಡಿಲಿಸು. ಇಟ್ಟೆಡೆಯು=ಎರಡೂ ಕಡೆಯು. ಕರಜ=ಬೆರಳು. ಭಾನುಭಾ=ಸೂರ್ಯನಂತೆ ಹೊಳೆಯುವವ. ವ್ರಜ=ಗೋಕುಲ.

ವಿ. ಸಂ. ಈಹಾಡಿನಲ್ಲಿ ದಾಸರು, ಕೃಷ್ಣನು ಗೋಪಸ್ತ್ರೀಯರೊಡನೆ ರಾಸಕ್ರೀಡೆ ಮಾಡಿದ ವರ್ಣನೆಯನ್ನು ಕೊಟ್ಟಿದ್ದಾರೆ. ಗೋಪಿಯರು ಕೃಷ್ಣನ ಮೇಲೆ ಜಾರಭಕ್ತಿಯನ್ನಿಟ್ಟಿದರೂ ಅವರ ಭಾವನೋದ್ರೇಕದಿಂದ, ಅವರಿಗೆ ಮುಕ್ತಿಯೇ ಆಯಿತು. ಮುಗ್ಧಾಂಗಿ ... ಮೆರೆಯಲು= ಪೂರ್ವದಿಕ್ಕೆಂಬ ಅಂಗನೆಯಿಂದೊಡಗೂಡಿದ ಚಂದ್ರನು, ಸುಂದರಾಂಗಿಯೊಬ್ಬಳನು ಅವಳಪ್ರಿಯನು

ಸ್ನೇಹಪೂರಿತವಾದ ಮುಗುಳುನಗೆಯಿಂದ ಮುದ್ದಿಟ್ಟಂತೆ ಶೋಭಿಸಿದನು. ಗುಣತ್ರಯಂಗಳ ಹವಣ ಮುರಿದು=ತ್ರಿಗುಣಗಳನ್ನು ಬಿಟ್ಟು, ಕೇವಲ ಭಕ್ತಿಭಾವದಲ್ಲಿಯೇ ಬೆರೆತು. ದುಷ್ಟವಿಹಾರವು, ದುಷ್ಟರಿಗೆ ಸಂಚರಿಸಲು ಯೋಗ್ಯವಾದ ಕಾಲವು. ಸಾಗಿ......ದೀಪದಲಿಯು=ಮನೆಬಿಟ್ಟು ಬಂದದ್ದಕ್ಕೆ ನನ್ನನು ಕಂಡಂತಾಯಿತು. ಹೂಗೊಂಚಲು ಗಿಡ, ಬಳ್ಳಿ ಮೊದಲಾದವುಗಳಿಂದ ಶೋಭಿಸುವ ಅರಣ್ಯವನ್ನು ನೋಡಿದ್ದಾಯಿತು. ಬಾಲಸೂರ್ಯನಂತೆ ಬೆಳಗುವ ನಿಮ್ಮ ಮುಖದ ಕಾಂತಿಯಲ್ಲಿ ಯಮುನೆಯ ಪ್ರವಾಹಸೌಂದರ್ಯವನ್ನೂ ನೋಡಿದಿರಿ. ಮುಮುಕ್ಷುರ್ಗೆ............ ಕೆಟ್ಟಾತ್ಮಸಿರಿಸೇಕಿನ್ನವರಿಗೆ=ಮೋಕ್ಷೇಚ್ಛುಗಳಾದವರಿಗೆ ಸದಾ ನಿಮ್ಮಲ್ಲಿಯೇ ಭಕ್ತಿಯು ಬಹಳ. ಆದ್ದರಿಂದ ಸುಸ್ಥಿತಿಯಲ್ಲಿರಬೇಕು; ಕೆಟ್ಟ ಸ್ಥಿತಿಯಲ್ಲಿರಬಾರದೆಂಬೀ ಮೊದಲಾದ ಐಹಿಕ ಆಶೆಗಳಿಂದವರಿಗೇನು ಪ್ರಯೋಜನ. ಸಾಂಗತ್ಯವಿಭೇದವು. ೪೩೬ ನುಡಿಗಳು.

---

೩೯

ಬೇಗಡಾ ರಾಗ ಅಟ್ಟ ತಾಳ.

ಶ್ರೀಕೃಷ್ಣ ಒಮ್ಮಿಂದೊಮ್ಮಿರುಳೆ । ತನ್ನಾ । ಕೃತಿಯುಡಗಿಸಿ ಮರಳೆ ।
ಗೋಕುಲವರಸೆರ್ಗೆ ವ್ಯಾಕುಲಚಿತ್ತವು । ಶೋಕಸಮುದ್ರವು ಮುಂದೋರೆ ॥ ಪಲ್ಲ ॥

ಪ್ರೇಷ್ಟಾನುಪ್ರೇಷ್ಟಸಂತಾಗೆ । ಗುಣೋ । ತ್ಕೃಷ್ಟವ ಪಾಡಿದರಾಗೆ ।
ಕಷ್ಟಭ್ರಾಂತಿಯಲಿ ತರುಲತೆ ನದಿಯೊಳ್ಳೆ । ಥೇಷ್ಟ ನುಡಿಯ ನುಡಿದರಾಗೆ ॥ ೧ ॥

ಸೃಷ್ಟಿಯೋಳ್ ಪರಿಪೂರ್ಣ ಹರಿಯು । ಕಂ । ಗೆಟ್ಟು ಕೇಳ ವದಾಶ್ಚರ್ಯ ।
ವೃಷ್ಣಿ ಕುಲೇಶನು ಬಿಟ್ಟನು ನಮಗೇನು । ಬಟ್ಟೆ ಹೇಳಿದ ಹೇಳಿತ್ವರಿಯಾ । ೨ ॥

ಪಿಪ್ಪಲ ನ್ಯಗ್ರೋಧ ಬದರಿ । ನೀಪ । ಸಂಪಿಗೌದುಂಬರ ಹವರಿ ।
ಅಪ್ಪುತಪ್ಪುತ ಹೋದ ನಾರೇರ ನಂದಜ । ತಪ್ಪಿಸ್ಯೆದನು ಕಂಡಿಹಿರೆ ॥ ೩ ॥

ಕುರವಕಶೋಕ ಕಿಂಶುಕವೇ । ಶ್ರೀ । ಹರಿಪ್ರಿಯ ತುಲಸಿಯಧಿಕವೆ ।
ಸುರಹೊನ್ನೆ ನಾಗಪುನ್ನಾಗನೆ । ಬಲಾನುಜ । ಸರವೆಲ್ಲಿ ಕಂಡಿಲ್ಲವೆ ॥ ೪ ॥

ಮರಗು ಮಲ್ಲಿಗೆ ಮಾಲತಿಯೆ । ಬಕ್ಕೆ । ವರಜಂಬು ಚೂತಸಂತತಿಯೆ ।
ಸುರಗಿ ಶಾವಂತಿಗೆ ಬಕುಲ ಕೋವಿ । ದಾರ । ಪರನುಪುರುಷನೆಲ್ಲಿ ನೆಲ್ಲೆ
॥ ೫ ॥

ಕಂಡಿರಾ ಮಾಧವನಿಂದೆ । ನದಿ । ಥಂಡಥಂಡದ ಮರದ ಮುಂದೆ ।
ಪುಂಡರೀಕಾಕ್ಷನ ಕರಲವಾಮೃತವ । ನುಂ । ಡುಂಡ ಪೂಬಳ್ಳಿಯು ವೃಂದೇ
॥ ೬ ॥

ಹರಿಪಾದಸ್ಪರ್ಶಪುಣ್ಯಧಾತ್ರೆ । ಶ್ರೀ । ಹರಿಯುಶಸ್ಸೃಜ ಪಾರಿಜಾತೆ ।
ನೆರೆ ನಮ್ಮ ಕುಲಸ್ವಾಮಿ ಬರಲಿಲ್ಲವೇ ।ಇಲ್ಲಿ। ಪರಮಃಪುರುಷ ಕುಂದಜಾತೆ
॥ ೭ ॥

ಇಂತು ತರುಲತೆ ಭ್ರಮರಗಳ । ಕೇಳಿ । ಕಾಂತೇರು ವಿರಹಾಗ್ನಿದಿಗಿಲಾ ।
ಶಾಂತತಿಲ್ಲದೆ ಕಂಡರು ಭುವಿಯೊಳು ।ಶ್ರೀ। ಕಾಂತನ್ಹೆಜ್ಜೆ ಹೊಂದಿದವಳ
॥ ೮ ॥

ಪತಿಯು ಕೂಡ್ಯೆದಿದವಳ ಕಂಡು ।ರತಿ। ಪತಿಯು ಮಾರ್ಗಣೆ ತಾಕಿದ್ದಿಂಡು।
ಪತಿ ತನ್ನಂಗನೆಯಳ ರತಿಯಿಂದಪ್ಪು।ವಂತೆ। ಸತಿಯು ತೋಳಿಲಿ ತೋಳಿ-
ಟ್ಟಿಹನಂದು ॥ ೯ ॥

ಪರಮ ಸುಕೃತಿಯುವಳೆಂದು। ದುಃಖ । ಭರಿತರಾಗಿ ನಡೆತಂದು ।
ಧರೆಯು ಮೇಲವಳ್ಹೆಜ್ಜೆ ಅಡಗಿದ್ದನಲ್ಲಿ। ಶ್ರೀ । ಹರಿಹೆಜ್ಜೆ ಕಂಡಂದು
ನೊಂದು ॥ ೧೦ ॥

ನುಡಿದರು ಹೃತ್ತಾಪದಿಂದ ।ತನ್ನ। ಮಡದಿ ಬಳಲಿದಳು ಹಾ ಹಾಯೆಂದು।
ಹೆಡಕನೇರಿಸಿಕೊಂಡು ನಳಿನನಯನ । ನಿಂತ । ಅಡಿಗಳು ಜಡಿದವು ಇಳೆ
ಯಲ್ಲಿಂದು ॥ ೧೧ ॥

ಲಲನೇರೆ ನೋಡಬನ್ನೆನುತ । ಚಂ । ಚಲದಿಂದ ಸುಯಿಲಡಿ ಇಡುತ ।
ನಳಿನಜ ಸುರರಿಗೆ ಹರಿಯುಂಘ್ರಿರಜಾಮೋಘ । ಈ । ಕೆಳದಿಗೆ ಹೆಗಲಿತ್ತ
ನಾಥಾ ॥ ೧೨ ॥

ಹೆಗಲನೇರಿದಳ ಕೈಯಿಂದ । ಹೂವ । ತೆಗೆಸಿದಸಿಲ್ಲಿ ಗೋವಿಂದ ।
ಜಗತೀಲವನ ಪಾದಪದ್ಮ ಒಪ್ಪು ।ತಿವೆ। ಮಿಗೆ ಧ್ವಜಚಕ್ರಾಬ್ಜದಿಂದಾ ।೧೩॥
ಕೇಶಪ್ರಸರಣವ ಮಾಡಿ । ಹೂವ । ಕೇಶಕ್ಲೇಶ ಮುಡಿಸಿದ ನೋಡೆ ।
ಕೇಶವನು ಬಳಿಗಭೀಷ್ಟೆ ಪೂರೈ ।ಸಿದ। ಈ ಸೌಖ್ಯನಮಗಿಲ್ಲ ಪ್ರೌಢೇ॥೧೪॥
ಹೀಗೆ ಪ್ರಲಾಪಿಸುವದನು । ದಯದಿ । ಶ್ರೀಗೋಪಿನಾಥ ತಿಳಿದನು ।
ಹೀಗವಳ ಮೇಲೆ ತಾ ಸ್ನೇಹ । ಮಾಡಲ್ಕೆ । ಬೇಗ ಸೊಕ್ಕಿದಳವಿವೇಕೆ
॥ ೧೫ ॥
ನಾ ಗೋಪೇರೊಳು ಚಲ್ವೆ ತಿಳಿದಾ ।ತಾ। ಶ್ರೀ ಗೋಪಿನಾಥನವರನುಳಿದ ।
ಈಗೆನ್ನ ಹೊತ್ತಿಹನೆಂಬಾಕೆ । ಮನಸೊಕ್ಕು । ಬೇಗ ದುರ್ಮತಿಯೆಂದಾ
ನಕ್ಕು ॥ ೧೬ ॥
ಈಕೆಯ ಮತಿತಕ್ಕತಿಕ್ಷ್ಣಾ । ಯೆಂದು । ಶ್ರೀ ಕೃಷ್ಣನಾದ ಅಪ್ರತ್ಯಕ್ಷ್ಣಾ ।
ತಾ ಕಾಂತನ ಕಾಣದೆ ಹಾ ಹರೆ ।ಯೆಂದು। ಶೋಕಿಸಿದಳು ಕಡುನೊಂದು
॥ ೧೭ ॥
ಹೇ ನಂದಜಾತ ಬಳಲಿದ । ದ । ಯಾನಿಧೆ ಮೊಗದೋರು ಮುಂದೆ ।
ಅನಂತ ಅಪರಾಧಿ ನಾನು ಮು । ರಾರೆ । ದೀನವತ್ಸಲ ಸುರಧೇನು
॥ ೧೮ ॥
ಈ ಪರಿ ಬಳಲಿ ಬಾಹವಳ । ಕಂಡು । ಗೋಪೇರು ಕೇಳಿದರವಳ ।
ಗೋಪತಿ ನಂದಜನೆಲ್ಲಿಹನೇ ।ಈಗ। ನೀ ಪರಮಾಪ್ತಳಿನ್ನವಗೆ ॥ ೧೯ ।
ಮಾನಿನಿ ಹೇಳಿದಳಾಗೆ । ತನ್ನ । ಮಾನಾಪಮಾನವರಿಗೆ ।
ಆ ನಾರೇರಾಶ್ಚರ್ಯ ಬಟ್ಟು ಹರೆ । ಯೆಂದು । ನೀ ನಮ್ಮ ಕೂಡಿವೆ
ಯೆಂದು ॥ ೨೦ ॥
ಪತಿಯುನರಸಿ ಬಳಲಿದರು । ತಾಗಾ । ಪತಿಯಡಗಿದ ಬಳಿಕವರು ।
ತುತಿಸಿದರ್ಕವಿಯೂಥಪತಿರತಿ।ಪತಿ।ಪಿತಾಗತಿಮತಿತತಿದಾತನೆಂದು ॥೨೧॥
ತಿರುತಿರುಗುತ ನಿಶೆಯುಲ್ಲಿ । ಶ್ರೀ । ಹರಿಯು ಮನಸ್ಕೆಯರಲ್ಲಿ ।
ಹರಿಗುಣ ಪೊಗಳಿ ಸಿರಿಕಾಳಿಂದಿ ಮಳ । ಲಲ್ಲಿ । ಸಿರಿಕೃಷ್ಣಭಾವುಕೆರಲ್ಲಿ
॥ ೨೨ ॥

ನೆರೆಕೊಂಡು ಕುಳಿತಾಲಾಪಿಸುತ । ಗಾತ್ರ । ಸರಸೋಕ್ತಿವ್ರಾತಸಂಗೀತ ।
ಪರಸನ್ನ ವೆಂಕಟನ ಪರಸನ್ನೀ । ಕರಿಸಿದರ್ । ಪರಸನ್ನ ಮುಖಿಯರು
ಸತತ ॥ ೨೩ ॥

ಶಬ್ದಾರ್ಥ:— ಇರುಳೆ=ರಾತ್ರಿಯಲ್ಲಿ. ಮರಳೆ=ತಿರುಗಿಹೋಗಲು. ಪ್ರೇಷ್ಠಾನು ಪ್ರೇಷ್ಟರು=ಪ್ರಿಯನನ್ನು ಹಿಂಬಾಲಿಸಿದ ಪ್ರೇಮಕಾಮಿನಿಯರು. ಬಟ್ಟೆ=ದಾರಿ. ತ್ವರಯಾ=ಬೇಗದಿಂದ ಪಿಪ್ಪಲ=ಅರಳೀಗಿಡ. ನ್ಯಗ್ರೋಧ=ಆಲದಮರ. ಬದರಿ=ಬಾರೀಗಿಡ. ನೀಪ=ಗಿಡ. ಔದುಂಬರ= ಅತ್ತಿಮರ. ಹದರಿ=ಪಾಟಲಿವೃಕ್ಷ (ಪಾದರಿ ಗಿಡ) ಕುರುವಕ=ಗೊರಟಿಗಿ ಮರ. ಕಿಂಶುಕ=ಕೆಂಪು ಹೂವಾಗುವ ಒಂದು ಗಿಡ. ಮುತ್ತಲಮರ. ಬಕ್ಕೆ=ಹಲಸು. ಕೋವಿದಾರ=ಮದ್ದುಗಣಿಕಿಯ ಗಿಡ ಪುನ್ನಾಗ=ಜಾಜೀಕಾಯಿ ಗಿಡ. ನಾಗ=ಲವಂಗದ ಗಿಡ. ವೃಂದ=ಸಮೂಹ. ಕುಂದ=ಕೋಲ ಮಲ್ಲಿಗೆಯ ಕಂಟಿ. ಜಾತಿ=ಜಾಜಿಮಲ್ಲಿಗೆ. ದಿಗಿಲು=ಗಾಬರಿ. ರತಿ=ಪ್ರೇಮ. ಹೆಡಕು=ಹೆಗಲು. ಇಳೆ=ಭೂಮಿ. ಸುಯಿಲಡಿ ಇಡುತ=ಬಿಸುಸುಯ್ಯುತ ಹೆಜ್ಜೆಯನಿಕ್ಕುತ್ತ. ರಜ=ಧೂಳಿ. ಅನೋಘ=ದೊರಕಲಶಕ್ಯ. ಕೆಳದಿ=ಗೆಳತಿ. ಜಗತಿ=ಗಿಡಕ್ಕೆ ಕಟ್ಟಿದಕಟ್ಟೆ. ಬಾಹವಳ=ಬರುತ್ತಿ ರುವವಳ. ತಾರಾಪತಿ=ಚಂದ್ರ. ಯೂಥ=ಸಮೂಹ. ರತಿಪತಿಪಿತ=ಕಾಮನ ತಂದೆ (ಕೃಷ್ಣ) ತತಿ= ಸಮೂಹ. ನಿಶಾ=ರಾತ್ರಿ. ಮನಸ್ಕೆಯರು=ಮನವುಳ್ಳವರು. ಆಲಾಪಿಸುತ=ಅಳುತ್ತ.

ವಿ. ಸ. ಶ್ರೀಹರಿಯಶ ಸ್ಸುಜಪಾರಿಜಾತ=ಕೃಷ್ಣನ ಕೀರ್ತಿಯ ಮಾಲಿಯಂತಿರುವ ಪಾರಿ ಜಾತ ಪುಷ್ಪವು. ನೆರೆಗೊಂಡು……ಸಂಗೀತ=ಎಲ್ಲರೂ ಒಂದೆಡೆಗೆ ಕೂಡಿ ದೇಹವು ಸರಸವಾಗುವಂಥ ಮಾತುಗಳಿಂದೊಡಗೂಡಿದ ಸಂಗೀತವನ್ನು ಆಲಾಪಿಸುತ್ತಿದ್ದರು. ಸಾಂಗತ್ಯಪ್ರಭೇದವು ೪೫೯. ನುಡಿಗಳು.

---

೪೦

## ॥ ಶ್ರೀ ಗೋಪೀಗೀತಾ ಪ್ರಾರಂಭ ॥

ಜಯ ವ್ರಜಕ್ಕೆ ನೀ ಜನ್ಮಿಸಧಿಕವು । ಶ್ರಿಯಳ ವಾಸವು ಶಾಶ್ವತಿಲ್ಲಿಯು ।
ಪ್ರಿಯಗೆ ಪ್ರಾಣವಾರ್ಪಿಸಿ ನೋಡುವಾ । ಪ್ರಿಯೆರ ದೃಷ್ಟಿಗೆ
ಪ್ರಾಪ್ತಿಯಾಗದೆ ॥ ೧ ॥

ಸ್ವಜನ ವಿಸ್ಮಯಾಸ್ಮಿತದಲಳಿದೆಯೊ । ವ್ರಜದ ದುಃಖವನೊದ್ದ ವೀರನೆ
ಭಜಿಸು ಕಿಂಕರೇರ್ಬಾಸಖಾ ಹರೇ । ಬುಜಸಮಾಸ್ಯವಾ ಅಕ್ಷಿಗೆ
ತೋರ್ವನೆ ॥ ೨ ॥

ಶರತ ಕಾಲದ ಸ್ವಚ್ಛ ಗರ್ಭದಾ । ಸಿರಿಗೆ ಪೋಲುವಾಸ್ಯೇಕ್ಷೆಯೊಪ್ಪುವ ।
ಸುರತ ಸ್ವಾಮಿ ನೀಂ ಶುಲ್ಕದಾಸೆರಂ । ವರದ ಕಾಯದೆ ವಿಧಿಯು
ದಾವುದೈ ॥ ೩ ॥

ವಿಷದ ನೀರ್ದೊರೆ ವ್ಯಾಳರಾಕ್ಷರಿಂ । ವಿಷಮುಗಾಳಿ ಮಳೆ ವೈದ್ಯುತಾಗ್ನಿಯಿಂ
ವೃಷಭ ಮುಖ್ಯರಿಂ ವಿಶ್ವದುಃಖದಿಂ । ವೃಷಭ ನಮ್ಮನು ರಕ್ಷಿಸಿದೆಯೊ
ನೀ ॥ ೪ ॥

ಅಖಿಲಜೀವಕಾಂತರ್ನಿಯಾಮಕ । ಗೋಕುಲರಕ್ಷಕಾರ್ಗೆಂತೆ ಬಾಲಕಾ।
ವಿಖನಸಾರ್ಥಿತಾ ಸರ್ವಗೋಪಿಕಾ । ಸಖ ನೀ ಪುಟ್ಟಿದೆ ಸಾತ್ವವಂಶದಿ
॥ ೫ ॥

ವರವರಿಷ್ಣನೆ ವಾರ್ಷ್ಣಿಕಾಂತನೆ । ಶರಣ ಹೊಕ್ಕರಾ ಸಂಸೃತಿಹರಾ ।
ನೆರೆಕರಾಬ್ಜವಾನಿಟ್ಟು ಶೀರ್ಷವಾ । ದರಿಸು ಶ್ರೀಕರಾ ಧರಿಸಿದಾಕರಾ
॥ ೬ ॥

ಪ್ರಣತ ಪ್ರಾಣಿಗಳ ಪಾಪಕರ್ಷಕಾ । ವಿನಬಳಿಲಿಪ್ಪ ವೈಷ್ಣವಾರ್ಚಿತಾ ।
ಫಣಿಯ ಪಡೆಲಿಹ ಪಾದಪದ್ಮವಾ । ಸ್ತನಕೆ ಜೋಂದಿಸೈ ತಾಪವಾರಿಸೈ
॥ ೭ ॥

ಬುಧರ ಮೆಚ್ಚಿನಾ ಬುದ್ಧಿಕಾರಣಾ । ಮಧುರ ಮಾತಿನಾಂಭೋಜನೇತ್ರನೆ।
ತ್ವದೀಯ ಅಜ್ಞೆಯ ತಪ್ಪದಿಪ್ಪುವ । ಗ್ರ್ಹಧರಸೋಮುವ ಊಡು
ವೀರನೆ ॥ ೮ ॥

ನಿನ ಕಥಾಮೃತವು ನೀಚ ಜೀವನಂ । ಮುಸಿಗಳರ್ಥವು ಮತ್ತೆ ಅಘಹರಂ।
ಮನನ ಭವ್ಯವು ಮಹಾಭಾಗ್ಯವು। ನೆನೆವ ಭಕ್ತರು ನಿತ್ಯದಾತರು ॥ ೯ ॥

ಪ್ರಿಯ ನಿನ್ನಾಸವು ಪ್ರೇಮನೋಟವು । ದಯೆಯ ಕ್ರೀಡೆಯು ಧ್ಯಾನ
ಶೋಭನವು ।
ನಯರಹಸ್ಯವು ನಮ್ಮ ಮನವು । ಬೆಯಿಸಿ ನೋಯಿಸುವ ಬುದ್ಧಿಕೈತವ
॥ ೧೦ ॥

ವ್ರಜವ ಬಿಟ್ಟು ಆವನ್ನು ಮೇಸುವಾ ೦ । ಬುಧನ ಹೋಲುವಾ ಅಂಘ್ರಿ
ಗೊತ್ತುವ ।
ರಜತೃಣಾಶ್ಮವಾಲೋಚಿಸಿ ಮನವು । ಭಜಿಸದ್ವೆ ಸುಖ ಭೂಪತೆ
ಸಖಾ ॥ ೧೧॥
ವನವ ಧೂಳಿಯಿಂದೊಪ್ಪುವಳಕದಿಂ । ವನಜವಕ್ತ್ರವ ವೀಕ್ಷಿಸಿ
ಮನವು ।
ನೆನೆಸಿ ಇಚ್ಛಿಪೆವು ನಿನ್ನ ರೂಪವ । ಇನನ ಅಸ್ತದಿ ವೀರ ನಿತ್ಯದಿ ॥ ೧೨ ॥
ಭಕುತರಿಚ್ಛಿಪ ಅಜ್ಜೇಜನರ್ಚಿಪಾ । ಪೃಥಿವಿಭೂಷಿಪಾಪತ್ತುವಾರಿಪಾ ।
ಸುಖಕೆ ಶ್ರೀಸ್ಮವಾ ಸತ್ಪದಾಬ್ಜವಾ । ಸುಕುಚದಲ್ಲಿಡ್ವೆ ಸುವ್ಯಥೇ ಸಡ್ವೈ।
॥ ೧೩ ॥
ಸುರತ ಹುಟ್ಟುವಾ ಶೋಕವಟ್ಟುವಾ। ಸ್ವರಿಪ ವಂಶವ ಸಂಧಿಸೊಪ್ಪುವಾ।
ನರರ ರಾಗವನಟ್ಟಿ ಮರೆಸುವಾ । ಅರಸ ನಿನ್ನಧರಾಂಕಿತಾ ಸುಧಾ
॥ ೧೪ ॥
ಹಗಲ ಚರಿಸುವಿ ಹೋಗಿಯಾಟವಿ । ಯುಗಕೆ ವೆಗ್ಗಳವು ಒಂದು
ತೃಟಿಯದು ।
ಮೊಗದ ಸಿರಿಗುರುಳ್ಮೆಚ್ಚಿನೋಡಲು । ಮುಗುಳೆ ಜಡದೊಳು ಮೊಹಿಪೆ
ವೀಗಳು ॥ ೧೫ ॥
ಎಳೆಯುರಿನಿಯರ ಇಷ್ಟರಾಪ್ತರಾ । ಬಲನ ಮೀರುತ ಬಂದೆವಚ್ಯುತಾ ।
ಲಲಿತಗೀತದಾಲಾಪಮೋಹದಾ । ಬಲೆರ ನೈಶಕೆ ಬಿಟ್ಟ ಕುಹಕಾ ॥ ೧೬ ॥
ಮುಗುಳನಗೆಮೊಗವು ಮೋಹ ನೋಟವು । ಮುಗುಳಗಣೆಮನ
ಮೊಟುವಾ ಘನಾ ॥
ಮಿಗಿಲು ನಿಮ್ಮೆದೆ ಮಾಟ ಕಂಡೆದೆ । ಬಿಗಿದು ಅಪ್ಪುವೆಂಬೆಶೆವ
ಮೋಹವು ॥ ೧೭ ॥
ಆಕಳಕಾವರಾ ಮಂಗಳಾಹರಾ । ಪ್ರಕಟ ನಿನ್ನದು ಪಾಪಪ್ರೋಪುದು ।
ಸ್ವಕಿಯರಾರ್ತಹಾ ಸರ್ವರೋಗಹಾ । ನಿಖಿಳರಾಶೆಯೂ ನೀ ಪೂರೈ
ಸಯ್ಯಾ ॥ ೧೮ ॥

ಪ್ರಸನ್ನವೆಂಕಟಾ ಪಶುಪ್ರಪಾಲಕಾ । ಅಸಿಯರ್ಗೀತವಾ ಆಂತು ಮಾಧವಾ ।
ಪ್ರಸನ್ನವಾಗುವಾಪತ್ತು ಹರಿಸುವಾ । ಶಶಿಮುಖಿಯರೊಳು ಸ್ನೇಹ ತಪ್ಪುರಾ ॥ ೧೯ ॥

ಇತಿ ಗೋಪ್ಯಃ ಪ್ರಗಾಯಂತ್ಯಃ ಪ್ರಲಪಂತ್ಯಶ್ಚಿತ್ರಧಾ ।
ರುರುದುಃ ಸುಸ್ವರನ್ ರಾಜನ್ ಕೃಷ್ಣದರ್ಶನ ಲಾಲಸಾಃ ॥೬೦॥
ತಾಸಾಮಾವಿರಭೂಚ್ಛೌರಿಃ ಸ್ಮಯಮಾನ ಮುಖಾಂಬುಜಃ ।
ಪೀತಾಂಬರಧರಸ್ರಗ್ವೀ ಸಾಕ್ಷಾನ್ಮನ್ಮಥ ಮನ್ಮಥಃ ॥೨೧॥

ಶಬ್ದಾರ್ಥ :— ಅಖಿಲ=ಬ್ರಹ್ಮ. ಸಂಸೃತಿ=ಸಂಸಾರ. ವಾತಿನ=ಮಾತಿನ. ಊಡು=ಉಣಿಸು. ಕೈತವ=ಮೋಸ. ಇನ=ಸೂರ್ಯ. ವಂಶ=ಕೊಳಲು. ವೆಗ್ಗಳ=ಹೆಚ್ಚು. ಅಸಿಯರು=ಸುಂದರಿಯರು. ಕಾಮದಾವೃತ್ತವು. ನುಡಿಗಳು ೪೫.

---

೪೧

ಸಾವೇರಿರಾಗ. — ಚೌರ್ಣಿಕಾವೃತ್ತ.

ಈ ಪರಿ ಗೋಪಿಚಯಮೂಪರಲಾಪಿಸೆ ತಾಪಿಸೆ ।
ಶ್ರೀಪತಿ ಭೂಪತಿ ಗೋಪತಿ ತಾ ಪರಾತ್ಪರನೈಸೆ ॥
ಆಪದ್ಧಾರಕ ವ್ಯಾಪಕ ರೂಪಕ ತಾ ಪುನರಪ್ಯುದಿಸೆ ।
ಭಾಪತಿಮಂಡಪ್ರದೀಪಕ ಗೋಪಿ ಸಮೀಪಕೆ ಬರೆ ಥಳಥಳಿಸೆ ॥ ೧ ॥
ದಿನಮಣಿ ಗಣಮಣಿಮೌಳಿ ಮಕರಕುಂಡಲಮಂಡಿತ ಗಂಡಾ ।
ವನಜನಯನ ತಣ್ಣಿದಿರನಂತಿರುವ ತುಂಡಾ ॥
ಘನನೀಲನಿಭತನು ಕರಿಕರಾಭದೋರ್ದಂಡಾ ।
ಮನೋಜನ ಜನಕಾ ಸಿರಿವನಿತಾನನಸನ್ನಿನಸಿರಜಚಂಡಾ ॥ ೨ ॥
ಮಿನುಗುವೆಳೆನಗೆ ಮೋಹನಭ್ರೂ ನಟನವಿಲಾಸನ ಕಾಂಡಾ ।
ವನಸ್ರಗ್ವೈಜಯಂತಿಧರ ಘನಕೌಸ್ತುಭಕೇಯೂರ ಚಿರರುಚಿರಾಂಬರೋದ್ದಂಡಾ ॥

ಕ್ವಣತ್ ಕಿಂಕಿಣಿಕಂಕಣದಾಮ ಸುನೂಪುರಮಂಡನಮಂಡಿತ ಗಂಡುಗಲಿ
ಪುಂಡರ ಹಿಂಡಿನ ಗಂಡಾ ।
ಎನುತಲಿ ವನಿತೇರು ಪ್ರಸನ್ವೆಂಕಟನ ಕಣ್ಮನದಣಿಯೆ ಕಂಡರು ಥಂಡ
ಥಂಡ ॥ ೩ ॥

ಶಬ್ದಾರ್ಥ:— ಚನೂ=ಸೈನ್ಯ. ಪರಲಾಪಿಸೆ=ದುಃಖಬಡಲು. ಐಸೆ=ಚನ್ನಾಗಿ. ಭಾಪತಿ ವಂಶ=ಚಂದ್ರವಂಶ. ಮಕರಕುಂಡಲ=ಮೀನಿನಾಕಾರದ ಕಿವಿಯ ಆಭರಣ. ಗಂಡ=ಗಲ್ಲ. ಶಶ್ವದಿಂ= ಚಂದ್ರ. ತುಂಡ=ಮೋರೆ. ಘನ=ಮೋಡ. ನಿಭ=ಸದೃಶ. ಕರಿಕರಾಭ=ಆನೆಸೊಂಡಿಲವಂತಿರುವ. ದೋರ್ದಂಡ=ಭುಜದಂಡ. ಮಿನುಗು=ಹೊಳೆ. ಭ್ರೂ=ಹುಬ್ಬು. ಶೌಂಡ=ಶ್ರೇಷ್ಠ. ಸ್ರಕ್=ಮಾಲೆ. ಕೇಯೂರ=ಭುಜಕೀರೀಟ. ಕಿಂಕಿಣಿ=ಗೆಜ್ಜೆ. ದಾಮ=ಉಡುದಾರ. ಮಂಡನ=ಆಭರಣ.

ವಿ. ಸಂ:— ಸಿರಿವನಿತಾನನ·········ಚಂಡಾ=ಲಕ್ಷ್ಮಿಯ ಮುಖವೆಂಬ ಹೊಸಕಮಲಕ್ಕೆ ಸೂರ್ಯನೋಪಾದಿಯಲ್ಲಿದ್ದವ. ನುಡಿಗಳು ೪೩೩.

---

೪೨

ಕೇದಾರರಾಗ — ಅಟ್ಟತಾಳ.

ತೋರಿದಾ ತನ್ನ ತೋರಿದಾ । ತನ್ನ ಸಾರಿದ ನಾರೇರ ಮೋರೆ ಇದುರಿನಲ್ಲಿ
॥ ಪಲ್ಲ ॥
ಶ್ರೀಕೃಷ್ಣ ಸಂದುರಶನದಿ ಗೋಪಿಯರು ಅ । ನೇಕಪ್ರಳಾಪಿಸಿ ರೋದಿಸುತಿ
ಹರು ।
ಏಕಸುಸ್ವರದಿ ಪಾಡುವ ನಿಷ್ಠೆಯ ನೋಡಿ । ತಾ ಕರುಣಾಂಬುಧಿ ಉದಯ
ಮಾಡಿ ॥ ೧ ॥
ಮಂದಸ್ಮಿತಾನನಮಕರಕುಂಡಲದಿ । ಕಂದರ್ಪಚಂದಿರಕೋಟಿಗಳ ತೆರದಿ ।
ಸೌಂದರ್ಯಸಾರಬಲೇರು ಮನೋಹರ । ಕುಂದದ ಪಿತಾಂಬರವನಸ್ರ
ಗ್ಧರಾ ॥ ೨ ॥
ಪ್ರಸನ್ನವದನ ಪ್ರಸನ್ನಾಲಯಪೂರ್ಣ । ಪ್ರಸನ್ನಭೂಷಣ ಪ್ರಸನ್ನಮಯ
ಲೋಚನ ।

ಪ್ರಸನ್ನಚರಿತ್ರ ಪ್ರಸನ್ನಾಬ್ಜಗಾತ್ರ । ಪ್ರಸನ್ವೆಂಕಟಕೃಷ್ಣ ಪ್ರಸನ್ನವರಿಷ್ಠಾ ॥ ೩ ॥

ಶಬ್ದಾರ್ಥ:— ಚಂದಿರ=ಚಂದ್ರ. ವನಸ್ರಕ್=ವನಮಾಲಾ. ಅಬ್ದ=ಮೋಡ. ವರಿಷ್ಠಾ=ಹೆಚ್ಚಿನವ. ೪೮೬ ನುಡಿಗಳು. ಸಾಂಗತ್ಯದಂತಹದು.

---

೪೩

ರಾಗಕೇದಾರಗೌಳ — ಅಟ್ಟತಾಳ.

ನೆರೆದರು ಹರಿಯ ಗೆಳತಿಯರು । ಸ್ಮರನ ಶರದಟ್ಟುಳಿಗೆ ನೊಂದ ಸುಂದರಿಯರು ॥ ಪಲ್ಲ ॥

ಮಂಗಳಮೂರ್ತಿಯ ಕಂಡು ಗೊಲ್ಲ । ವೆಂಗಳೆಯರ ಹಿಂಡು ಹಿಂಡು ।
ಕಂಗಳ ಹಬ್ಬವನುಂಡು ಅಂತ । ರಂಗರಸ ಬಂದನೆಂದುಕೊಂಡು ॥ ೧ ॥

ಉದರುವ ನಯನಾಶ್ರುಗಳಿಂ । ಗದ್ಗದ ವಾಕ್ಯದ ಬಾಯಿಗಳಿಂ ।
ಯದುವರನಂಘ್ರಿಗೆರಗಿದರು ವಿಧು । ವದನೆಯರ್ಶೋಕಹರುಷಪೂರ್ಣರು ॥ ೨ ॥

ಗತಪ್ರಾಣಾಗತರಂತೆ ಸುವಿ । ರತರಿಗೆ ಪದದೊರೆದಂತೆ ।
ಅತಿದಾರಿದ್ರ್ಯರಿಗಾಗ ಶ್ರೀ । ಪತಿಪ್ರಸನ್ವೆಂಕಟನಿಧಿಬರಲಾಗೆ ॥ ೩ ॥

ಶಬ್ದಾರ್ಥ:— ಅಟ್ಟುಳಿ=ಉಪದ್ರವ. ಅಂತರಂಗರಸ=ಅಂತರಂಗದಅರಸ. ವಿಧು=ಚಂದ್ರ ಸಾಂಗತ್ಯದಂತಹದು. ೪೮೯ ನುಡಿಗಳು.

---

೪೪

ಕೇದಾರಗೌಳರಾಗ — ಜಂಪೆ ತಾಳ.

ಆ ಸಖಿಯರ ಸುಖಕೆ ಸರಿಯುಂಟೆ । ಮಾಸಖಪೂರ್ಣಶಶಾಂಕಾ ।
ಶ್ರೀ ಸುರರಿಗೆ ಸುಧೆಕೈಸೇರಿದ ಪರಿ । ಲೇಸಾಯಿತು ಬೆಳತನಕಾ ॥ ಪಲ್ಲ॥
ಶ್ರೀ ಶೌರಿಯ ಪಾಣೀಸರಸಿಜಗಳ । ಬಾ ಸಖ ಎನ್ನುತ ಒಬ್ಬಳ್ಹಿಡಿದಳು।

ಪ್ರೋಷಿತ ಚಂದನದಾ ಸರಳ್ತೋಳ್ಗಳ । ಬೀಸಿ ಬಿಗಿದಪ್ಪಿದಳೊಬ್ಬಳು ॥
ಶ್ರೀಶನ ತಾಂಬೂಲಕಾಸತಿ ಕೈಯೊಡ್ಡಿ । ಹಾಸದಿ ಮೆದ್ದಳೊಬ್ಬಳು ।
ಈತನ ಪದಪದ್ಮ ಲೇಸಾಗಿ ಓರ್ವಳು । ತಾ ಸ್ತನವಲಿ ಧರಿಸಿದಳು
॥ ೧ ॥

ಭ್ರುಕುಟಿಗಳನು ಗಂಟಿಕ್ಕಿ ಸ್ನೇಹನೋಟದಿ । ಮುಖದಿರುಹಿಪಳೌಡುಗಚ್ಚಿ ।
ಸಖನಾಸ್ಯವ ಎವೆಯಿಕ್ಕದೋರ್ವಳು ನೋಡಿ । ಸುಖಿಸಿದಳ್ ಕಣ್ಮನ
ಮೆಚ್ಚಿ ।
ನಿಖಿಲಾತ್ಮನ ಚಲುವಿಕೆಯನು ಧ್ಯಾನಿಸಿ । ಸಖಿಯಳಿದ್ದಳು ಅಂತಕ್ಷುಚ್ಚಿ ।
ವಿಕಸಿತಮುಖಿ ನಾಸಿಕತುದಿಯಲಿ ಪ್ರಾಣ । ಸಖನಿಟ್ಟರೆ ಕಣ್ಣು ಮುಚ್ಚಿ
॥ ೨ ॥

ಸಂಸೃತಿ ಮೋಕ್ಷದ ಸಂಶಯಿಲ್ಲದ ಪರಮ । ಹಂಸರ ಸ್ಥಿತಿಯಂತವರು ।
ಕಂಸಾರಿಯ ರೂಪಾಂಶವನ್ನೆ ನೆನೆ । ದುಂ ಸಂತತ ಪರವಶರು ॥
ಹಂಸವಾಹನ ಶೀತಾಂಶುಧರಮುರೋ । ತ್ತಂಸಾರ್ಚಿತನರಸಿಯರು ।
ಹಂಸಗಾಮಿನಿಯರು ಮೂಂಶಾವೇಶರು । ಧ್ವಂಸಿತವೃಜಿನಶುಚಿಯರು
॥ ೩ ॥

ವನಜಾಕ್ಷನ ಮುಖವನಜಾಮೃತನುಂಡು । ದಣಿಯವು ಅನರಕ್ಷಿಮಧುಪ ।
ವನಜನಾಭನ ನಾಭಿವನಧಿಲಿ ನಲಿದವು । ವನಿತೆಯರಕ್ಷಿಮೀನ ಚಲಿಪ ॥
ಮುನಿಜನದೋಲು ತನುಮನಧನವೊಪ್ಪಿಸಿ । ನೆನೆದರು ಇನಿಯನ ರೂಪ ।
ಸನಕಾದಿವಂದ್ಯನ ಘನಸೌಂದರ್ಯಾಬ್ಧಿಯೋಳ್ । ಮುಣುಗಿಸಿಬಿಟ್ಟರು
ಹೃತ್ತಾಪ ॥ ೪ ॥

ವಿಜ್ಞಾನೋದಯ ಸುಗ್ಗಿಯು ಯೋಗಿಜ । ನಗಾರ್ಹ್ಯಗಿರೆ ಮನೋಹರ್ಷಾ ।
ವೆಗ್ಗಳಿಸಿತು ಶ್ರೀಯುಜ್ಞೇಶ್ವರಪದ । ಸ್ವರ್ಗದ ಲಾಭೋತ್ಕರ್ಷಾ ॥
ಒಗ್ಗೂಡಿದ ಸ್ತ್ರೀವರ್ಗಕೆ ತೋರ್ವಪ । ವರ್ಗವು ಈ ಪರಿತೋಷ ।
ಸ್ವರ್ಗಿಗರಿವರು ಭಕ್ತಾಗ್ರೇರು ಗೋಪೇರು । ನಿರ್ಗತಶೋಕೇರು ಸಹಸಾ
॥ ೫ ॥

ಕುಂದಮಂದಾರರವಿಂದವ ಹೊಂದಿಡ । ಮಂದಾನಿಲ ಪರಿಮಳವು ।
ಮಾಂದ್ಯಸುಶೈತ್ಯವು ಅಂದು ವಿರಹಿಗಳಿ । ನಂದವ ವೃದ್ಧಿಗೆ ಗೆಲವು ॥
ಮಂದಗಮನೆ ಕಾಳಿಂದಿಯು ಕೂಲದ । ಸುಂದರಪುಳಿನಸ್ಥಳವು ।
ಅಂದೊಪ್ಪುವ ಶಾರದೇಂದುಬೆಳಗಿನಲಿ । ನಂದಜನಟಣೆಗೆ ನಲಿವು ॥೬॥
ಚಿರ ಝೇಂಕರಿಪ ಷಟ್ಚರಣಮಂಜುಳಘೋಷ । ಹರಿಣಾಕ್ಷೆರ ಕಿವಿಗಳಿಗೆ।
ಹರಿಯು ಸಂದರುಶನಸ್ಪರುಶನೋಲ್ಲಾಸದಿ'। ಸ್ಮರಶರದುಪಟಳ ತಳಗೆ ॥
ವರ ಶಾಸ್ತ್ರಾರ್ಥವು ಪರಶ್ರುತಿ ಹೊಂದಿದ । ಪರಿ ಯುವತಿಯರ್ಗೊಂದ
ಲಾಗೆ।
ಪರಕೆ ಪರಾತ್ಪರ ಸಿರಿವರ ಸುಂದರ । ಸರಿವನವನು ತಾ ಬ್ಯಾಗೆ ॥೭॥
ಇಂದೀವರಾಕ್ಷೆರು ಕಂದರ್ಪನಯ್ಯನ । ಮುಂದಕೆಳೆದುಕೊಂಡು ತವಕ್ಕಾ ।
ದ್ವಂದ್ವನಿಬಿಡಕುಚ ಹೊಂದಿವ ಉತ್ತರಿ । ಯಂದೆಗೆದರು ಸಂಭ್ರಮಾ ॥
ಚಂದನ ಕುಂಕುಮ ಗಂಧಕಸ್ತುರಿಪುನ । ಗಿಂದಾತ್ಮವು ಮನೋರಮಾ ।
ಚಂದದಾಸನವಿತ್ತು ಕುಂದರದನೆಯರ । ವೃಂದದ್ವ್ಯಾಪ್ತಿದ ಪರಬ್ರಹ್ಮ
॥ ೮ ॥
ರಮೆಯಾತ್ಮಕವಾದ ಅವ್ಯಕ್ತಕ್ಷೇಮಾಭಯು । ವಿಮಲಾಸನದ ಮುಕುಂದ ।
ಅಮಮ ಗೋಪೇರ ಕುಚಬೆವ ರ್ಹೊಂದಿದ ಗಂಧ । ರಮಣೀಯಾಂಬರ
ಸಾಕೆಂದ ॥
ಭ್ರಮತ್ರಯು ನೀಗಿದ ಸುಮುನಿವರರ ಹೃತ್।ಕಮಲಾಲಯ ಗೋವಿಂದ ।
ಯಮುನೆಯ ಪುಲಿನದಿ ಸುಮೃಗಶಾಬಾಕ್ಷೆರ । ಕಾಮುಕ ಭಕುತಿ
ಬೇಕೆಂದ ॥ ೯ ॥
ಯೋಗೇಶೇಶ್ವರ ಹೀಗಾಶ್ಚರ್ಯದ । ಸಾಗರಲೀಲೆಯ ತೋರ್ದ ।
ಆ ಗೋಪಿಯರಿಗೆ ಪೂಗಣೆಯನ ಗಣಿ । ವೇಗವ ತಾ ಪ್ರೇರಿಸಿದಾ ॥
ಆಗ ಅವರು ತಪಯೋಗಾಲಂಬಿಸೆ । ಶ್ರೀಗೋಪತಿ ನಲುವಿಂದ ।
ಬ್ಯಾಗವರಿಗೆ ಸಂಯೋಗದ ಬಯಕೆಯ । ಶ್ರೀಗೋಪ್ತನು ನಿಯಮಿಸಿದ
॥ ೧೦ ॥
ಭ್ರೂಭ್ರಮಣೇಕ್ಷಣ ಶೋಭಿಪ ನಖಸ್ಪರ್ಶ । ಲೋಭದ ವಚನಗಳಿಂದ ।

ತ್ರಿಭುವನೇಶ್ವರ ತಾ ಬ್ಯಾಗನೆ ರತಿ । ಲೋಭವ ಸುಖವೈದಿಸಿದ ॥
ಸೀಬಿಲ್ಲನಗಣೆಗಿಂಬಾದವು ಫುಲ್ಲ । ನಾಭನ ಬಲು ಒಲುಮೆಂದ ।
ಶ್ರೀಭೃತ ಉಡುಪಗೆ ಭಾಮೆಯುರಿಂದರು । ಸ್ತೋಭ ಪ್ರಣಯಕೋಪ
ದಿಂದ ॥ ೧೧ ॥

ಎಲೆ ವಿಭುವೇ ಒಬ್ಬೊಲಿಸಿದರೊಲಿವನು । ಒಲಿಯನು ಒಬ್ಬೊಲಿಸಿದರೆ ।
ಒಲಿಸದೆ ಒಲಿವನು ಇಳೆಯೊಳು ಯರಡನು।ತಿಳಿಯನು ಕೇಳು ಮುರಾರೆ॥
ತಿಳುಸ್ವೈ ಈ ನಾಲ್ವರೊಳದಾವನು ಘನ । ಎಲೆ ದಯಾನಿಧೆ ಶ್ರೀಹರೆ ।
ಸಲೆ ನಿಮ್ಮಂಘ್ರಿಯುನಳಿನಕೆರಗುವೆವು । ಲಲಿತ ಚರಿತ್ರ ಅಘಾರೆ ॥೧೨॥

ಇಂದುಮುಖಿಯರ್ಹೀಗೆಂದರೆ ನುಡಿದನು । ಮಂದರಧರಸಿರಿನಲ್ಲ ।
ಹೊಂದದ ಬಯಕೆಯ ಮಂದಮತಿಗಳ ಕೂ । ಡಿಂದು ಸೌಹೃದಧರ್ಮ
ವಲ್ಲ ॥
ಒಂದಿಸಿತಾರ್ಥವ ಎಂದು ಇಚ್ಛಿಸದಿಹ । ಮಂದಿಗೊಲಿವೆ ಹುಸಿಯಲ್ಲ ।
ತಂದೆಗೆ ತನ್ನಯ ಕಂದಗಳಲಿ ಸ್ನೇಹ । ಬಂದಂತಿರೆ ಕೈವಲ್ಯ ॥ ೧೩ ॥

ನಿತ್ಯ ಚಿತ್ತದಿ ಸರ್ವಾತ್ಮರಾಮಗೆ ಮನ । ಹತ್ತಿದ್ದ ಧೀರರಿಗೊಲಿವೆ ।
ಪುತ್ರಕಲತ್ರಸನ್ಮಿತ್ರವಿತ್ತಾಧಿಕ । ಮತ್ಪ್ರಿಯ ಹರಿಯೆಂದರ್ಗೊಲಿವೆ ॥
ಮತ್ತೊಂದು ಲಾಭಕೆ ಎತ್ತೆತ್ತೆಳಸದ । ಮುಕ್ತಿಶೋಧಕರಿಂಗೊಲಿವೆ ।
ಭಕ್ತರ ಸುರಭಿ ವಿರಕ್ತರ ಸುರತರು । ಹತ್ತಿಯವರ ಹೊಂದಿರುವೆ ॥೧೪॥

ಹೋದರ್ಥದಲಿ ಧನಾಧಿಪನ ಚಿತ್ತ । ಖೇದವು ಬಳಲಿಸಿದಂತೆ ।
ರೋದಿಸಿ ವನವನ ಶೋಧಿಸಿದಿರಿ ಪರ । ಮಾದರದಲಿ ನೀವಿಂತೆ ॥
ಮೇದಿನಿಲಿ ನಿಮ್ಮ ಋಣಬಾಧೆಯು ಸಾರಿತು । ನಾ ದಾವ ಪರಿ ತಿದ್ದಲ್ಮತ್ತೆ ।
ಐದೆರಿಗೆಂದನು ಮಾಧವ ಮೋಕ್ಷದ । ಹಾದಿಯ ಮಾತುಗಳಂತೆ ॥ ೧೫ ॥

ಹರಿಮುಖನಿಸೃತಶ್ರೋತ್ರರದ ಸುಧಾರಸ । ಕರಣಪುಟಗಳಿಂದ ಸವಿದು ।
ವಿರಹದಿ ಜನಿಸಿದ ಜ್ವರವಡಗಿರೆ ಸುಂ । ದರನಂಗಸಂಗಿಯರ್ಗಂದು ॥
ಪರಮಪುರುಷಹರಿ ಸ್ವರಮಣ ಗೋಪೆರೊಳ್ । ವರರಾಸಕ್ರೀಡೆಗೆ ಬಂದು ।
ಹರಿಣಕುಣಕನೇತ್ರೆರ ಕರೆದನು ಸತ್ । ಸರಸಮಂಡಲದಲಿ ನಿಂದು ॥೧೬॥

ಯೋಗೇಶೇಶ್ವರ ನಾಗಗಮನೆಯರ । ಯೋಗಮಂಡಲದ ಮಧ್ಯದಲಿ ।
ಬೇಗಿಬ್ಬಿಬ್ಬರಿಗಾಗೊಂದು ರೂಪತಾ । ನಾಗೊಪ್ಪಿದ ಸ್ವಸುಖದಲಿ ।
ನಾಗವೇಣಿಯರ ಬಾಹುಗಳಲ್ಲಿ ಬಾಹ್ವಿಟ್ಟು । ಕೈಗಳಿಗಿಂಬು ಕಂಠದಲಿ ।
ಭೋಗಿಸಿದನು ಚನ್ನಾಗಿ ಗುಣತ್ರಯ । ನೀಗಿದಗೊಲಿವಂದದಲಿ ॥೧೭॥

ಸ್ತ್ರೀರತ್ನಂಗಳೊಳಾರಾಜಿತ ನೀಲ । ನೀರದಗಾತ್ರ ಹೈಮಮಣಿ ।
ಹಾರದ ಮಧ್ಯದಿ ಚಾರುನೀಲದಮಣಿ । ತೋರುವ ತೆರದಿ ಗುಣಮಣಿ ॥
ಭೂರಿ ನೂಪುರ ಝಣತ್ಕಾರದ ವಲಯದ । ಪರಿಯರ ಕಂಠಮಣಿ ।
ಮೇರೆಯಿಲ್ಲದ ಸುಖವಾರಿಧಿ ನಂದಕಿ । ಶೋರ ಚಿದ್ಗುಣಗಣದಖಣಿ ॥೧೮॥

ಹೊಳೆವ ಶಂಕುಮಂಡಲ ಮಧ್ಯ ಸ್ಥಾಪಿಸಿ । ಗೆಳತಿಯರನಂ ಹೊಂದಿ ಶೌರಿ ।
ವಲಯಾಕಾರದಿ ನಿಲಸಿದ ಗೋವೆರ । ಬಳಗವನಾಗ ಮುರಾರಿ ॥
ಕೆಳದೆರ ಗಾತ್ರ ಮಂಜುಳ ಮಧುರಸ್ವರ । ಗಳ ಕೇಳಿದನು ಉದಾರಿ ।
ಚಲಿತ ಪದನ್ಯಾಸಗಳ ಪತಣೆಗಳ । ಕಲಿಸಿದನಭಿನಯ ತೋರಿ ॥೧೯॥

ಕಾಮಕ್ರೋಧವ ಗೆದ್ದು ನೇಮದಲಿದ್ದ । ಸೋಮಕುಲಕೆ ದುರ್ಲಭವು ।
ಹೋಮವ ಮಾಡ್ಯಂತ್ಯ ಸೋಮರಸವನುಂಬ । ಸ್ತೋಮಕತ್ಯಂತ ದುರ್ಲ
ಭವು ॥
ಭೂಮಂಡಲ ಸುತ್ತಿ ಹೈಮಪರ್ವತ ದಾನ । ತಾ ಮಾಡಿದರ್ಗೆ ದುರ್ಲಭವು ।
ಶ್ರೀಮಹಾಲಕ್ಷ್ಮಿಯ ಸ್ವಾಮಿ ಶ್ರೀಕೃಷ್ಣನ । ಕಾಮಿನೇರ್ಗೆ ಭಾಗ್ಯ ಸುಲ
ಭವು ॥೨೦॥

ರಂಗನ ಮಂಗಳ ಅಂಘ್ರಿಯುಗಂಗಳ । ಸಂಗತಿಯಂ ಗುರುತಿಟ್ಟು ।
ಹಿಂಗದಪಾಂಗದ ಕಂಗಳ ಸಿಂಗರ । ಅಂಗನೆರಿಂಗಿತವಷ್ಟು ॥
ಅಂಗಜನಂಗೆಲ್ವನಂಗುಣ ಸಂಗೀತ । ಸಂಗಿಸೆ ಹೆಂಗಳೆರಷ್ಟು ।
ಕುಂಗವಿಹಂಗತುರಂಗ ಪ್ರಸನ್ವೆಂಕಟ । ಸಂಗೆಯರ್ಗೀಶುಭವಿಷ್ಟ ॥೨೧॥

ಶಬ್ದಾರ್ಥ:— ಮಾಸಖ=ಲಕ್ಷ್ಮಿಯ ಪ್ರಿಯನು. ಶಶಾಂಕ= ಚಂದ್ರ. ಭ್ರುಕುಟಿ=ಹುಬ್ಬು. ಜಿಡು=ಕಲ್ಲುವಡೆ. ಅಂತಕ್ಕಚ್ಚಿ=ಅಂತಃಕರಣಕ್ಕೆ ಹಚ್ಚಿಕೊಂಡು. ಅರೆ=ಅರ್ಧ. ಶೀತಾಂಶು=ಚಂದ್ರ. ಅಮರೋತ್ತಂಸ=ಅಮರಶ್ರೇಷ್ಠ. ಮಾಶಾವೇಶರು=ಲಕ್ಷ್ಮಿಯ ಆಶಾವೇಶವುಳ್ಳವರು. ವೃಜಿನ=

ಪಾಪ. ಮಧುಪ=ಭೃಂಗ. ಅಪವರ್ಗ=ಮೋಕ್ಷ. ಅಟಣಿ=ತಿರುಗಾಟ. ಉಪಟಿ=ಕಾಟ. ಪೂಗಣೆಯು ಕಾಮ. ಉಡುಪ=ಚಂದ್ರ. ಸುರಭಿ=ಕಾಮಧೇನು. ತಿದ್ದಲಿ=ತೀರಿಸಲಿ. ಐದೆರು=ಸುಮಂಗಲೆಯರು. ನಿಸೃತ=ಹೊರಬಿದ್ದ . ಕಣಕ=ಮರಿ. ಕಿಶೋರ=ಬಾಲ. ಸಾಂಗತ್ಯ ವಿಭೇದವು ನುಡಿಗಳು ೫೧೦.

---

೪೫

**ಸ್ರಗ್ಧರಾವೃತ್ತ.**

ಪಾದನ್ಯಾಸಂಗಳಿಂದಾ ಭುಜಗಳ ಒಳುಪಿಂ ಭ್ರೂವಿಲಾಸಂಗಳಿಂದಾ ।
ಮೋದಸ್ಮಿತೇಕ್ಷ್ಣದಿಂದಾ ಮಣಿವ ನಡುವಿನಿಂ ನರ್ತಿಪಾ ಜವ್ವನೇರು ॥
ದೇದೀಪ್ಯಪ್ಪೊಪ್ರವಾಲ ಕದಪಿಲಿ ಹೊಳೆಯಲ್ ಸೋರ್ಮುಡೀಬಿಟ್ಟಲೇ
ಯಲ್ ।
ಸ್ವೇದಾಸ್ಯಾಳೀಯರಿಂದಾ ಹರಿವಧುತಟಿತವು ಮಿಂಚೆ ಮೇಘಾಂಗದಲ್ಲಿ ॥೧॥

**ವೃತ್ತ ಪಂಚಚಾಮರ, ಮಟ್ಟತಾಳ.**

ಸ್ವರವನೆತ್ತಿ ಪಾಡಿದರ್ ಸುಕಂಡೆಯರ್ಮುದಾನ್ವಿತೇರ್ ।
ಹರಿಸ್ಪರ್ಶೋತ್ಸವಾಗಿರಲ್ ಸುಗಾಯಕೇರ್ಹರಿಪ್ರಿಯರ್ ॥೨॥

ಮುಕುಂದಗಾನಕೇ ಸಮಾ ಸುಕುಂದದಂತಿನಿಯೋರ್ವಳು ।
ಸ್ವಕೌಶಲವ ತೋರ್ದಳು ಸುಸಾಧು ಸಾಧು ಯನ್ನಲು ॥೩॥

ಸ್ವರಂಗಳಾ ಸುಜಾತಿ... ಹರೀಯು ಮೆಚ್ಚಿದಾಕೆಗೆ ।
ಪರಮ್ಮ ಮಾನವಿತ್ತನು ಪರಾತ್ಪರ ಸ್ವಪ್ರೀಯನು ॥ ೪ ॥

ಬಳಲೀದ ...ರಿಯೊಬ್ಬಳ ಅಲಮುರ್ಡಿಯು ಚಲ್ಲಲು ।
ಬಳಿಯುಲಿರಲು ಗದಾಧರನು ಅವಳ್ಗೆ ಸ್ಕಂಧವಿತ್ತನು ॥ ೫ ॥

ಸುಚಂದನೋತ್ಪಲಂಗಳಿಂ ಸುಚಿನ್ಹಿತಾ ಸುಬಾಹುಗಳಿಂ ।
ಚುಂಚುಬಿಸ್ಯಾಘ್ರಾಣಿಸಿದಳು ಶುಚಿವ್ರತೆಯು ಒಬ್ಬಳು ॥ ೬ ॥

ಬೆಮರ್ದು ಶ್ರಾಂತಗೋವಳೇರಮುರ್ದು ಅಪ್ಪಿ ತೋಳ್ಗಳಿಂ ।
ಸುಮೃಷ್ಟ ತಾಂಬುಲಿಚ್ಛಿಸಲ್ ಸುಮಾರನಯ್ಯನೀಡಲು ॥ ೭ ॥

ಕಪೋಲದೊಳ್ ಕಪೋಲವಂ ಸುಪ್ರೀಯಳೊಬ್ಬಳಿಟ್ಟಳು ।
ಗೋಪಾಲ ಕೇಶನೋಷ್ಠದೊಳ್ ನಿಜೋಷ್ಠ ಒಬ್ಬಳಿಟ್ಟಳು ॥ ೮ ॥

ಸುಗಂಧವೆತ್ತ ತಂಬುಲವ ಸ್ವನಾಥನೀಡೆ ಪೆದ್ದಳು ।
ಸುಗೀತವೆತ್ತಿ ಪಾಡಿದಳ್ ಸುನೃತ್ಯ ಒಬ್ಬಳಾಡಿದಳ್ ॥ ೯ ॥
ಝಣತ್ಕರಿಪ ಅಂದುಗೆ ಕಿಣಿಕ್ಕಿಣಿಪ್ಪ ಕಿಂಕಿಣಿ ।
ಮಣಿಯು ಕಾಂಚಿದಾಮದಿಂ ಮಣೀವ ಮಧ್ಯೆಯೊಬ್ಬಳು ॥ ೧೦ ॥
ಕುಣಿದು ದಣಿದು ಒಬ್ಬಳು ಮನೋಜನಯ್ಯನಪ್ಪಲು ।
ಸ್ತನದ್ವಯಂಗಳೊಳ್ಳರೀಯು ಪಾಣಿಯನೊತ್ತಿಕೊಂಡಳು ॥ ೧೧ ॥
ಏಕಾಂತಪ್ರೀಯನಂಸದೊಳು ಸ್ವಕಂಧರೊಬ್ಬಳಿಟ್ಟಳು ।
ಸುಖೀಗಳಗ್ರಣಿಯೊಬ್ಬಳು ಮುಖಂ ಮುಖಕ್ಕೆ ನೀಡಲು ॥ ೧೨ ॥
ಪ್ರಸನ್ನ ಕೃಷ್ಣನಂಗನೇಪ್ರಸನ್ನತೇಯೊಳಿದ್ದನು ।
ಪ್ರಸನ್ನವಾದ ಶುಕಮುನಿ ಪ್ರಸನ್ನವಾಕ್ಯಕೀರ್ತನೆ ॥ ೧೩ ॥
ಪ್ರಸನ್ನ ವೆಂಕಟೇಶನ ಪ್ರಸನ್ನವಾರ್ತೆ ಕೇಳ್ವನು ।
ಪ್ರಸನ್ನಚಿತ್ತ ಭೂಪತಿ ಪ್ರಸನ್ನಭಾಗವತವನು ॥ ೧೪ ॥

ಶಬ್ದಾರ್ಥ:—ಬಳ್ಪಿಂ=ಹೊಳಪಿನಿಂದ. ದೇದೀಪ್ಯ ಅಪ್ಪ=ದೇದೀಪ್ಯವಾಗಿರುವ. ಕದಪು=ಗಲ್ಲ. ಸೋರ್ಮುಡಿ=ಜೋಲ್ಮುಡಿ. ಅಲೆ= ಅಲ್ಲಾಡು. ಸ್ವೇದ=ಬೆವರು. ಆಳಿಯರು=ಗೆಳತಿಯರು. ತಟಕ=ಮಿಂಚು. ಅಂದುಗೆ=ಕಾಲ್ಗಡಗ. ಕಿಂಕಿಣಿ=ಕಿರಿಗೆಜ್ಜೆ. ಪಾಣಿ=ಕೈ. ಕಂಧರ= ಕುತ್ತಿಗೆ. ಮಡಿಗಳು. ೫-೪.

---

೪೬

ರಾಗ ಮೋಹನಕಲ್ಯಾಣಿ, ಜಕ್ಕಣಿತಾಳ.

ರಾಸಕ್ರೀಡೆಯುಲ್ಲಾಸಖರ್ಗೆ । ವಾಸುದೇವನ ।
ಲೇಸಿನಾಟ ಲೇಶ ತೋರ್ದರ್। ತೋಷಿಸೀ ಮನ ॥ ಪಲ್ಲ ॥
ತುರುಬು ಸಡಲಿ ಮೋರೆಯು ಮರೆಯು । ಕುರುಳಿನಬಿಯರು ।
ಕರದ ಕಂಕಣ ನೂಪುರ ಝಣತ್ಕ । ರಿಪ ಅಬಲೇರು ॥ ೧ ॥
ನೆರೆ ಬೆಮರ್ದು ಮೆರೆವ ವದನ । ಕಿರಿಯ ನಗೆಯುರು ।
ಹರಿಣಾಂಕನ್ನ ಭರಿತ ಕಾಂತೆಲಿ । ವರಿಸುತಿದ್ದರು ॥ ೨ ॥
ಮುಡಿಯ ಮಾಲಿಕೆ ಸಡಲಿದುವಕೆ । ಸಿಡಿವ ರಭಸದಿ ।
ಕಡಲಶಯನನೊಡನೆ ಸಮ । ವಿಡಿದುಲ್ಲಾಸದಿ ॥ ೩ ॥

ಬಿಡದೆ ಲಯುವ ಜಡಿದು ನರ್ತಿಸೆ । ಮೃಡಸುರೇಶರಾ ।
ಗಡಣ ತಮ್ಮ ಮಡದಿಯರನು । ಹುಡುಕುತಿದ್ದರು ॥ ೪ ॥

ಕೆಳದಿಯರ ಮಂಜುಳ ಗಾಯನ । ನಳಿನನಯನನಾ ।
ಗಳದ ಸೊಬಗಿನೊಳಗೆ ಮೆರೆವ । ಅಳಿಗಳ ಸ್ವನಾ ॥೫॥

ಲಲಿತದೋರೆ ನಳಿನಸಂಭವೇ । ಶರುಗಳಾದ್ಯರ ।
ಬಳಗ ಮೌನದಲಿ ಕುಳಿತರು । ತಲೆಬಾಗಿಯವರ ॥೬॥

ಹರಿಕರಾಬ್ಜದಿ ಸ್ಪರುಶಿ ಗೋವೇರ । ಕರಿಕರಾಭದಾ ।
ಸರಳ ತೋಳುಗಳೆರಡನಪ್ಪಿದಾ । ಕರುಣರಸದಿಂದಾ ॥ ೭ ॥

ಪರಮ ಪುರುಷ ಪರಮ ಮುಕುತ । ಲರಸ ಸಿರಿವರ ।
ನರವಿಡಂಬನ ಅರುಹಿದಗೋವೆ । ಯರಿಗೆ ಮನೋಹರಾ ॥ ೮ ॥

ಹಸಿತ ವಕ್ತ್ರಲಸತ್ ಸ್ವತಂತ್ರ । ಶಶಿಮುಖಿಯರೊಳು ।
ಅಸಮಕ್ರೀಡಾವಿಲಾಸದಿ ಒಪ್ಪಿದ । ಸ್ವಸುಖಿ ದಯಾಳು ॥ ೯ ॥

ಕಾಮಾರ್ದಿತರಾದ ಕಾಮಿನಿಯರಿಗೆ । ಕಾಮ ಪೂರೈಸಿದಾ ।
ರಾಮೇರಿಗೆ ಆತ್ಮರಾಮ ಸಂಗಿಸಿದ । ಪ್ರೇಮಾಕುಲೇಕ್ಷಣದ ॥ ೧೦ ॥

ಬಿಟ್ಟ ಮುಡಿಗಳ ಕಟ್ಟಲಿಲ್ಲವರು। ಉಟ್ಟಂಬರ ಹೊಂದರು ।
ಇಟ್ಟಡಿ ಕುಚದ ಪಟ್ಟಿಕೆ ಕಾಣರು। ಗಟ್ಟ್ಯಾಗಿ ಬೆರೆತರು ॥ ೧೧ ॥

ಇಟ್ಟಹಾಲಂಕಾರವಸ್ತ್ರ ಮರೆದರು। ತೊಟ್ಟ ಕಂಚುಕಗಳ ।
ಪುಟ್ಟವು ಬಿಟ್ಟರೆ ದಿಟ್ಟಿಯಿಂ ನೋಡರು। ಕೃಷ್ಣಭಾವುಕೆಯರು ॥ ೧೨ ॥

ದೇಹೇಂದ್ರಿಯಪ್ರಾಣಾ ಶ್ರೀಹರಿಗರ್ಪಿಸಿ। ಬಾಹ್ಯಾರ್ಥವಂ ಮರೆದ ।
ಸ್ನೇಹಕ್ಕೆ ಮೆಚ್ಚಿದ ಆ ಹೆಂಗಳೌಘದ। ಸಾಹಸಕೊಪ್ಪಿದ ॥ ೧೩ ॥

ಈ ಸರ್ವವಿಷಯದಾಸೆಸು ಮರೆಪ। ಅಸಂಪ್ರಜ್ಞಾತರಿಗೆ ।
ಈಶನೊಲಿದಂತೆ ಆ ಸತಿಯರನು।ಲ್ಹಾಸದಿ ಕೂಡಿದಾಗೆ ॥ ೧೪ ॥

ಸುರನಾರಿಯರು ಹರಿಯ ಕ್ರೀಡೆಗೆ। ಬೆರೆತು ಸಂಭ್ರಮಿಸಿ ।
ನೆರೆದರ್ ತಮತಮರಸರ। ಸ್ಮರಶರಕೆ ಮೋಹಿಸಿ ॥ ೧೫ ॥

ಮೃಡಸಹಿತನ ನಿಡುಸರಳಿಗಂಜಿ। ಉಡುಪ ತನ್ನಯು ।
ಮಡದಿಯರನು ಹುಡುಕಿ ವೇಗದಿ। ಕೂಡಿದ ನೋಡಿರಯ್ಯಾ ॥ ೧೬ ॥

ಭಾವಕೆ ಮೆಚ್ಚಿದ ಶ್ರೀವತ್ಸಲಾಂಛನಾ। ಗೋಪೇರನಪ್ಪಿದನು ।
ದೇವಿಯರಾನಂದತೀವಿದ ವಾರ್ಧಿಗೆ। ಶ್ರೀವರ ಚಂದ್ರಮನು ॥ ೧೭ ॥

ಗೋಪೇರ ಸಂಖ್ಯೆಗೆ ಶ್ರೀಪತಿ ಸ್ವಕೀಯ। ರೂಪಗಳ ತೋರಿದಾ ।
ಆಪನ್ನರಭೀಷ್ಟೆ ತಾ ಪೂರ್ಣಮಾಡಿದ। ಪ್ರೇಮದಿ ಮುಕುಂದಾ ॥ ೧೮ ॥

ಸತಿಯರೆಲ್ಲರು ರತಿವಿಹಾರದಿ। ಅತುಳಶ್ರಾಂತರಾಗೆ ।
ರತಿಪತಿಪಿತಾಚ್ಯುತ ಹೆಂಗಳ್ಗಳಾ। ಪ್ರತತಿ ಹೊಂದಿ ಆಗೆ ॥ ೧೯ ॥

ಕಮಲಾಕ್ಷಿಯರ ಶ್ರಮೆಯ ಬೆಮರ। ರಮೇಶ ತೆಗೆವರೆ ।
ಅಮರನಾರೇರು ಭ್ರಮಿಸಿ ಲೀಲೆಗ! ಅಮಮಯೆನುತಿರೆ ॥ ೨೦ ॥

ಕಬ್ಬುಬಿಲ್ಲನ ಕೊಬ್ಬು ಮುರಿದಿಹ। ಹಬ್ಬನುಂಡಸಿಯರು: ।
ಹುಬ್ಬೋರೆಗಣ್ಣಿಲಿ ಉಬ್ಬುಬ್ಬಿ ನೋಡಿದ।ರಬ್ಧೀಶನಂಗನೇರು ॥ ೨೧ ॥

ಹೊಳೆವ ಕುಂಡಲ ಉಲಿವ ಕುಂತಳ। ಎಳೆನಗೆ ಕಾಂತಿಯ ।
ಬೆಳಗಿಲೊಪ್ಪುವ ನಲ್ಲನ ನೋಡಿ ಕಂ।ಗಳವು ದಣಿಯನೈ ॥ ೨೨ ॥

ಈಶನ ಸುರತಹಾಸವಿಲೋಕನ।ಕೆ ಸತಿಯರು ಮೆಚ್ಚಿ ।
ಶ್ರೀಶುಭಗುಣವ ತೋಷದಿ ಪಾಡಿದ।ರು ಸುಖಾಂಬುಧಿ ಹೆಚ್ಚಿ ॥ ೨೩ ॥

ತನ್ನಂಗ ಸಂಗದಿ ಖಿನ್ನಾಸ್ಯ ಬಳಲಿದ। ಕನ್ಯೇರ ಕುಚವಲಿ ।
ಖಿನ್ನ ಕುಂಕುಮಗಂಧಾನುಲೇಪಾಂಗವ। ನೋಡಿದ ದಯೆಯಲಿ ॥ ೨೪ ॥

ಪೀನಪಯೋಧರದಾನಾರಿಯರಿಂದ।ಜ್ಞಾನಾನಂದವಾರಿಧಿ ।
ತಾ ನೀರಪೊಕ್ಕ ಹೆಣ್ಣಾನೆಗಳ ಕೂಡಿ ಮ।ದ್ದಾನೆಯಂತೆ ಭರದಿ ॥ ೨೫ ॥

ಕಾಳಿಂದಿ, ಮಧ್ಯದಿ ಕಾಳಾಹಿವೇಣೇರ। ನ್ಯೂಳದಿ ಸ್ನೇಹದಲಿ ।
ಶ್ರೀಲೋಲ ಕ್ರೀಡಿಸೆ ಬಾಲೇರು ರಂಗಂಗೆ। ಮೇಲೆ ನೀರು ಚಲ್ಲಲಿ॥ ೨೬ ॥

ಕೃಷ್ಣ ಮುರಳಿ ಯಥೇಷ್ಟ ನೀರು ಚಲ್ಲೆ। ತುಷ್ಟಿಸಿ ಸಖಿಯರು ।
ಸೃಷ್ಟೇಶನ ಮೇಲೆ ವಟ್ಟಿದರು ಜಲ।ದೊಟ್ಟಲು ಸುಗುಣೇರು ॥ ೨೭ ॥

ರಂಗನ ಆಟಕೆ ಅಂಗನೇನೋರ್ಟಕೆ। ಬೃಂಗಗಳಾಪಾತಕೆ ।
ಜಂಗುಳಿಗಟ್ಟಿ ಸುರಾಂಗನೇರ್ಸುರರು। ಸಂಗೀತ ಹೇಳಲಿಕ್ಕೆ ॥ ೨೮ ॥

ವೈಮಾನಿಕರೆಲ್ಲ ಪ್ರೇಮಾಬ್ಧಿಲೋಲಾಡಿ। ಪೂಮಳೆ ಗರೆಯುಲಿ ।
ರಾಮೆಯರೋಳಾತ್ಮರಾಮ ಕ್ರೀಡಿಸಿದ। ಸೋಮಾಂಶುಕಾಶದಲಿ ॥ ೨೯ ॥

ಆಮೋದಮಯವಾದಾ ಮಂದಮಾರುತ। ವಾಮದೃಶೇರಾವೃತಾ ।
ರಾಮಾನುಜ ನೋಡಿ ಯಮುನೆ ಕೂಲ ನಿಃ।ಸೀಮವೆಂದವನೀ ತಾ॥೩೦॥

ಸರ್ವಧರ್ಮಜ್ಞನು ಸರ್ವಗೋಪ್ತವ್ಯಾ।ಪ್ತ ಸರ್ವಸ್ವತಂತ್ರ ತೃಪ್ತಾ ।
ಸರ್ವವಿಶ್ವೇತರ ಸರ್ವಸುರೇಶ್ವರ। ಸರ್ವಾರ್ಥದಾತಾ ನಾಥಾ ॥ ೩೧ ॥

ಯಾವ ಮುಕುಂದನಂಘ್ರಿವಾರಿಜರಸ। ಸೇವಿಪ ಯೋಗಿಗಳ ।
ಭಾವತೃಪ್ತಿಯು ಕಂಡು ವಾಸುದೇವಗೆ। ಈ ವಿಷಯಾಸೆಗಳ ॥ ೩೨ ॥

ಯಾವ ಹೇಳುವವನೇವೆ ತಮೋಯೋಗ್ಯ। ಕೊವಿದರೆ ಬಲ್ಲರು ।
ಅವನ ಕ್ರೀಡಾಗುಣಾವಿಶಿಷ್ಟ ಲೀಲೆ।ಗೆ ವಿಶ್ರಾಂತಿಗಾಣರು ॥ ೩೩ ॥

ನಮೊ ನಮೊ ನಮೊ ನಾರದಸಂಗೆಯಾ।ನಮೊ ನಮೊ ಸ್ವಪ್ರಿಯಾ ।
ನಮೊ ನಮೊ ನಮೊ ನಂತ ಸದ್ಗುಣಾತ್ಮಾ। ನಮೊ ನಮೊಂತರಾತ್ಮಾ ॥ ೩೪ ॥

ವಿಷ್ಣುರಾತಂಗೆ ವಿಶಿಷ್ಟ ಕೃಷ್ಣಲೀಲ। ಶಿಷ್ಟ ಬ್ರಹ್ಮರತನು ।
ಸ್ಪಷ್ಟಾಗಿ ಹೇಳಲು ತುಷ್ಟಿಲಿ ನೃಪೇಶನು। ಇಷ್ಟೆಲಿ ಕೇಳಿವನು ॥ ೩೫ ॥

ಶ್ರೀಕೃಷ್ಣನಾಶ್ರಿತ ಏಕಾಂತಿಗಳಿಗೆ। ವ್ಯಾಕುಲಚಿತ್ತವಿಲ್ಲ ।
ಶ್ರೀಕೃಷ್ಣಗ್ಹೇಳುವ ಪೋಕದನುಜರ। ನೀಕ ಸಂದೇಹವಿಲ್ಲ ॥ ೩೬ ॥

ಗೋಷ್ಪದ ಗೋಪೇರಿಗಿಷ್ಟ ಸುಖವಿತ್ತು। ಸ್ಪಷ್ಟ ತಾ ನಿರ್ಲಿಪ್ತನು ।
ಶಿಷ್ಟರ್ಗೆ ಮೋಹವೊಂದಿಷ್ಟು ತೋರದೆಂದು। ದುಷ್ಟರ ಮೋಹನನು ॥ ೩೭ ॥

ಶ್ರೀಪತಿಯಾಜ್ಞೆಯಿಂ ಗೋಪೇರು ಸಾದರು। ತಾಪಬಟ್ಟಾಲಯವ ।
ಸ್ವಪತ್ನಿವಿಯೋಗ ಗೋಪರ್ಗೆ ತೋರದು। ಪ್ರೇರಿಸೆ ಮಾಧವ ॥ ೩೮ ॥

ಶ್ರೀದೇವಿ ಮಿಗಿತನ ಪಾದಾಂಗುಲಿನಖ। ಆದರದಿಂ ನೋಡುತ ।
ಮೋದದಿಂದೊಂದು ಗುಣಾವ್ಯಂತಕಾಣಲು। ವೇದೋಕ್ತಾನುಕ್ತ
ಗಾಥಾ ॥ ೩೯॥

ಸೃಷ್ಟ್ಯಾದಿಕಾರಣ ಶಿಷ್ಟಸಂರಕ್ಷಣ। ದುಷ್ಟನಾಶಕ ಮೋಹನ ।
ಗೋಷ್ಪದ ನಾರೀರಂದಿಷ್ಟಾನುಸಾರ ಫಲೇಷ್ಟದಾಘವಹನಾ ॥ ೪೦॥

ಆಪನ್ನಜನರ ತಾಪ–ಪಾಪಹರ। ಶ್ರೀಪರಬ್ರಹ್ಮ ಕೃಷ್ಣ ।
ಈ ಪರಿ ಹೊಗಳಿದನು ಶ್ರೀಪ್ರಸನ್ನವೆಂಕಟಾಧಿಪ ವೃಂದಾರಕೇಷ್ಟ ॥ ೪೧ ॥

---

ಶಬ್ದಾರ್ಥ:— ಹರಿಣಾಂಕ=ಚಂದ್ರ. ಸಿಡಿವ=ದೂರಹೋಗುವ. ಕೆಳದಿ=ಗೆಳತಿ. ಪಟ್ಟಿಕೆ=ರೇಶ್ಮೆಬಟ್ಟೆ. ಅಸಂಪ್ರಜ್ಞಾತರು=ಕೇವಲ ಪರಮಾತ್ಮನ ಧ್ಯಾನದಲ್ಲಿ ರತರಾಗಿ ಹೊರಗಿನ ಅರಿವಿಲ್ಲದವರು. ನಿಡುಸರಳ್=ನೀಟಾದ ಬಾಣ. ಉಡುಪ=ಚಂದ್ರ. ಕಬ್ಬುಬಿಲ್ಲ=ಕಾಮ. ಉಲಿ=ಸಪ್ಪಳ ಮಾಡು. ಕುಂತಳ=ಕೂದಲು. ನಲ್ಲ=ಗಂಡ. ಜಲದೊಟ್ಟಿಲು = ನೀರಿನ ಸಮೂಹ. ಜಂಗುಳಿ=ಸಮೂಹ. ಕೋವಿದರು=ಬಲ್ಲವರು. ವಿಷ್ಣುರಾತ=ಪರೀಕ್ಷಿದ್ರಾಜನು. ಏಕಾಂತಿಗಳು=ವಿಷ್ಣುವಿನ ಹೊರತಾಗಿ ಅನ್ಯರನ್ನು ಭಜಿಸದವರು. ಪೋಕ=ನೀಚ. ಅನೀಕ=ಸಮೂಹ. ಗಾಥಾ=ಹಾಡು. ಸಾಂಗತ್ಯವಿಭೇದವು. ನುಡಿಗಳು ೫೬೫.

## ೪೨

### ಮೆಚ್ಚು ಬಹುಳಿರಾಗ — ಅಷ್ಟತಾಳ.

ಗೋಷ್ಪದ ಜನಕೆಲ್ಲ ಸೃಷ್ಟಿಕೋಟಿಗೆಲ್ಲ । ಕೃಷ್ಣನೆ ಪೋಷಕನು ।
ಮೃಷ್ಟಾನ್ನಪಾನದ ತುಷ್ಟಿದ ಮುಕ್ತಿದ । ದುಷ್ಟಜನಾರ್ದನನು ॥ ಪಲ್ಲ ॥
ಒಂದಿನಂಬಿಕೆಯ ಜಾತ್ರೆನೆರೆಯಲೆಂದು । ಬಂದು ನಂದಗೋಪನು ।
ಬಂದಾ ವಿಪ್ರನೀಕ ಕುಟುಂಬ ಸಹವಾಗಿ। ಮಿಂದು ಸರಸ್ವತಿಯನು ॥
ಸ್ಕಂದನಮ್ಮನಿಗೆ ವಂದಿಸಿ ಪೂಜಿಸ್ಯಾ । ನಂದದಿ ಭೋಜನವಾ ।
ಬಂದ ಇಷ್ಟ ಜನರಿಂದ ಮಾಡಿದನು ಚಂದದಿಂದ ದಾನವಾ ॥ ೧ ॥
ವ್ರಜಪತಿಯನು ನುಂಗಿತು ಒಂದು ಅದ್ಭುತ । ಅಜಗರವಲ್ಲಿ ಬಂದು ।
ಸುಜನ ಗೋವರು ರಾಮ ಕೃಷ್ಣ ಹರೆ ಹರೆ । ಭಜಕ ರಕ್ಷ ನೀನೆಂದು ॥

ರಜನಿಯಲ್ಲಿ ಕೊಳ್ಳಿಯ ಪಿಡಿದಂಜುತ । ಅಜಗರನ್ನ ಕೊಂದರಂದು ।
ಭುಜಗವಂಜದೆ ಗ್ರಸಿಸೆ ಕಂಡನಚ್ಯುತ । ಅಜಸ್ಮರರಯ್ಯನಂದು ॥ ೨ ॥
ತಂದೆಯ ನುಂಗುವ ಅಹಿಯನ್ನು ಪಾದಾಬ್ಜ । ಹೊಂದಿಸಿ ಉದ್ಧರಿಸಿ-
ದನು ।
ದಂದಶೂಕಗೆ ದಿವ್ಯ ಶರೀರವಾಕ್ಷಣ । ತಂದಿತ್ತ ಸರ್ವೇಶನು ॥
ಹಿಂದೆ ವಿದ್ಯಾಧರ ತಾನು ಮುನಿಯ ಶಾಪ । ದಿಂದಹಿಯಾಗಿರಲು ।
ಇಂದಿರೆಯರಸನ ಅಂಘ್ರಿಯು ಸೋಂಕೆ । ಬಂದೀಸ್ತೋತ್ರವ ಮಾಡಲು
॥ ೩ ॥
ವಾಣಿಗಳೆಲ್ಲ ನಿನ್ನಾನಂದಮಯಗುಣ । ವಾನು ಹೊಗಳ್ವಂತೆ ಮಾಡು
ಶ್ರೀನಯ ನಿನ್ನ ಕಥಾಮೃತ ಶ್ರವಣಕೆ । ಪಾನದ ಲಾಭವ ನೀಡು ॥
ಪಾಣಿಗಳಿಂ ನಿನ್ನ ಸತ್ಕರ್ಮವ್ಯಾಸಂಗ । ವು ನಿನ್ನ ಶ್ರೀಪಾದಕೆ ।
ದೀನವತ್ಸಲ ನನ್ನ ತಲೆ ವಂದನೆಗೆ ಮಾಡು । ಧ್ಯಾನಕೆ ಮನ ಮಾಡು
॥ ೪ ॥
ನಿನ್ನ ಮೂರ್ತಿಗಳೆನ್ನ ನೇತ್ರ ಚಿತ್ತದಲಿಟ್ಟು । ನಿನ್ನ ದಾಸರ ಸಂಗವು ।
ಅನಂತ ಜನ್ಮಕೆ ದೊರಕಲಿಯೆನುತ ವಿ । ಮಾನ ಹತ್ತಿ ನಡೆದ ॥
ಈ ನಾಟ್ಯವ ನೋಡಿ ನಂದಾದಿಗೋವರು । ಆನಂದಭರಿತರಾಗಿ ।
ಏನಾಶ್ಚರ್ಯವೆಂದಾನಂದಮಯ ಪ್ರ । ಸನ್ವೆಂಕಟನ ಹೊಗಳಿದರು ॥೫॥

ಶಬ್ದಾರ್ಥ:—ಸ್ಕಂದ=ಷಣ್ಮುಖ. ಅಹಿ=ಸರ್ಪ. ದಂದಶೂಕ=ಹಾವು. ತ್ರಿನಯ=ಲಕು ಮೆಯನ್ನು ಪ್ರೇರಿಸುವವನು. ಸಾಂಗತ್ಯವಿಭೇದವು. ೫೦ ನುಡಿಗಳು.

---

೪೮

ಸೌರಾಷ್ಟ್ರರಾಗ—ಜಕ್ಕಜೀತಾಳ.

ಅವರೇ ಸುಖಿಗಳು ಅವರೇ ಧನ್ಯರು । ಗೋವಿಂದನಾಶ್ರಿತರು ।
ಸವೆಯದ ಭಕ್ತಿಸ್ತವನಗಳಿಂದ । ಭವವಾ ಗೆದ್ದವರು ॥ ಪಲ್ಲ ॥
ಆ ವಿದ್ಯಾಧರನು ವಿಮಾನವೈದಿದ । ವಿವರವರಿತನು ।
ಗೋವರಿಗೊಡೆಯನ ಮಗನ ಮಹಿಮೆಯ । ಸ್ತವಿಸಿ ನಲಿದನು ॥

ಸವೆಯದಾಶ್ಚರ್ಯ ಕರ್ಮವ ಮನುಜ । ದಿವಿಜರ್ತ್ಗಳಲು ।
ಗೋವಗೋವೇರಿಂದ ವ್ರಜಪೊಕ್ಕನು । ಭುವನಸೊಡೆಯನು ॥ ೧ ॥

ಶ್ರೀಮನೋಹರ ಸಖಿಯರ ಬೆರಸಿ । ರಾಮಸಹ ನಿಶದಿ ।
ತಾ ಮನೋತ್ಸವದಿ ವನವನ ತಿರುಗೆ । ಕಾಮಿನೇರ್ ಸುಸ್ವರದಿ ॥
ಪ್ರೇಮಸುಹೃದ್ಗಾನ ಲಾಲಿಸುತಿರಲು । ಕೌಮುದಿಯು ಕಾಶದಿ ।
ಕ್ಷೇಮಾಂಬರನುಟ್ಟು ಸ್ರಗ್ಗಂಧಲೇಪನ । ದೀಮತ್ತಳಿಗಳ ತೆರದಿ ॥ ೨ ॥

ವಿಶ್ವಾನಂದಕರು ರಾಗವ ಪಾಡಲು । ವಿಶ್ವಗೋಪಿಜನರು ।
ಸುಸ್ವರ ಮೂರ್ಛೆಯೊಳು ವಸ್ತ್ರಾಭರ । ಣಾಸ್ವಕೀಯವೆಂದರು ॥
ಸುಶ್ವಾಸೋಚ್ಛ್ವಾಸವ ಬಿಡುತ ಮುಕುಂದ । ಶಶ್ವದೇಕೇಶನೆಂದು ।
ಸುಸ್ವಭಾವ ಹೊಂದಿ ಪೂತಾಂಗೆರು ತಾವು । ಅಸ್ವತಂತ್ರೆಯರಾದರಂದು ॥ ೩ ॥

ಪೂಗೋಲನಬ್ಬರ ನಿಬ್ಬರವಾಗಿದೆ । ಶ್ರೀ ಗೋವಿಂದ ಕಾಯಿದನು ।
ಆಗೊಬ್ಬ ಖಳನು ಶಂಖಚೂಡನು । ಈ ಗೋಪೆರೊಯ್ಯೆ ಬಂದನು ॥
ನಾಗಗಮನೆರು ಹರಿ ಕೃಷ್ಣರಾಮ । ನೀ ಗತಿ ಕಾಯೆಂದರು ।
ಈಗಂಜಬೇಡೆಂದು ಅಗ್ರಜನ ಸಹ । ಬೇಗದಿ ಬೆಂಬತ್ತಿದನು ॥ ೪ ॥

ರಾಮಾಧೋಕ್ಷಜರು ಚೋರನ ಬೆನ್ನಟ್ಟಿ । ಶ್ರೀಮತ್ತಾಳಹಸ್ತದಿ ।
ಆ ಮತ್ತ ದೈತ್ಯನ ಮಸ್ತಕವಿಳುಹಿ । ಸುಮೌಳಿರತ್ನವ ಕಿತ್ತಿ
ರಾಮಂಗೆ ಕೊಟ್ಟನು ವಾಮಾಕ್ಷೆರ ಬಿಡಿಸಿ । ದಾಮನೋಹರ ಹರಿ ।
ಕಾಮನಯ್ಯನ ತಾವ್ ಮೊರೆಹೊಕ್ಕರು । ಸ್ವಾಮಿ ದುಷ್ಟಕುಲಹರಿ ॥ ೫ ॥

ಹೇ ಕೃಷ್ಣ ಅಚ್ಯುತಾ ದುಃಖಹರ್ಶಭಕ್ತ । ರಾ ಕಾಮಧೇನು ಮುಕುಂದ ।
ಹೇ ಕೇಶಿಸೂದನ ಪೂತನಾಂತಕ ದೇವ । ಚಕ್ರನಾತಘ್ನಾನಂದಾ ।
ಹೇ ಕಂಜಲೋಚನ ಗೋಪಿಕಾಮನೋಹರ । ಹೇ ಕಾಳಿಂದಿವಿಹಾರಾ ।
ನಾಕೇಶಮದಹರ ಗೋವರ್ಧನೋದ್ಧಾರ । ಲೋಕೈಕಸತ್ಸುಂದರಾ ॥ ೬ ॥

ಕಾಲಿಯ ಮದಹಾಹಿಕಾಮಿನೀಸ್ತುತಿಪ್ರಿಯಾ । ಭೂಲಲನಾ ಭಯಘ್ನ ।
ಬಾಲಕ ಲೀಲಾವಿಶಾಲ ಶ್ರೀಲೋಲ। ಭೂಲೋಲ ದುರ್ಗಾಂಗನೇಶಾ ॥
ಮಾಲಾಲಿತಾಂಘ್ರಿ ತ್ರಯಾಲಯ ಸುರಮುನಿ । ಲಾಲಿತಚರಣಾಂಬುಜ ।
ತ್ರಿಲೋಕ ಸೃಷ್ಟ್ಯಾದಿ ಮೂಲಕಾರಣ ಗುಣ । ಜಾಲ ಶ್ರೀ ನಾರಾಯಣ ॥ ೭ ॥

ಪೋ ಶಂಖಚೂಡ ಬಂದೆಮ್ಮನೊಯ್ಯಲು । ನೀ ಕಾಯಿದೆಯೆ ದಯಾಳು ।
ಸಾಕು ನಮೊ ನಮೊ ನಮೊ ನಮೋಯೆಂದು ಅ । ನೇಕ ಸ್ತೋತ್ರವ ಮಾಡಲು ।
ಆ ಕನ್ಯೆರ ಭಕ್ತಿಭಾವಕೆ ಮೆಚ್ಚಿದ । ಗೋಕುಲದವರಿಗೆಲ್ಲ ।
ವೈಕುಂಠವೇ ಫಲಮಾಡಿಟ್ಟ ಶ್ರೀಕೃಷ್ಣ । ಆಕಳಕಾವಾ ಚಲ್ವಾ ॥ ೮ ॥
ಈ ಕೃಷ್ಣ ಚರಿತ್ರೆ ಏಕಾಂತಭಕ್ತಿಲಿ । ಲೋಕೇಶ ಪರಿಕ್ಷಿತಾ ।
ತಾ ಕೇಳಿದಾ ಗುರುಶುಕಮುನೀಶನ । ವಾಕ್ಯಾಮೃತ ತತ್ವತಃ ॥
ಆ ಕರ್ಣಪುಟದಿಂದುಂಡು ತೇಗಲು । ಲೋಕನೆಲ್ಲ ಪಾವನ ।
ಶ್ರೀಕಾಂತ ಪ್ರಸನ್ನ ವೆಂಕಟೇಶನ ಲೀಲೆಯು । ನೀ ಕೇಳಿದವ । ಜಾಣ ॥೯॥

ಶಬ್ದಾರ್ಥ:—ಕೌಮುದೀ=ಬೆಳದಿಂಗಳು ಕ್ಷೌಮಾಂಬರ=ದುಕೂಲ. ಪೂಗೋಲ=ಕಾಮು ತಾಳಹಸ್ತದಿ=ತಾಡವೃಕ್ಷವನ್ನು ಕೈಯಲ್ಲಿ ತೆಗೆದುಕೊಂಡು ತತ್ವತ:=ನಿಜವಾಗಿ

ವಿ. ಸಂ:— ಶಂಖಚೂಡನು ಕುಬೇರಸೇವಕರಲ್ಲೊಬ್ಬನು. ಅವನ ತಲೆಯಲ್ಲೊಂದು ಶ್ರೇಷ್ಠ ರತ್ನವಿತ್ತು. ಅವನನ್ನುಕೊಂದು ಅವನ ತಲೆಯ ರತ್ನವನ್ನು ಕೃಷ್ಣನು ತಕ್ಕೊಂಡು ಬಂದನು. ಸಾಂಗತ್ಯ ವಿಭೇದವು. ೫೭೯ ನುಡಿಗಳು.

---

೪೯

ರಾಗ ದೇಶಿ. — ಅಟತಾಳ.

## ವೇಣೂಗೀತಾ

ಜಾಣೆ ಗೋಪೇರೊಂದುಗೂಡಿ । ವೇಣುಗೋಪತಿಯ ದಿವ್ಯ ।
ವೇಣುಗೀತೆಯ ಹೇಳಿದರೆ । ಗಾನರಸದಲಿ ॥ ಪಲ್ಲ ॥

ಜ್ಞಾನಚರ್ಯನಂದನ್ನ । ರಾಣಿ ಕೇಳಿದಳೆಂದು ವ್ಯಾಸ ।
ಸೂನು ಪೇಳ್ದ ಭೂಪತಿಗೆ । ಆನಂದದಲಿ ॥ ಅ.॥ ಪಲ್ಲ ॥

ಸಂದನೋದ್ಯಾನಕಧಿಕಾ । ನಂದವಿದ ವನಗಳಲ್ಲಿ ।
ಬಂದು ಕೃಷ್ಣ ಚರಿಸುವ ಗೋ । ವೃಂದದಿ ನಿತ್ಯ ॥
ಇಂದುಮುಖಿಯರು ಪ್ರಿಯನ ನೋಡಿ । ಕಂಪರ್ಪನ ಸಾಯಕಕ್ಕೆ ।
ನೊಂದು ವೇಣುವೈಚಿತ್ರ್ಯದ । ಚಂದ ಹೊಗಳುತ ॥ ೧ ॥

ವಾಮಬಾಹ್ವಿಲಿಟ್ಟು ಗೋಣು । ವಾಮಕಪೋಲವು, ಭ್ರೂ, ।
ಭ್ರಮಣ ವಿಲಾಸಾರ್ಪಿತ । ಹೇಮವೇಣುವ ॥
ಕೋಮಲಾಂಗುಲಿಲಿ ರಾಗ । ನೇಮಿಸೆ ಮಂಜುಳಸ್ವನಾ ।
ಕಾಮಿನೇರು ಕೇಳುತಲಿ । ಕಾಮಬಾಣದಿ ॥ ೨ ॥

ವ್ಯಾಮೋಹಿಪಂತೆ ಮಾಡಿದ । ಶ್ರೀಮುಕುಂದಾಂಬರದಲಿಕ ।
ವೈಮಾನಿಕ ಸಿದ್ಧಪತ್ನೇರ್ ಭ್ರಾಮೆಗೊಂಡರು ॥
ಕಾಮಬಾಣ ನಟ್ಟು ಲಜ್ಜೆ । ಯಾ ಮರೆದು ಜಗುಳಿಬಿದ್ದ ।
ಹೇಮಾಂಬರಾಭರಣಗಳ । ನೇಮುಗಾಣರು ॥ ೩ ॥

ಕೇಳಿರಿ ಸ್ತ್ರೀಜನರುಗಳಿರಾ । ಮಾಲೆ ಮಿಂಚಿನ ಚಲುವ ।
ನೀಲನೀರದಶಾಮಲನ । ಲೀಲೆ ವೇಣುವಿನ ॥
ಮೇಲು ನಾದ ಕೇಳಿ ಮಾತ್ರ । ಬಾಲೇರಿಗೆ ಮೋಕ್ಷಾನಂದ ।
ಕಾಲಕಾಲಕುಣಿಸುವ । ಗೋಪಾಲನಂದನ ॥ ೪ ॥

ಆವ ವಿಚಿತ್ರ ರಾಗವೋ । ಆವ ಮೋಹನಕರವೋ ।
ದೇವಗಾಯಕೀಯರೆಲ್ಲಾ । ಕೋವಿದರಾಣಿ ॥
ಗೋವು ಮೃಗಾಳಿಗಳೆಲ್ಲ । ಭಾವಶುದ್ಧಿಯಿಂದ ಕೇಳಿ ।
ದೇವೇಶನ ಪದದಿ ತಮ್ಮ । ಜೀವ ನೀಡಲು ॥ ೫ ॥

ಹಿಂಡು ಗೋವು ಹರಿಯ ಕೃತಿಯು । ಕಂಡು ಧ್ಯಾನವಲ್ಲಿ ತಂಮ ।
ತುಂಡ ನೆಗಹಿ ಬಾಲವೆತ್ತಿ । ಕೊಂಡು ನಿಂತವು ॥
ತಂಟ ತಂಡ ಒಪ್ಪಿದವು । ಹಿಂಡೆ ಹವಳೆ ಹುಲು ಗಚ್ಚಿ ।

ಕೊಂಡು ಸಿಂತವಲ್ಲಿಗಲ್ಲಿ । ಮೆಂಡಲಿದ್ದವು ॥ ೬ ॥

ಕರ್ಣ ನಿಲ್ಲಿಸಿ ಎವೆಯುನಿಡದೆ । ಸ್ವರ್ಣವೇಣುವಿನ ರವ ।
ವರ್ನ್ನಿಸಿ ಮುಕುಂದನಲ್ಲಿ । ಮನವನಿಟ್ಟವು ॥
ಘನ್ನ ನಿದ್ರೆಯಾಯ್ತು ಬದಿಯು । ತನ್ನ ಕರುವ ನೋಡಲಿಲ್ಲ ।
ಬಣ್ಣವಿಟ್ಟು ಬರೆದ ಚಿತ್ರ । ವನ್ನು ಹೋಲ್ವವು ॥ ೭ ॥

ಪೂಗೊಂಚಲು ಬರುಹಿ ಬರ್ಹೆ । ಗೋಗೋವರ್ಗೆ ಕೊಟ್ಟು ಮುಡಿಮು ।
ತಾ ಗೈರಿಕ ಲೇಖಿಸಿಕೊಂ । ಡಾಗ ಎಲ್ಲರ ।
ಸೋಗನಾಂತು ಒಪ್ಪಿದರು । ಪೂಗಣೇರಸಂತತೇಜ ।
ಯೋಗಿಜನಹೃದಯಾ ನಿಲಯಾ । ಮೋಘಸುಂದರ ॥ ೮ ॥

ಪ್ರೇಮದಿಂದ ಕಟಿವನಾವ । ಗೋಮಕ್ಕಳ ಸಂದೋಹದಿ ।
ರಾಮನೊಡನೆ ವೇಣುಸ್ವರದಿ । ಸ್ವಾಮಿ ಅಚ್ಯುತ ॥
ಹೈಮೆವಂಶನಾದ ಸುಧೆಗೆ । ಆ ಮಹಾನದೀಗಳೆಲ್ಲ ।
ತಾ ಮುಂದಕ್ಕೆ ಪ್ರವಹದೋರವು । ವ್ಯಾಮೋಹಿಸುತ ॥ ೯ ॥

ತಾ ಮತ್ತೆ ಹಿಂದಕ್ಕೆ ಬಂದು ಸೋಮಕುಲಪನಂಘ್ರಿಗಳನು !
ಆ ಮಹಾಭುಜೋರ್ಮಿಗಳಲಿ । ಕಾಮಿಸ್ಯೊಪ್ಪಿದುವು ॥
ಈ ಮಹಿಮೆ ನೋಡಿ ಸುರರ । ಸ್ತೋಮ ಸಿದ್ಧಗಂಧರ್ವರು ।
ವ್ಯೋಮಮಂಡಲದಿ ನಮೊ । ನಮೊಯೆಂದರು ॥ ೧೦ ॥

ಆದಿಪುರುಷ ಸ್ಥಿರೈಶ್ವರ್ಯ । ನಾದ ದೇವವನಗಿರಿಯಲಿ ।
ಊದಿದ ಷಡ್ರಸದ ವೇಣು । ಗೋಧನದ ರಕ್ಷ ।
ವೇದಾನಂತವೇದ್ಯ ಕೃಷ್ಣ । ಮಾಧವ ಮುಕ್ತಾರ್ಥಿ ತಾ ಶ್ರೀ-।
ಪಾದಪದ್ಮಾಮೋದ ಪ್ರ । ಮೋದ ಸುಪಕ್ಷಿ ॥ ೧೧ ॥

ಅಪವರ್ಗ್ಯರಿಂದ ಸ್ತೋತ್ರ । ಶ್ರೀಪತಿ ಮಾಡಿಸಿಕೊಂಬ ।
ಗೋಪರ ಸ್ತೋತ್ರಕ್ಕೊಪ್ಪಿದ । ಶ್ರೀಪರಬ್ರಹ್ಮ ।
ಶ್ರೀಪ್ರಕೃತಿ ಇವನ ಗುಣ । ರೂಪಲಾವಣ್ಯಕ್ಕೆ ಸೋತಾ ।
ಈ ಹೆಣ್ಣಿಗೆ ವಶವಿಡಂಬನ । ತೋರ್ಪನಮ್ಮಮ್ಮ ॥ ೧೨ ॥

ಈ ವನದ ತರುಲತೆಯು । ಶ್ರೀವಿಷ್ಣು ವಶವಾದವೆಂಬ ।
ಭಾವತೋರಿ ನಮಿಸಿದವು । ಪೂವುಫಲದಿಂದ ॥
ತೀವಿದ ತೋಷದಿ । ವೇಣು । ರಾವರಸವನುಂಡು ಕೊಬ್ಬಿ ।
ದಾವು ತಲೆದೂಗಿದವು । ಕೋವಿದರಂತೆ ॥ ೧೩ ॥

ಪ್ರೇಮಹರುಷದಶ್ರುಧಾರಾ । ಆ ಮರಂಗಳ್ವಿಟಪಸಾರಾ ।
ಭೂಮಿಗಿಳಿವಾಶ್ಚರ್ಯ ನೋಡಿ । ಕಾಮಿನೇರೆಲ್ಲ ॥
ಶ್ರೀಮನೋಹರನ್ನ ಕೀರ್ತಿ । ಧೀಮಂತ ಜನರೆ ಸ್ಫೂರ್ತಿ ।
ಪಾಮರರೇನು ಬಲ್ಲರು । ಈ ಮಹಾಲೀಲೆ ॥ ೧೪ ॥

ಕೆಳದಿ ಕೇಳೆ ಗಂಧನೀಲೋ । ತ್ಪಲದಾವೋದಮಯದ ವಕ್ತ್ರಾ ।
ನಿಲವನುಂಡು ಸೊಕ್ಕಿ ಚರಿಪ । ಅಳಿವಿಂಡುಗಳು ॥
ಅಲಘುಗಾನ ಕೇಳಿ ಮುಕುಂದ । ತಲೆದೂಗಲು ರಂಹಸದಿ ।
ನಳಿನಾಕ್ಷನ ಬಳಿಗೆ ಬರಲು । ಸಾರಸಹಂಸಗಳು ॥ ೧೫ ॥

ಲಲಿತವೇಣು ಸುಧೆಯನುಂಡು । ಕಲವೇರಿ ಕೂಲದೆ ಮೌನದಿ ।
ಬಳಿಯುಲ್ಲ್ಯರಗಣ್ಣ ಮುಚ್ಚಿ । ನಳಿನನಯನನ ॥
ಚಲುವಿಕೆ ಧ್ಯಾನೋಪಾಸನೆ । ಗಳಲಿ ಪರಮಹಂಸರಂತೆ ।
ನಲಿವ ಸಾರಸಹಂಸಗಳ । ಬಳಗವನುದಿನ ॥ ೧೬ ॥

ಅಣ್ಣ ಗೋವರಿಂದ ಕೂಡಿ । ಚಿನ್ಮಯಾಧರದಿ ವೇಣು ।
ವನ್ನೂದುವ ಹೆಸರುಗೊಂಡು । ಕನ್ಯೆ ಗೋಪೆಯರ ॥
ತನ್ನಾನಂದದಿ ತಾ ಪೂರ್ಣ । ಜನ್ನರ ವಿಡಂಬ ನಟನೆ ।
ಯನ್ನು ತೋರ್ಪ ಅಜ್ಞರ ಮೋ । ಹನ್ನ ಸುಂದರ ॥ ೧೭ ॥

ಘನ ಮಂಜುಳರವದಿ ಗೋವ । ರ್ಧನ ಗಿರಿಯ ಶಬ್ದಿಸಲು ।
ಘನಗಂಜಿ ಮೆಲ್ಲಮೆಲ್ಲನೆ । ಸ್ವನಿವಾಸ್ಯೆದಿದವು ॥
ಘನಶಾಮಲ ನಮಗೆ ಬಂಧು । ತನುಮನದಿ ಅವಗೆ ಸ್ತೋತ್ರ ।
ವನು ಮಾಡುವೆನೆಂಬ ಭಯದಿ । ಹೆಣಗಿ ಸಿಂಪುವವು ॥ ೧೮ ॥

ಮಹದತಿಕ್ರಮಣಕಂಜಿ । ಮಹಪೂಜೆಯಲಿ ಒಲಿಸುವಂದದಿ ।
ಅಹಸ್ಸಿನಲ್ಲಿ ಪುಷ್ಪವೃಷ್ಟಿ । ಬಹಳ ಗರೆಯುವವು ॥

ಮಹಿಯೊಳಗೆ ಹರಿಯ ಆಜ್ಞೆ । ವಹಿಸಿದವನಿಗೇವೆ ಮುಕ್ತಿ ।
ವಹಿಸದವನೇ ದ್ರೋಹಿ ಯವಗೆ । ಸಹಜಾಂಧಂತಮವು ॥ ೧೯ ॥

ಶಶಿವದನೆ ನಿನ್ನ ಸೂನು । ಕುಶಲವರ್ಯ ಗೋವರೊಳು ।
ಅಸನುವೇಣುವಿಂದ ಸ । ದ್ರಸದಿ ಗಾಯನವ ॥
ಹೊಸ ಹೊಸ ಸುಮಧುರ ಗೀತಾ । ಎಸೆವ ಬಿಂಬಾಧರದಿ ಇಟ್ಟು ।
ಶಿಶುಗೆಳೆಯರ ಶಿಕ್ಷಿಪಾ । ವಂಶಗಾಯನವ ॥ ೨೦ ॥

ದಿವಿಯಲಿ ನೆರೆದ ಸರಸಿಜೋ । ದ್ಭವ ಭವೇಂದ್ರ ಮುಖ್ಯರಾದ ।
ಕವಿಗಳಾನತಕಂಧರದಿ । ಕಿವಿಯ ಗೊಟ್ಟರು ॥
ಕವಿದು ಮೋಹವಿಸ್ಮಿತದಲಿ । ಸವೆಯದ ಶ್ರೀಹರಿಯ ಲೀಲೆ ।
ಸವಿರಸವ ಸವಿದಾನಂದ । ಭವನವಿಡಿದರು ॥ ೨೧ ॥

ಗೋಖುರಾರ್ದಿತ ಗೋಷ್ಠ ಭೂಮಿ । ಶ್ರೀಕಂಜಾಂಕುಶವಜ್ರಧ್ವಜ ।
ರೇಖಾಂಕಿತ ಶ್ರೀಪಾದಾಬ್ಜ । ಸೋಂಕಿ ಒಪ್ಪಲು ॥
ನಾಕದವರು ವ್ರಜದ ವಾಸ । ಜೇಕೆಂದು ಬಯಸಿದರಲ್ಲಿ ।
ಶ್ರೀಕೃಷ್ಣಾಂಘ್ರಿಯಾಶ್ರಿತರ್ಗೆ । ವೈಕುಂಠವ್ಯಾಕೆ ॥ ೨೨ ॥

ಶ್ರೀರಮಣ ಸೌಂದರ್ಯ । ಸಾರನ್ನ ಮಾರ್ಗದಿ ಕಂಡು ।
ಸಾರಂಗಾಕ್ಷೇರಾ ವಿಲಾಸಕೆ । ಮೇರೆದೋರದು ॥
ಸ್ವರವೇಣುರಸಾಯನಕ್ಕೆ । ನಾರೇರಿಚ್ಛೆ ಹಬ್ಬಲಾಗೆ ।
ಮಾರನ ಮಾರ್ಗಣರಾಶಿ । ತೂರುತಿದ್ದುವು ॥ ೨೩ ॥
ತನು ಮನೆಯು ಮರೆದರವರು । ಕನಕಾಭದಂಬರ ಜಗುಳಿರೆ ।
ಇನಿತು ಎಚ್ಚರಿಲ್ಲವರ್ಗೆ । ಮುನಿಗಳಂದದಲಿ ॥
ಮಣಿಧರ ಗೋವು ಮೇಸುತೊಮ್ಮೆ । ಗೆಣೆಯರಂಸದಿ ಸ್ಕಂಧವಿಟ್ಟು ।
ಕ್ವಣಿತ ವೇಣು ನುಡಿಸಿ ಮೋಹಿಪ । ವನದಿ ವನಮಾಲಿ ॥ ೨೪ ॥
ಕೃಷ್ಣಸಾರಸತಿಯರ್ತಮ್ಮ । ಪುಟ್ಟ ಮರಿಗಳ ಮನೆಯ ಬಿಟ್ಟು ।
ಕೊಟ್ಟಚ್ಯುತನ ರೂಪವನ್ನು । ದಿಟ್ಟಿಸಿದವು ॥
ಕೃಷ್ಣನ್ನ ಲಾವಣ್ಯಾಮೃತವ । ಗುಟ್ಟುಕರಿಸಿ ಕಣ್ಗಳಿಂದ ।
ಗೋಷ್ಠನಾರಿಯರನ್ನು ಪೋಲ್ದು । ತುಷ್ಟಿಸಿದವು ॥ ೨೫ ॥

ಕುಂದಕುಸುಮಮಾಲೆ ತುಳಸಿ | ಗಂಧ ನೀಲೋತ್ಪಲಗಾತ್ರ ।
ವೃಂದ ಗೋಧನರಕ್ಷಕ । ನಂದ ನಿನ್ನ ಪುತ್ರ ॥
ಅಂದು ಮಲಯಜಾನಿಲವ । ಹೊಂದಿದ ಯಮುನಾತೀರದಲ್ಲಿ ।
ಮಂದಮಂದ ಗತಿಯ ಮಾಳ್ಪ । ಸುಂದರನೇತ್ರಾ ॥ ೨೬ ॥

ಮಲಯಜಮಾರುತನ ಗಂಧ । ಸುಳಿವಲ್ಲಿ ಪಾಠಕರು ಬಂದು ।
ಲಲಿತಗಾತ್ರದ ಗಾಯಕರು । ಚಲುವನಿಂತಿದ್ದ ॥
ಬಳಿಯಲಿ ನಿಂತು ಭಕ್ತಿಯಿಂದ । ಬಲು ಸ್ತೋತ್ರವ ಮಾಡುತಿರಲು ।
ಬಲನ ತಮ್ಮ ಭಜಕರಘವ । ಕಳೆದ ಮುಕ್ಕಿದಾ ॥ ೨೭ ॥

ಭಜಕಾಗಾಧಪುರುಷಸಾರ । ವ್ರಜಕೆ ಬಾಹ ಸಮಯದಲ್ಲಿ ।
ಸುಜನರಿಂದ ಸೇವಿತನಾದ । ನಿಜಸುಖಾಂಬುಧಿ ॥
ಸ್ವಜನಗೋವಿಪ್ರವತ್ಸಲಾಂ । ಬುಜಸಖನ್ನ ಅಸ್ತಮಯದ್ಯ- ।
ಗ್ರಜನ ಕೂಡಿ ಬಹನು ಗೋ । ರಜವ ಲಗ್ನದಿ ॥ ೨೮ ॥

ಗೋಖುರೋದ್ಭವವ ಧೂಳಿ । ಶ್ರೀಕರಾಂಗದಲ್ಲಿ ತಾಳಿ ।
ಶ್ರೀಕೃಷ್ಣ ಕೊಳಲನೂದುತ । ಆಕಳೊಡನೆ ॥
ಗೋಕುಲವ ಹೊಂದಲಾಗೆ । ನಾಕಜನರು ಸುಹೃಜನಾ- ।
ನೇಕ ಸ್ತೋತ್ರ ಮಾಡುವರು । ಸಾಕೆನ್ನದಲೆ ॥ ೨೯ ॥

ಗೋವುಗೋವರ ತಾಪವಾ । ನಿವಾರಿಸುತಿಹ ಜವದಿ |
ದೇವಕೀಜಠರಾಬ್ಧಿ ಚಂದ್ರಾ । ದೇವಗಣೇಂದ್ರ ॥
ಭ್ರೂವಿಲಾಸಪಾಂಗದಿಂದ । ಗೋವಳೇರಿಗವಿತಾನಂದ- ।
ವೀವುತಿದ್ದ ನಿರುತದಲ್ಲಿ । ಪಾವನಗುಣಸಾಂದ್ರಾ ॥ ೩೦ ॥

ಬದರಪಾಂಡುರ ಬಿಂಬ । ವದನ ಕುಂಡಲ ಕಪೋಲ ।
ಪದುಮರಾಗ ವಜ್ರನೀಲ । ನವರತ್ನಾಭರಣ ॥
ಯದುಪತಿಯಾಮಿನಿಯಲ್ಲಿ । ವಿಧುವಿನ ಬೆಳದಿಂಗಳಲ್ಲಿ ।
ಸುದತೀಯರ ಕ್ರೀಡೆಯಲಿಪ್ಪ । ಮದಗಜಾಭನು ॥ ೩೧ ॥
ಗೋಮತಿ ಗೋವಳರು ದಿವದಿ । ವ್ಯೋಮಕ್ರಾಂತನ ತಾಪ ಹೊಂದೆ ।
ಸೋಮಕುಲಜ ಪರಿಹರಿಸಿದ । ಶ್ಯಾಮಸುಂದರ ॥

ಕಾಮಿನೇರ ಸನ್ಮುಖದಿ । ಸ್ವಾಮಿ ತೋರುತಿಹ ಸತತ ।
ಭಾಮೆಯರ ಭಕ್ತಿಭಾವ । ಕೆ ಮನೋಹರ ॥ ೩೨ ॥

ವ್ರಜದ ಗೋಪೇರು ಕೃಷ್ಣನ್ನ । ತ್ರಿಜಗಾಶ್ಚರ್ಯದ ಲೀಲೆ ।
ನಿಜಭಕ್ತಿಯಲಿ ಪಾಡಿ ಸುಖಿಸಿ । ಭಜಿಸುತ್ತಿದ್ದರು ॥
ಸುಜನರು ತನ್ಮನಸ್ಕೆಯರು । ಗಜರಾಜಗಾಮಿನಿಯರು ।
ದ್ವಿಜರಾಜವದನೆಯರು । ದ್ವಿಜದೇವಪ್ರಿಯರು ॥ ೩೩ ॥

ಈ ವೇಣುಗೀತಾಮೃತವ ದಾವ ಪ್ರಾಣಿಗಳ್ಕೇಳುವರು ।
ಭಾವಶುದ್ಧಿಲಿ ಕೇಳುವರು ಕೋವಿದರವರು ॥
ಪಾವನ ಕೃಷ್ಣಚರಿತ್ರ । ಶ್ರೀವ್ಯಾಸಮುನೀಂದ್ರತನಯ ।
ಶ್ರೀವಿಷ್ಣುರಾತಂಗೆ ಹೇಳಿ ಸೇವಿಸಿದಾನು ॥ ೩೪ ॥

ಶ್ರೀವರ ಪ್ರಸನ್ನವೆಂಕಟ । ದೇವದೇವನು ನಮಗಿಷ್ಟವ ।
ನೀವನು ಸಂದೇಹವಿಲ್ಲ । ದೇವಸುರತರು ॥
ಆವಕಾಲ ಕಾಲದಲ್ಲಿ ಸ । ತ್ಸೇವಕವತ್ಸಲ ಸತ್ಯ ।
ಭಾವುಕರು ಹರಿವ್ಯಾಸಂಗದ ಜೀವನ್ಮುಕ್ತರು ॥ ೩೫ ॥

ಶಬ್ದಾರ್ಥ:— ಸಾಯಕ=ಬಾಣ. ತುಂಡ=ಮುಖ. ಗೈರಿ=ಕ್ಯಾಂವಿ. ಅಪವರ್ಗ್ಯರು= ಮೋಕ್ಷಕ್ಕೆ ಯೋಗ್ಯರು. ರಂಹಸ=ವೇಗ. ಅಹಸ್ಸಿನಲ್ಲಿ=ಹಗಲಲ್ಲಿ. ಜಗುಳು=ಸಡಿಲಾಗು. ಕೃಷ್ಣಸಾರಗಳು=ಚಿಗರಿಗಳು. ಬದರ=ಚಂದ್ರ. ದ್ವಿಜ=ಚಿಕ್ಕಿ. ಬ್ರಾಹ್ಮಣ. ಸಾಂಗತ್ಯವಿಭೇದವು.

೬೧೪ ನುಡಿಗಳು

---

೫೦

ಭಾಮಿನೀಷಟ್ಪದಿ

ಕೃಷ್ಣನಾಶ್ರಿತ ಶಿಷ್ಟರೆಲ್ಲರು । ತುಷ್ಟಿಲಿರಲು ಅರಿಷ್ಟನೆಂಬವ ।
ದುಷ್ಟಕಂಸನ ಇಷ್ಟಕಾರ್ಯಕೆ । ಗೋಷ್ಠಕೈತಂದಾ ॥
ವಾರ್ಷ್ಣಿಬಲರನು ನಷ್ಟಮಾಡುವ ॥ ಭ್ರಷ್ಟವೃಷಭನು ಕಷ್ಟಬಡಿಸಿದ ।
ಪುಷ್ಟ ಕಕುದಿಯು ಕಂಪಿಸಿದನು ಮಹೀಯನತಿಘೋರ ॥ ೧ ॥

ಕಾಲ ಕೆದರುತ ಬಾಲ ನಿಗುರಿಸಿ । ಶೀಳಿದನು ಮೇಘಗಳ ಕೋಡಿಲಿ ।
ಮೇಲೆ ಮೇಲ್ ಮಲಮೂತ್ರ ಬಿಡುತಲಿ ಆಲಿ ಕೆಂಪಡರೆ ॥
ಬಾಲಕರ ಬಾಲೆಯುನ ಗೋಗಳ । ಮೇಳವಂಜಿಸಿ ಡುರುಕಿಹಾಕುತ ।
ಸ್ಥೂಲ ಭೀಕರ ಗರ್ಭಿಣೀಯುಗ । ಬಸಿರ ಕೆಡಹಿದನು ॥ ೨ ॥

ಖೂಳನುಪಟಳ ತಾಳಲಾರದೆ । ಗೋಳಿಡುತ ಓಡಿದರು ಸಕಲರು ।
ಪಾಲಿಸೈ ಗೋವಿಂದ ರಾವಣಾಯುನುತ ಮೊರೆಯಿಡುವ ॥
ಬಾಲೆಯರ ಆರ್ತಸ್ವರಂಗಳ । ಕೇಳಿ ಅಂಜದಿರೆನುತ ಅಭಯುವ ।
ಹೇಳಿ ಖಳನೊಳು ಮಾತನಾಡಿದ । ಶ್ರೀಲಲನೆಯುರಸ ॥ ೩ ॥

ಎಲೆ ದುರಾತ್ಮಾರಿಷ್ಟವೃಷಭನೆ । ಎಳೆಯುರನು ಗೋವತ್ಸಗೋವನ ।
ಲಲನೆಯುರನಂಜಿಸುವ ವೀರನೆ ಬಾರೊ ನೀ ನಮ್ಮ ॥
ಬಳಿಯೆ ಶೀಘ್ರದಿ ಫಲವನೀವೆವು । ಇಳೆಗೆ ಭಾರಕ ದುಷ್ಟಹರ್ತರು ।
ಬಲಮುರಾರ್ದರು ತಿಳಿಯುಲಿಲ್ಲವೆ ಮೃತ್ಯು ನಿನಗೆಂದು ॥ ೪

ವೀರಧ್ವನಿಯಿಂ ಕರೆದನಚ್ಯುತ । ಕ್ಷೂರಶೃಂಗನು ಗೋಣ ತಗ್ಗಿಸಿ ।
ಧಾರುಣಿಯ ಕೆದರುತ್ತ ಸುರಪನ ಕರದ ವಜ್ರದೊಲು ॥
ವೀರವೇಗದಿ ಬಂದು ತಗಲಿದ । ಶೌರಿ ಗೆಳೆಯರ ಪೆಗಲಿನಲಿ ನಳಿ ।
ತೋಳ ಹೇರಿಯೆ ನಗುತ ನೋಡಿದ ದುಷ್ಟಚೇಷ್ಟೆಯುನು ॥ ೫ ॥

ಸಖರನುಳಿದಚ್ಯುತನು ಬರುತಿಹ । ಕಕುದಿಯುನು ಕೆಡಹಿದನು ಧರೆಯುಲಿ
ಪ್ರಖರ ಪುನರಪಿ ಎದ್ದು ಕೋಪದಿ । ಕೆಣಕಿದನು ಹರಿಯಾ ॥
ನಿಖಿಳರೊಡೆಯುನು ವನವಿಷಾಣದ । ಸುಕರಪಲ್ಲವ ಹಿಡಿದು ಕೆಡವಿದ
ಕುಖಳನ್ಹಿಂಗಾಲ್ಪಿಡಿದು ತಿರುಗಿಸಿ ಅಪ್ಪಳಿಸಿದಿಳೆಗೆ ॥ ೬ ॥
ಮರ್ದಿಸಿದ ಮುಂಗಾಲಿನಿಂದಲಿ । ಆರ್ದ್ರ ವಸ್ತ್ರವ ಹಿಂಡಿದೊಲ್ ಖಳ
ಮರ್ದಕೆತ್ತಿದ ಕೋಡೆರಡರಲಿ ಚೂರ್ಣಿಸಿದ ಬಳಿಕ ॥
ಕಾರ್ದ ರಕ್ತವ ಕಂಗಳೆರಡುವು । ದಿರ್ದವವ ಮೃತನಾದ ಯುಮಪುರ
ಸಾರ್ದ ಸುರರಂಬರದಿ ತುತಿಸಿದಪೂರ್ವಳೆಯು ಗರೆನು ॥ ೭ ॥

ಸುರಮುನಿಗಳೊಗ್ಗೂಡಿ, ತುತಿಸಿದರ್ । ಹರುಷದಲಿ ಅಗ್ರಜಗೆಳೆಯರಿಂ
ವರ ಗೋಮತಿಗಳ ಹಿಂಡಿನಿಂ ಮುರ । ಹರ ವ್ರಜವ ಪೊಗಲು ॥

ಚಿರಮುಹಿಮುನಮ್ಮುತಸುಕರ್ಮವ । ಪರಮುಮತಿಗೋವಳರು ತುತಿಸಲು ।
ಕರುಣಪೀಯುಷ ಕರುಣದೃಷ್ಟ್ಯಾನಂದದಲಿ ಹೊರೆದ ॥ ೮ ॥

ತನ್ನ ನಂಬಿದ ಜೀವರಿಗೆ ಮು । ತ್ತನ್ಯರಿಂ ಬಾಧೆಯು ಲವಾದರೆ ।
ತನ್ನ ಬಿರುದಿಗೆ ಹಾನಿಗಾಂಬುವ । ದೀನವತ್ಸಲನು ॥
ಧನ್ಯರನು ಮಾಡಿದನು ವ್ರಜಪಾ । ವನ್ನವನು ಮಾಡಿದನು ಯಶೊದೆನಂ।
ದನ್ನ ಪುಣ್ಯದ ಫಲವು ಶ್ರೀ ಪರಸನ್ನವೆಂಕಟೇಶಾ ॥ ೯ ॥

ಶಬ್ದಾರ್ಥ:— ಕಕುದಿ=ಇಣಿಯುಳ್ಳವ. ( ಎತ್ತು ) ಕ್ಷೂರ=ಹರಿತ. ( ಚೂಪಾದ ) ಪಾಣ=ಕೋಡು. ಹೊರೆದ=ರಕ್ಷಿಸಿದ. ನುಡಿಗಳು ೬೨೩.

---

೭೧

ರಾಗ ಕನ್ನಡ ಕಾಂಬೋಡಿ — ಏಕತಾಳ

ಕೃಷ್ಣನಾಶ್ರಿತರಿಗೈಥೇಷ್ಟ ಜಯವು ಶ್ರೀ । ವಿಷ್ಣು ವೈಷ್ಣವದ್ರೋಹಿಗಳಿಗೆ।
ಕಷ್ಟದ ತಮಸು ವಿಶಿಷ್ಟ ದುಃಖಾಲಯ । ದುಷ್ಟರಿಗಪಜಯವಾಗೆ
॥ ಪಲ್ಲ ॥

ಜಾತಃ ಕಂಸವಧಾರ್ಥನು ಹರಿಯೆಂಬ । ನೀತಜ್ಞನು ಮುನಿಬ್ರಹ್ಮ ।
ರಾತನು ಶ್ರೀತರುಣಿ ಪ್ರಿತಿಗೆ ಬಂದನು । ಆತುರದಲ್ಲಿ ಸಂಭ್ರಮ್ಮ ॥
ಪಾತಕಿ ಕಂಸಗೆ ಪಾತಕ ಬುದ್ಧಿಯ । ರೀತಿಯು ಬೋಧಿಸಿದ್ದೀಗೆ ।
ತಾತನು ನಂದನು ಮಾತೆ ಯಶೋದೆಯು । ಘಾತಿಸಿಕೊಳದ ಕನ್ಯೆಗೆ
॥ ೧ ॥

ದೇವಕಿಜಠರಜನಾ ವಾಸುದೇವನು । ದೇವಿ ರೋಹಿಣಿಸುತ ಬಲನು ।
ದೇವಿ ಯಮುನೆ ದಾಟಿ ಗೋವಪಳ್ಳಿಲಿ ವಸು। ದೇವನಿಟ್ಟಾ ಕನ್ಯೆಯಳನು॥
ದೇವಕಿಗಿತ್ತನು ಈ ವಿಧ ಕಾರ್ಯನ್ನ । ದೇವ ಎಚ್ಚರವ ಹೇಳುವೆನು ।
ಆ ವೀರರಿಬ್ಬರು ಬೆಳೆದರು ವ್ರಜದಲಿ । ಕಾವರು ದೇವಕ್ಕಳನ್ನು ॥ ೨ ॥

ನಂದನು ಶೌರಿಗೆ ಬಂಧು ಸ್ನೇಹಿತ ಬಲು । ಕಂದವೀರರು ಉಭಯತರು।
ಕೊಂದರು ನಿನ್ನ ಮಂದಿಯು ಭೋಜಪ । ಸಂದೇಹವಿಲ್ಲವಹಿತರು ॥

ಎಂದೆನೆ ಉಗ್ರದಿ ಬೆಂದನು ಸಾಣೆಯು । ಹೊಂದಿದ್ದ ಕತ್ತಿಯು ವಿಡಿದ ।
ಇಂದೇ ಆನಕದುಂದುಭಿ ಸ್ತ್ರೀಸಹ । ಕೊಂದೆನೆನುತ ಖಳ ನುಡಿದ ॥೩॥
ನಾರದಮುನಿಯು ನಿವಾರಿಸಿದನು ಮುಂದೆ । ಕಾರಣವುಂಟುಳುಹೆನಲು
ಮೀರದೆ ಆಜ್ಞೆಯ ಶೌರಿಯು ಸತಿಸಹ । ಕಾರಾಗ್ರಹದಿ ಬಂಧಿಸಲು ॥
ಕ್ರೂರನು ಲೋಹದ ಕಾದುಕರಿಗೆ ಹೇಳಿ । ನಾರಾಯಣಸ್ಮರಣೆಯಿಂದ ।
ಹಾರಿದ ಗಗನಕೆ ಮಾರಕ ಕೇಶಿಗೆ । ಧಾರುಣಿಪತಿ ನೇಮಿಸಿದ ॥ ೪ ॥
ಎಲೆ ಕೇಶಿಯೆ ಗೋವಳರ ಪಳ್ಳಿಗೆ ಹೋಗು । ಅಲಸದೆ ಕೃಷ್ಣಬಲರನು ।
ಕೊಲು ಗಹನರವರ್ ಬೆಳೆದರು ನಂದನ । ನಿಲಯದಿ ಮತ್ತವರನ್ನು ॥
ಸಲೆ ಚಾಣೂರ ಕೌಸಲ ಮುಷ್ಟಿಕಾಮಾತ್ಯ । ಹಲ ಹಸ್ತಿಪರನು
ಕರೆಸಿದ ।
ಬಲವಾಸುದೇವರ ಕೊಲುವ ಉಪಾಯವ । ಕಲಿ ಕಂಸನು ನೇಮಿಸಿದ
॥ ೫ ॥
ಕೇಳಿರೋ, ನಮ್ಮಾಪ್ತಾಳುಗಳಿರಾ ನೀವು । ಕೇಳಿ ಬಲ್ಲಿರಿ ನಂದವ್ರಜದಿ ।
ಕಾಲರೂಪರು ಶೌರಿ ಬಾಲಕರಿಬ್ಬರು । ಬಾಲ ಅಚ್ಯುತಬಲರಿಹರು ॥
ಹೇಳಲೇನೆಮ್ಮಯು, ಮೇಲಾಳುಗಳ ಗೋ । ಪಾಲಕರು ಸವರಿದರು ।
ನಾಳೆಗೆ ಕರೆಸುವೆ ಮೇಲವರರ್ಥವ । ಆಲೋಕಿಸಲ್ಯಾದವರು ॥ ೬ ॥
ರಾಮಕೃಷ್ಣರು ಬಲು ಕೋಮಲರೆನ್ನದೆ । ನೇಮಿಸಿ ಮಲ್ಲಲೀಲೆಯಲಿ ।
ಆ ಮಹಾ ಖಳರ ನಿರ್ನಾಮವ ಮಾಡಿರಿ । ಸ್ವಾಮಿದ್ರೋಹಿಗಳ
ಶೀಘ್ರದಲಿ ॥
ಹೇಮಮಂಚಗಳ ಮಹಾಮಲ್ಲರ ರಂಗ । ಗ್ರಾಮದವರು ನೋಡು
ವಲಿ ।
ಹೇ ಮಹಾಮಾತ್ಯನೆ ಧೀಮಂತನು ನೀ । ನೇಮಿತ ಕಾರ್ಯ ಮಾಡು
ವಲಿ ॥ ೭ ॥
ಕುವಲಯಪೀಡನ ಕವಾಟದಿ ನಿಲಿಸಿರಿ । ಅವರಿಬ್ಬರು ಬರಲಾಗೆ ।
ತವಕದಿ ಕೊಲಿಸುವ ಹವಣದಲಿರಿ ನಿ । ಮ್ಮವರೆಲ್ಲರು ಒಂದಾಗಿ ॥
ಅವನಿಪ ಹೀಗೆನಲವರೆಂದರು ಹೇ ಪ್ರಭೊ । ತವ ಭಗಿನೀಸುತರವರು ।
ಕುವರರ ಕೊಂದರೆ ಭುವಿಯಲಿ ಅಪವಾ । ದವು ಬಹುದೆಂದು ನುಡಿ
ದರು ॥ ೮ ॥

ಈ ಪರಿ ನುಡಿಯಲು ಭೂಪತಿಯೆಂದನು । ನಾ ಪುತ್ರನಲ್ಲುಗ್ರಸೇನಗೆ ।
ನಾ ಪುಟ್ಟಿದೆ ಗಂಧರ್ವಗೆ ರಾಜನ । ರೂಪದಿ ತೋರಿದ ತಾಯೆಸ್ಗೆ ॥
ಆ ಪತಿವ್ರತೆ ಋತುರೂಪ್ಯಾಗಿದ್ದಳು । ಭೂಪತಿಯೆಂದು ಕೂಡಿದಳು ।
ಕಾಪಟ್ಯವರಿಯದೆ ತಾ ಪಶ್ಚಾತ್ ಸಂ । ತಾಪದಿ ಬಲು ಬಳಲಿದಳು ॥ ೯ ॥

ದ್ರುಮಿಳ ಗಂಧರ್ವನ ಕುವರನು ನಾ ಭೋಜ । ಚಮು ಸಂಬಂಧವಿನ್ನೇನು ।
ಕುಮತಿ ದುರಾತ್ಮನೆ ಮಮ ಕ್ಷೇತ್ರದಿ ನೀ । ಪ್ರಮತ್ತ ಬೀಜಾರೋಪಿಸಿದೆ ।
ರಮಿಸಿದ ಪಾಪಕೆ ಸುರಮಣ ಪ್ರಾಯಶ್ಚಿತ್ತ । ಅಮಲ ಕಾಯನ ದೋಷಿಸಿವೆ ॥ ೧೦ ॥

ಎನೆ ನುಡಿದನು ನಾವನಿಮಿಷರು ನೀ । ಮನುಜಳು ನಿಮ್ಮ ಭಾಗ್ಯಕ್ಕೆಣೆಯೆ ।
ಎನಲು ಕೋಪಿಸಿದಳವನಿಜಲಾನಿಲವಾಯು । ಘನ ದಿಗ್ಪತಿಗಳು ಹೊಣೆಯೆ ॥
ಇನಶಶಿಗಳ ವಿೂರಿನಿತು ಪಾಪವನಾ । ಮನಃ ಪೂರ್ವಕ ಮಾಡಿದರೆ ।
ಇನಜನು ಶಿಕ್ಷಿಸಲೆನಗೆಂದಳು ನಮ್ಮ । ಜನನಿ ರೋದಿಸಿದಳು ಹೆದರೆ ॥ ೧೧ ॥

ಮದಕರಿ ನಳಿನಿಯು ಕದಡಿ ಕಿಡಿಸಿದಂ । ದದಿ ಕಶ್ಮಲ ನಿನ್ನ ಸ್ಪರುಶ ।
ಬದುಕೆನ್ನ ಪಾತಿವ್ರತ್ಯ ಕದಲಿತು ನಿನ್ನನು । ಮಧುಹರ ಸದೆವ ಸರ್ವೇಶ ॥
ಹೆದರಿದನವ ಶಾಪದ ಭಯವಿಡಿದನು । ವದಿಸಿದ ಬಲು ವಿನಯದಲಿ ।
ಮದಿಯ ಬೀಜದಿ ಸುತನುದಿಸುವ ಬಲವಾ । ರಿಧಿ ಬಲು ಶೂರನೆನಿಸುತಲಿ ॥ ೧ ॥

ಅನೃತ ನುಡಿಯೆ ನಾ ವನಜನಯನೆ ಕೇ । ಳೆನಲು ಜನನಿ ಸಂತೈಸಿ ।
ನಿನಬೀಜ ದುಷ್ಟವು ಅನಿಮಿಷಜನರಿಪು । ಭಿನ್ನ ವೃತವು ಹರಿದ್ವೇಷಿ ॥

ಎಂದೆನೆ ಉಗ್ರದಿ ಬೆಂದನು ಸಾಣೆಯು । ಹೊಂದಿದ್ದ ಕತ್ತಿಯು ವಿಡಿದ ।
ಇಂದೇ ಆನಕದುಂದುಭಿ ಸ್ತ್ರೀಸಹ । ಕೊಂದೆನೆನುತ ಖಳ ನುಡಿದ ॥೩॥
ನಾರದಮುನಿಯು ನಿವಾರಿಸಿದನು ಮುಂದೆ । ಕಾರಣವುಂಟುಳುಹೆನಲು
ವಿೂರದೆ ಆಜ್ಞೆಯು ಶೌರಿಯು ಸತಿಸಹ । ಕಾರಾಗ್ರಹದಿ ಬಂಧಿಸಲು ॥
ಕ್ರೂರನು ಲೋಹದ ಕಾದುಕರಿಗೆ ಹೇಳಿ । ನಾರಾಯಣಸ್ಮರಣೆಯಿಂದ ।
ಹಾರಿದ ಗಗನಕೆ ಮಾರಕ ಕೇಶಿಗೆ । ಧಾರುಣಿಪತಿ ನೇಮಿಸಿದ ॥ ೪ ॥
ಎಲೆ ಕೇಶಿಯೆ ಗೋವಳರ ಪಳ್ಳಿಗೆ ಹೋಗು । ಅಲಸದೆ ಕೃಷ್ಣಬಲರನು ।
ಕೊಲು ಗಹನರವರ್ ಬೆಳೆದರು ನಂದನ । ನಿಲಯದಿ ಮತ್ತವರನ್ನು ॥
ಸಲೆ ಚಾಣೂರ ಕೌಸಲ ಮುಷ್ಟಿಕಾವಮಾತ್ಯ । ಹಲ ಹಸ್ತಿಪರನು ಕರೆಸಿದ ।
ಬಲವಾಸುದೇವರ ಕೊಲುವ ಉಪಾಯವ । ಕಲಿ ಕಂಸನು ನೇಮಿಸಿದ ॥ ೫ ॥
ಕೇಳಿರೋ, ನಮ್ಮಾಪ್ತಾಳುಗಳಿರಾ ನೀವು । ಕೇಳಿ ಬಲ್ಲಿರಿ ನಂದವ್ರಜದಿ ।
ಕಾಲರೂಪರು ಶೌರಿ ಬಾಲಕರಿಬ್ಬರು । ಬಾಲ ಅಚ್ಯುತಬಲರಿತರು ॥
ಹೇಳಲೇನೆಮ್ಮಯು, ಮೇಲಾಳುಗಳ ಗೋ । ಪಾಲಕರು ಸವರಿದರು ।
ನಾಳೆಗೆ ಕರೆಸುವೆ ಮೇಲವರರ್ಥವ । ಆಲೋಕಿಸಲ್ಯಾದವರು ॥ ೬ ॥
ರಾಮಕೃಷ್ಣರು ಬಲು ಕೋಮಲರೆನ್ನದೆ । ನೇಮಿಸಿ ಮಲ್ಲಲೀಲೆಯಲಿ ।
ಆ ಮಹಾ ಖಳರ ನಿರ್ನಾಮವ ಮಾಡಿರಿ । ಸ್ವಾಮಿದ್ರೋಹಿಗಳ ಶೀಘ್ರದಲಿ ॥
ಹೇಮಮಂಚಗಳ ಮಹಾಮಲ್ಲರ ರಂಗ । ಗ್ರಾಮದವರು ನೋಡುವಲಿ ।
ಹೇ ಮಹಾಮಾತ್ಯನೆ ಧೀಮಂತನು ನೀ । ನೇಮಿತ ಕಾರ್ಯ ಮಾಡುವಲಿ ॥ ೭ ॥
ಕುವಲಯಪೀಡನ ಕವಾಟದಿ ನಿಲಿಸಿರಿ । ಅವರಿಬ್ಬರು ಬರಲಾಗೆ ।
ತವಕದಿ ಕೊಲಿಸುವ ಹವಣದಲಿರಿ ನಿ । ಮ್ಮವರೆಲ್ಲರು ಒಂದಾಗಿ ॥
ಅವನಿಪ ಹೀಗೆನಲವರೆಂದರು ಹೇ ಪ್ರಭೊ । ತವ ಭಗಿನೀಸುತರವರು ।
ಕುವರರ ಕೊಂದರೆ ಭುವಿಯಲಿ ಅಪವಾ । ದವು ಬಹುದೆಂದು ನುಡಿದರು ॥ ೮ ॥

ಈ ಪರಿ ನುಡಿಯಲು ಭೂಪತಿಯೆಂದನು । ನಾ ಪುತ್ರನಲ್ಲುಗ್ರಸೇನಗೆ ।
ನಾ ಪುಟ್ಟಿದೆ ಗಂಧರ್ವಗೆ ರಾಜನ । ರೂಪದಿ ತೋರಿದ ತಾಯ್ಗೆ ॥
ಆ ಪತಿವ್ರತೆ ಋತುರೂಪ್ಯಾಗಿದ್ದಳು । ಭೂಪತಿಯೆಂದು ಕೂಡಿದಳು ।
ಕಾಪಟ್ಯವರಿಯದೆ ತಾ ಪಶ್ಚಾತ್ ಸಂ । ತಾಪದಿ ಬಲು ಬಳಲಿ
ದಳು ॥ ೯ ॥

ದ್ರುವಿಳ ಗಂಧರ್ವನ ಕುವರನು ನಾ ಭೋಜ । ಚವು ಸಂಬಂಧ
ವಿನ್ನೇನು ।
ಕುಮತಿ ದುರಾತ್ಮನೆ ಮಮ ಕ್ಷೇತ್ರದಿ ನೀ । ಪ್ರಮತ್ತ ಬೀಜಾರೋಪಿ
ಸಿದೆ ।
ರಮಿಸಿದ ಪಾಪಕೆ ಸುರಮುಣ ಪ್ರಾಯಶ್ಚಿತ್ತ । ಅಮಲ ಕಾಯನ
ದೋಷಿಸಿದೆ ॥ ೧೦ ॥

ಎನೆ ನುಡಿದನು ನಾವನಿಮಿಷರು ನೀ । ಮನುಜಳು ನಿಮ್ಮ ಭಾಗ್ಯಕ್ಕೆ
ಣೆಯೆ ।
ಎನಲು ಕೋಪಿಸಿದಳವನಿಜಲಾನಿಲವಾಯು । ಘನ ದಿಗ್ಪತಿಗಳು
ಹೊಣೆಯೆ ॥
ಇನಶಶಿಗಳ ವಿೂರಿನಿತು ಪಾಪವನಾ । ಮನಃ ಪೂರ್ವಕ ಮಾಡಿದರೆ ।
ಇನಜನು ಶಿಕ್ಷಿಸಲೆನಗೆಂದಳು ನಮ್ಮ । ಜನನಿ ರೋದಿಸಿದಳು ಹೆದರೆ
॥ ೧೧ ॥

ಮದಕರಿ ನಳಿನಿಯು ಕದಡಿ ಕಿಡಿಸಿದಂ । ದದಿ ಕಶ್ಮಲ ನಿನ್ನ ಸ್ಪರುಶ ।
ಬದುಕೆನ್ನ ಪಾತಿವ್ರತ್ಯ ಕವಲಿತು ನಿನ್ನನು । ಮಧುಹರ ಸದೆವ ಸರ್ವೇಶ ॥
ಹೆದರಿದನವ ಶಾಪದ ಭಯವಿಡಿದನು । ವದಿಸಿದ ಬಲು ವಿನಯದಲಿ ।
ಮದಿಯ ಬೀಜದಿ ಸುತನುದಿಸುವ ಬಲವಾ । ರಿಥಿ ಬಲು ಶೂರನೆನು
ತಲಿ ॥ ೧೨ ॥

ಅನೃತ ನುಡಿಯೆ ನಾ ವನಜನಯನೆ ಕೇ । ಳೆನಲು ಜನನಿ ಸಂತೈಸಿ ।
ನಿನಬೀಜ ದುಷ್ಟವು ಅನಿಮಿಷಜನರಿಪು । ಭಿನ್ನ ವೃತನು ಹರಿದ್ವೇಷಿ ॥

ಇನಿತು, ಕರುಣಾ ಶೂನ್ಯನ ನಿರ್ಘೃಣಿ ಕ್ರೂರ । ಘನಗುರುಜನದ್ವಿಜ ದ್ರೋಹಿ ।
ಅನುದಿನ ಉನ್ಮಾರ್ಗನು ಕಂಟಕನು ಸ್ವ । ಜನಜನರಿಗೆ ಕಾಳಾಹಿ ॥ ೧೩ ॥

ಜನನಿಯು ನುಡಿಗೇಳ್ದನು ಗಂಧರ್ವನು । ಘನಶಾಪಕಂಜ್ಯೋಡಿದನು ।
ನನಗೆ ಸ್ವಜನವಿಲ್ಲ ಜನನಿ ಬಸಿರ ಹೊಂದಿ । ಜನಿಸಿದ ಮೊದಲಾಗಿನ್ನು ॥ ೧೪ ॥

ಅನಿಮಿಷಮುನಿ ಪೇಳಿದನು ಉಪದೇಶವ । ಘನಗುರುನುಡಿ ಪುಸಿಯಲ್ಲ ।
ಎನಗಾಪ್ತರು ನೀವು ಮನಸಿನಕಾರ್ಯವ । ಅನುಮಾಸಿಲ್ಲದೆ ಮಾಡಿಯೆಲ್ಲಾ ।
ಜನಕುಗ್ರಸೇನನು ಘನದುರ್ಬುದ್ಧದೇವ । ಕನು ನನಗಾಪ್ತ ವಿರುದ್ಧಾ ।
ಆನಕದುಂದುಭಿ ಕಿತವನು ಮತ್ತೀನು । ನನ್ನ ಪಿತ ಗಂಧರ್ವ ಸಿದ್ಧಾ ॥ ೧೫ ॥

ಬಲಭದ್ರ ಅಚ್ಯುತರಲಸದೆ ಕೊಲ್ಲಿರಿ । ಬಲು ಲೇಸಘ ನಿಮಗಿಲ್ಲ ।
ಕೊಲಲು, ಕಲಿಸಿ ಕುವಲಯಪೀಡನಿಗೆ । ಎಳೆಯರು ಲಘುತರರಲಾ ॥
ಲಲನೆ ಗೌರೀಶನ ಬಲು ಭಜಿಸಿರಿ ಮುಂದೆ । ಗೆಲುವು ಭಾಗ್ಯೋದಯವಕ್ಕು ।
ಫಲಕುಸುಮಾವಳಿಯಲಿ ನರಮೇಧದ । ಬಲಿಗವರರ್ಪಿಸಬೇಕು ॥ ೧೬ ॥

ಕಲಿ ವಸುದೇವನು ಕುಲೀನೆಯು ದೇವಕಿ । ಸಲೆ ಉಗ್ರಸೇನ ಗೋವಳರು ।
ಬಲು ಯಾದವಜಮು ಲಲಿತೋತ್ಸವವನು । ಕುಳಿತು ನೋಡಲಿ ನಲಿದವರು ॥
ಎಳೆಮಕ್ಕಳ ವಧೆಗಳ ನೋಡಲಿ, ಕಂಗಳ । ತುಂಬ ಜರಠರು ನೆರೆದು ।
ಕೆಲವು ಜನಪದವು ಬಿಲುಹಬ್ಬದ ಬಗೆ । ಗಳ ನೋಡುವರಿಗೆ ಅರಿದು ॥ ೧೭ ॥

ಹೇ ಮಹಾಮಾತ್ಯನೆ ಈ ಮಹಾಕಾರ್ಯವ । ನೀ ಮಾಡು ನಿನಗೆ ಮಂಗಳವೆ ।

ಆ ಮತ್ತ ವಾರಣೋದ್ದಾಮನ ನಿಲ್ಲಿಸು । ಹೈಮರಂಗದ್ವಾರ ನಡುವೆ ।
ರಾಮನ ನೀರದಶಾಮನ ಸೀಳಿಸು । ನೇಮಿಸು ಚತುರ್ದಶಿ ದಿವಸ ।
ಪ್ರೇಮದ ಜಿಲುಹಬ್ಬ ಸೋಮಧರನ ಪ್ರೀತಿ । ಈ ಮೇಧ ಪಶುದ್ವಯ
ಹಿಂಸೆ ॥ ೧೮ ॥

ಅಕ್ರೂರ ಮಂತ್ರಿಯು ಕನವಿಡಿದು ಹುಸಿ । ನಕ್ಕು ಹೇಳಿದ ಭೋಜಪನು
ಸೊಕ್ಕಿದ ಶೌರಿಯ ಮಕ್ಕಳ ವ್ರಜದಲಿ । ಆ ಕೃಷ ರಾಮರಿಬ್ಬರನು ॥
ಗಕ್ಕನೆ ಧನುರ್ಯಾಗಕ್ಕೆ ಕರೆದು ತಾ । ಈ ಕಾರ್ಯ ಗೌರವ ನಿನಗೆ ।
ನೀ ಕ್ರುದ ನಲ್ಲೆಮಗೆ ಕೇವಲಾಪ್ತನು । ಆ ಕೃಷ್ಣನಿಂದ್ರಗೊಲಿದಂತೆ
॥ ೧೯ ॥

ನಂದವ್ರಜಕೆ ಪೋಗೊಂದಿಷ್ಟು ಕಾಯದೆ । ನಂದನರಿಬ್ಬರ ಕೂಡಿ ।
ಸ್ಯಂದನವೇರಿಸಿ ಮಂದಮತಿಯೆನಿಪ । ನಂದಗೋಪನ ಒಡಗೂಡಿ ॥
ಎಂದಿಗ ಕೊಡುವ ಕರದೆಗೆದುಕೊಂಡು । ಮಂದಿಯು ಸಹ ಉತ್ಸವಕೆ ।
ನಿಂದಿರದೆ ಬಾಯೆಂದನು ಮತ್ತೆ ಮ ದಾಂಧನು ನಿಜಮರಣಕ್ಕೆ ॥೨೦॥

ಕೇಳಿಲೆ ದಾನವಪತಿ ಲಕ್ಷ್ಮೀಶನ । ಆಳುಗಳೆನ್ನ ವೈರಿಗಳು ।
ಕಾಲಕಲ್ಪೇಭನ ಕೈಲಿ ಕೊಲಿಸುವೆನು । ಮೇಲೆ ಚಾಣುರಮಲ್ಲಸಿಡಿಲು ।
ಬೀಳಲು ಉಳಿವರೆ ಬಾಲಕಕಿತವರು । ಖೂಳ ಕಿತವ ವಸುದೇವ ।
ಸಾಲುಯಾದವರು ಹೃಚ್ಛೂಲರು ವೃಷ್ಣಿಭೋಜ । ಪಾಳಯಕುಕುರ
ದಾಶಾರ್ಹ ॥ ೨೧ ॥

ನೃಪಭ್ರಾತಾ ಆಹುಕ ಕಪಟಿಯು ದೇವಕಾ । ನೃಪಕಾರಿಗಳ ಕೊಲಿಸುವೆ।
ಸುಪೃಥಿವಿಯಾಳುವೆ ನೃಪಮಾಗಧಗುರು । ಕೃಪೆಯುಂಟೆನಗೆ ಒಲಿ
ಸುವೆ ॥

ಆ ಪರಶಿವನು ನಮಗಪರ್ಮಿತ ಮಿತ್ರನು । ರಿಪುಹರ ಬಾಣಶಂಭರರು ।
ಕುಪಿತ ವಿವಿಧ ಭೌಮಿಉಪಕಾರಿಗಳು ನಮ । ಗೆ ಪರಮಹಿತರು ಸಮ್ಮ
ತರು ॥ ೨೨ ॥

ಸುರಪಕ್ಷದವರ ತರಿವೆ ಸಾಮ್ರಾಜ್ಯನ । ಪರಮ ಸುಖದಿ ಮಾಡುವೆನು ।
ಹರಿಬಲರಿಬ್ಬರ ಉರುಶೀಘ್ರದಿ ನೀನು । ಕರೆತಂದರೆ ವಧಿಸುವೆನು ॥

ಅರಸನ ನುಡಿಗುತ್ತರವನು ಕೊಟ್ಟನು । ಅರಿಯೆ ನಾ ದೈವದ ಗತಿಯ ।
ಅರಿದೆನು ನಿನ್ನ ಪುನರ್ದುರುಷವ ಸಿದ್ಧ್ಯಸಿ । ದ್ಧೈರಡು ಸಮಾನದ
ಮತಿಯ ॥ ೨೩ ॥

ಪುರುಷಗೆ ಮಹತ್ಫಲ ಬರೆ ಮಾತೇನೋ ನಿನ್ನ । ನಿರೋಪದಿ ಪ್ರಜಕ್ಕೈ
ದುವೆನು ।
ಪರಮಮನೋರಥ ದೊರೆಕೊಂಬುದು ಬಲು । ಅರಿದೆನುತಲಿ ತೆರಳಿ
ದನು ॥
ದುರುಳರು ಉಚ್ಚಪದಕೆ ಕರವಿಕ್ಕಲು। ಹರಿಯು ಸಹಾಯನಾಗುವನೇ ।
ಸುರಸಂಪದ ಸ್ಥಿರ ಸುರರ ಸಿರಿಯು ಉರಿ । ನೆರೆಹೊಂದದಿಹುದು
ನಿದಾನಾ ॥ ೨೪ ॥

ಸಿರಿ ಪ್ರಸನ್ನವೆಂಕಟ ಗಿರಿಪತಿಕೃಷ್ಣನ । ದರುಶನ ಸುಕೃತದಫಲವು ।
ದೊರಕೆ ನಮ್ಮಯ ಗುರುಹಿರಿಯರ ತಪವೆಂದು । ಚಿರವೆಂದು ಗ್ರಹಕ್ಕೈದಿ
ಬರಲು ॥
ಹರುಷ ದುಃಖಕ್ಕೆ ಶ್ರೀಹರಿ ಪ್ರೇರಕನೆಂದು । ಇರುಳೊಂದು ಹರಿಸ್ಮರ
ಣೆಂದ ।
ಪರಮಭಾಗವತಕ್ರೂರನಿದ್ದನು ತನ್ನ । ವರ ಮಂದಿರದಲಿ ಚಂದ ॥೨೫॥

ಶಬ್ದಾರ್ಥ:— ಆನಕದುಂದುಭಿ=ವಸುದೇವ. ನಿಲಯ=ಮನೆ. ಹಸ್ತಿಪ=ಮಾವುತ ಆವಸಥಃವ=ಆವರಸಾಮರ್ಥ್ಯವನ್ನು. ಕವಟ=ಬಾಗಿಲ. ಋತುರೂಪಾಗಿದ್ದಳು=ಋತು ಕಾಲವು ಪ್ರಾಪ್ತವಾಗಿತ್ತು, ಮತ್ತು ಆಕೆಯು ರೂಪವತಿಯಾಗಿದ್ದಳು. ನಿರ್ಘೃಣಿ=ನಿರ್ದಯಿ. ಮೇಧ=ಯಜ್ಞ. ಕಾಯದೆ=ತಡಮಾಡದೆ. ಸ್ಯಂದನ=ರಥ. ಕಿತವರು=ಮೋಸಗಾರರು. ಸಾಳಯ=ಮನೆ. ಕುಕುರ=ನಾಯಿ. ಸಾಂಗತ್ಯ ವಿಭೇದ. ೬೪೪ ನುಡಿಗಳು.

---

೫೨

ರಾಗ ಸಾವೇರಿ — ಜಕ್ಕಣಿತಾಳ

ಹರಿಯ ಪಾದಾಬ್ಜಹೊಕ್ಕ । ವರಿಗೆ ದುರಿತದ ।
ಸ್ಪರುಶವಿಲ್ಲ ಹರಿಬಲರನು । ಮರುಳ ಕರೆಸಿದಾ ॥ ಪಲ್ಲ ॥

ದಾನವಪತಿಯು ಕಳಿಸಿ ಕಂಸ ಹೀನ ಕೇಶಿಗೆ।
ತಾಸಿರೋಪಿಸಿದನು ತನ್ನ ಹಾನಿ ಬಯುಕೆಗೆ॥
ನೀನು ಹೋಗು ವ್ರಜಕೆ ಶೌರಿ। ಸೂನುಯುಗ್ಮರ।
ಪ್ರಾಣಹರಣ ಮಾಡಿಲ್ಲಿಗೆ। ಬಾ ನೀ ಸತ್ವರ ॥೮॥

ಎನಲು ಪತಿತ ವ್ರಜಕೆ ಬಂದಾ। ಘೃಣಿಹಯಾದನು।
ಘನಸಟಾಂಕ ವಿಮಾನಾವಳಿಯಾ। ಕ್ಷಣ ಕೆಡಹಿದನು॥
ಕೊನೆಖುರದಲಿ ಕೆದರಿ ಕೆದರಿ। ಅವನಿ ಸೀಳಿ ತಾ।
ವಿನಯ ಜಂಗುಳಿಹೊಕ್ಕನು ಹಿಂಗಾ। ಲಿನಲ್ಲಿ ಒದೆಯುತ ॥೧॥

ಹೇಷಾರವದಿ ಮುಖಕೋಟರದಿ। ಘೋಷಿಸಿ ಬೆದರಿಸಿ।
ದೋಷಾಗ್ನಿನೇತ್ರಜ್ವಲಿಸಿ ಹಿಳ್ಳಿಸಿ। ನಾಶಿಕದ್ವಯಬ್ಬರಿಸಿ॥
ತ್ರಾಸಿಸಿದಾ ಖಳಘೋಷದಿ ಜೀವರ। ಬೀಸಿ ಪುಚ್ಛಾಗ್ರದಲಿ।
ಘಾಸಿಸಿ ಮೇಘಂಗಳೋಡಿಸಿದನು। ಕೇಶಿ ಭೂಕಂಪಿಸಿ ॥೨॥

ಕೊಬ್ಬಿನಖಳನು ತನ್ನ ಸಮಾನರ। ನೊಬ್ಬರ ಕಾಣದಾದಾ।
ಅಬ್ಧಿಶಯುದ ಹಯುನ ತ್ರಾಣದ। ಅಬ್ಬರ ನೋಡಿದಾ॥
ಹೆಬ್ಬಾಯದೆರೆದು ಆಕಾಶನುಂಗುವ। ಕೊಬ್ಬಿಲಿ ಓಡಿಬಂದಾ।
ಅಬ್ಧಿಶಯನಗೆ ಅಭಿಮುಖನಾಗಿ। ಶಬ್ದವ ಮಾಡಿದಾ ॥೪॥
ಹಿಂಗಾಲ ಹಾರಿಸಿ ಹರಿಯನೊದ್ದರೆ। ರಂಗ ವಂಚಿಸಿವನು।
ಮಂಗಳ ಮೂರುತಿ ಮರುಳೆ ಖಳನ। ಅಂಘ್ರಿಯ ಹಿಡಿದನು॥
ತುಂಗವಿಕ್ರಮ ತುರಂಗವ ಭ್ರಮಿಸಿ ವಿ। ಹಂಗಪ ಬುಜಂಗನನು।
ಭಂಗಿಸಿದಂತೆ ನೂರುಬಿಲ್ಲಪ್ರಮಾಣ। ಹಿಂಗದೆ ಒಗೆದನು ॥೫॥
ಮತ್ತವನೆದ್ದನು ಲಬ್ಧಸಂಜ್ಞದಲಿ। ಸತ್ವರ ಕಾವಿ ಬಂದಾ।
ದೈತ್ಯಾರಿ ತನ್ನ ತೋಳೊಂದನು ಖಳನ। ವಕ್ತ್ರದಿ ಹೊಗಿಸಿದ॥
ಹುತ್ತಿನೊಳುರುಗ ಹೋಗುವ ತೆರದಿ। ಹಸ್ತವ ವರ್ಧಿಸಿದ।
ಬಿತ್ತರಿಶ್ಯವನ ಗಾತ್ರವ ಕಾದುಕ್ಕಿ। ನ ತೆರದಿ ಹಿಸಿದಾ ॥೬॥
ಪದುಮನಾಭನ ಭುಜಸ್ಪರ್ಶಾಗ್ನಿಲಿ। ಉದುರಿ ದಂತಗಳು।
ಆದೇಹ್ಯ ಆಮಯುಪೇಕ್ಷಿಸೆ ವರ್ಧಿಸಿ। ದಂತಾಗಿ ಬಾಧಿಸಲು॥

ಸ್ವೇದಾಂಗನಾಗಿ ತೇಲುಗಂಣಿಲಿ ಬಿಟ್ಟನು । ಮೇದಿನಿಲಂಘ್ರಿಚಾಚಿ ।
ಛೇದಿಸಿದ ಕರ್ಕಟಿಕಿ ಫಲದಂತೆ । ಆದನು ವೈರಿಯು ಬಿಚ್ಚಿ ॥ ೭ ॥
ಯಮಸದನಕೆ ಹೋದನು ದುಷ್ಟನು । ಅಮರರಂಬರದಿ ।
ರಮೆಯರಸನ ಸ್ತೋತ್ರದಿ ಪೂಮಳೆ । ಗರೆದರು ಮುದದಿ ॥
ಗೋಮತಿ ಗೋಮಕ್ಕಳೊಡನೆ ಹೊಕ್ಕನು । ಶ್ರೀಮಾಧವಾವ್ರಜವಾ !
ಅಮರಮುನಿ ನಾರದನು ಬಂದನು । ಹೇಳಲು ರಹಸ್ಯವ ॥ ೮ ॥
ಸ್ವಕೀಯ ಕರ್ತವ್ಯ ಮಾಡುವೆನೆನುತ । ಅಕ್ಲಿಷ್ಟ ಕರ್ಮನಿಗೆ ।
ಏಕಾಂತ ಸೇವೆಗೆ ಭಾಗವತೋತ್ತಮ । ಬೇಕಾಗಿ ಬಂದನಾಗೆ ॥
ಲೋಕೇಶ್ವರೇಶ್ವರ ಬಂದ ನಾರದಗೆ । ಬೇಕಾರ್ಹಣ ಮಾಡಿದನು ।
ಪೋಕ ಕಂಸನ ಕುಚೇಷ್ಟೆಯ ಹೇಳಿದ । ತ್ರಿಕಾಲಜ್ಞಾನಿ ತಾನು ॥ ೯ ॥
ಅಶುಭಹರ ಸದಾ ಶುಭದಾಯಕ । ದೋಷದೂರ ಮುಕುಂದಾ ।
ವಾಸುದೇವಾಚ್ಯುತಾ ಶೇಷಕಲ್ಯಾಣ ಗು । ಣಾಶ್ರಯ ಶ್ರೀಗೋವಿಂದಾ ।
ಭಾಸುರ ವೈಕುಂಠವಾಸ ಶ್ರೀನಿವಾಸ । ಕೇಶವ ವಿಶ್ವಕರ್ತಾ ।
ಪ್ರಸನ್ನ ವೆಂಕಟಾದ್ರೀಶ ಸರ್ವೇಶ್ವರ । ಭೂಸತಿ ಭಾರಹರಾ ॥ ೧೦ ॥

ಶಬ್ದಾರ್ಥ:—ಸತ್ವರ=ಬೇಗ. ಘೃಣಿ=ಭಯಂಕರವಾದ. ಸಟಾ=ಆಯಾಲ. ಸಟಾಂಕ=ಕುದುರೆ. ಕೋಟರ=ಹೊದೆ. ಹಿಳ್ಳಿಸಿ=ಹಿಗ್ಗಿಸಿ. ವಿಹಂಗಪ=ಗರುಡ. ಲಬ್ಧಸಂಜ್ಞದಲಿ=ಎಚ್ಚರವನ್ನು ಹೊಂದಿ. ವಿಸ್ತರಿಸಿ=ವಿಸ್ತರಿಸಿ. ಆಮಯು=ಹೊಲಸು ರೋಗ. ಸ್ವೇದ=ಬೆವರು. ಕರ್ಕಟಿಕಫಲ=ಖರಬೂಜಹಂಣು. ಅಕ್ಲಿಷ್ಟ=ಯೋಗ್ಯ. ಬೇಕಾರ್ಹಣ=ಬೇಕಾದಪೂಜೆ. ಸಾಂಗತ್ಯವಿಭೇದವು. ೭೩೨ ನುಡಿಗಳು.

---

೫೩

ರಾಗ ಕನ್ನಡ ಕಾಂಬೋದಿ ಝಂಪೆ ತಾಳ.

ಸುಜ್ಞನಾರದ ತ್ರಿಕಾಲಜ್ಞ ಹೇಳಿದನು ಸ । ರ್ವಜ್ಞ ಸರ್ವೋತ್ತಮ ಶ್ರೀಹರಿಗೆ ।
ಆಜ್ಞದೈತ್ಯರ ತರಿವ ಭಿಜ್ಞ ಬುಧರನು ಹೊರೆವ । ಜಿಜ್ಞಾಸೆ ಮುಂದಾಗೆಬ್ಯಾಗೆ ॥ ಪಲ್ಲ ॥

ಹೇ ಕೃಷ್ಣ ಕೃಷ್ಣ ಭಗವಾನಪ್ರಮೇಯ ತ್ರೈಲೋಕೇಶ ಯೋಗಿ
ಜನಪೂಜ್ಯ ।
ನಾಕಜನ ನಾಕಪ ಪಿನಾಕಿ ವಿಪ ಫಣಿಪ ವಿಧಿ । ಲೋಕವಾತಾರ್ಚಿ
ತಪದಾಬ್ಜಾ ॥
ಶ್ರೀಕಾಂತ ಸ್ವಸುಖಾರ್ಣಪೂರ್ಣ ಜ್ಞಾನೈಶ್ವರ್ಯ । ದಾಕರನೆ ಸ್ವೇ
ಚ್ಛಾಲೀಲೆಯಲಿ ।
ಲೋಕಕೆ ಸೃಷ್ಟಾರ ಪಾತಾರ ಹಂತಾರ । ಏಕ ನಿಯಂತಾರ ಬಲಧಿ ॥ ೧ ॥

ಧರ್ಮರಕ್ಷಣೆಗವತರಿಸಿ ನೀ ಭುವಿಯಲ್ಲ್ಯಾ । ಧರ್ಮ ಕುಲನಾಶಕ
ಸದ್ದೀಕ್ಷಾ ।
ಧರ್ಮವಿದ ಸತ್ಯಸಂಕಲ್ಪ ಗೋಭೂಸುರರ । ಧರ್ಮ ಸಂರಕ್ಷಕದಕ್ಷ ॥
ಧರ್ಮಕೆ ವಿರೋಧಿ ದೈತ್ಯರ ಕುಲಕೆ ಎಣಿಕಿಲ್ಲ । ಮರ್ಮಜ್ಞ ದುಷ್ಕರ
ಮಥಿಸುವೆ ।
ಪೆರ್ಮೆ ಮಹಾ ಶಂಖಾರಿ ಧಾರಕಾಚ್ಯುತ ಹರೇ । ಕರ್ಮಿಗಳ ವಧಿಸಿ
ನಡುಗಿಸುವೆ ॥ ೨ ॥

ದಿಷ್ಟ್ಯಾ ಹಂತನಾದ ಹಯಕಾಯ ಮದಸೊಕ್ಕಿ । ವೃಷ್ಣಿಪತೆ ನಿನ್ನ
ಕೈಯಿಂದ ।
ದುಷ್ಟನ ಹೇಷತ್ಕಾರಕೆ ಅಂಜಿ ಸುರರೋಡಿ। ಕಷ್ಟಿಸುತಿದ್ದರೆಲ್ಲ ಗೋವಿಂದ॥
ತುಷ್ಟಿಬಡಿಸಿದೆಯವರ ಚಾಣೂರ ಮಲ್ಲಸಲೆ । ಮುಷ್ಟಿಕಾಖ್ಯರನು
ಮರ್ದಿಸುವೆ ।
ಭ್ರಷ್ಟಹಸ್ತಿಪ ಕಂಸನ ವಧಿಸಿ ಅವನನುಜ । ರಷ್ಟರನು ಬಲಗ್ಞೀ
ಕೊಲ್ಲಿಸುವೆ ॥ ೩ ॥

ನಾಳೆನಾಡಿದು ಹೋಗಿ ಸ್ವಾಮಿ ನೀ ಮಧುರೆಗೆ । ಖೂಳ ಕಂಸನ
ಬಿಲ್ಲ ಮುರಿವೆ ।
ಮೇಲೆ ಕಂಸನ ಮಿತ್ರ ಜಾಲ ಕುಜ ಶಂಖ ಮುರ । ರೇಳಿಗೆ ತರಿವೆ
ನಿಜರ ಹೊರೆವೆ ॥

ಬಾಲೆ ಸತ್ಯಾದೇವಿಗಮರತರುವೆ ದಂ । ಭೋಳಿಯ ಅಹಂಕಾರ
ಖಂಡಿಸುವೆ ।
ಹೇಳಲೇನ್ ಕಣ್ಣಾರೆ ಕಾಂಬೆನಾ ನಿನ್ನ ಶುಭ । ಲೀಲೆಯನು ವೀಣೆ
ವಿಡಿದ್ಹೇಳುವೆ ॥ ೪ ॥
ನೀ ಸತ್ಯಭಾಮೆಯು ಸ್ಯಮಂತಕ ಸಹದಿ ಗೆಲ್ವೆ । ಲೇಸಾಗಿ ದ್ವಾರ
ಕೆಯನಾಳುವೆ ।
ಭೂಸುರಗೆ ಸತ್ತ ಮಗನಿತ್ತು ಪೌಂಡ್ರಕ ಪಾಪಿ । ದ್ವೇಷಿಯನು
ಹೊಡೆವ್ಯೈಶಸು ಪಡೆವೆ ॥
ಕಾಂತಿಯನು ದೀಪಿಸುವೆ ಡೊಂಕಿದ್ಧಲ್ಲನು ಸೀಳ್ವೆ । ನೀ ಶೀಘ್ರ ಚೈದ್ಯನ
ಮಥಿಸುವೆ ।
ಲೆಸೀವೆ ಪಾರ್ಥರಿಗೆ ರಾಜಸೂಯಜ್ಞದಲಿ । ಏಸೊಂದು ವಿಕ್ರಮ ಪ್ರಕ
ಟಸುವೆ ॥ ೫ ॥
ದ್ವಾರಕೆಯ ನಗರದಲಿ ಭೂರಿ ಅದ್ಭುತಕರ್ಮ । ತೋರಿಸುವೆ ಯಾದ
ವರ ಹೊರೆವೆ ।
ನಾರಾಯಣ ಎಂತು ಕಾಂಬೆ ಕಣ್ಣಾರೆ ತವ । ಚಾರುಚಾರಿತ್ರ್ಯಯ ಕೀರ್ತಿ
ಸುವೆ ॥
ಶ್ರೀರಮಣ ನಿಮ್ಮ ಗುಣ ವೈಕುಂಠಪ್ರೀಯಗೆ । ಸಾರುವವು ಕವನ
ಜ್ಞಾನವನು ।
ಕ್ರೂರದೈತ್ಯರಿಗೆಲ್ಲ ಕಾಲರೂಪನು ಭುವಿಯು । ಭಾರಕಾಕ್ಷೋಹಿಣಿಗ
ಳನು ॥ ೬ ॥
ರಣಮುಖದಿ ಸಂಹರಿಪೆ ಅರ್ಜುನನ ರಥವೇರಿ । ಅನಿಮಿಷರ ಕಾರ್ಯ
ಕಧ್ಯಕ್ಷ ।
ಘನಶುದ್ಧ ವಿಜ್ಞಾನಸಮೃದ್ಧವಿಗ್ರಹ । ಗುಣತ್ರಯಪ್ರವಾಹಕಾ
ಬ್ಜಾಕ್ಷ ॥
ವನಿತೆ ಮಾಯೆಯು ವಶವಾಗಿ ಆಶ್ರಯಿಸಿಹಳು । ಗುಣವೆತ್ತಿ ಕರವ
ಮಾಡುವಳು ।
ನಿನ ಪ್ರೇರಣೆಯಲಿ ವರ್ತಿಪಳು ನೀನೆ ಕ್ರೀಡೆ । ಯನು ವಾಳ್ಪೆ
ಮಾನಿಸಜನರೊಳು ॥ ೭ ॥

ನಮೊ ನಮೋ ಯಮುನ್ಯಷ್ಣಿ ಸಾತ್ವತರಧುರ್ಯನೆ । ನಮೊ ನಮೋ
ವಿಶ್ವಕೆ ವರ್ಯನೆ ।
ನಮೊ ನಮೋ ನಿರ್ಜರಕ್ಷೇಮಕಾರಣ ಕೃಷ್ಣ । ನಮೊ ನಮೋ
ಎಂದ ಮುನಿಶ್ರೇಷ್ಠ ॥
ರಮೆಯರಸನಂ ಬಹಳ ತುತಿಸಿ ವಂದಿಸಿ ನಡೆದ । ಅಮರಮುನಿ ಹರಿ
ಯಾಜ್ಞೆಯಿಂದ ।
ಅಮಿತೋತ್ಸವವು ಹರಿಯ ದರುಶನಲಾಭದಿಂ । ಸಾಮಹತಿ ವೀಣೆಯ
ನುಡಿಸಿದ ॥ ೮ ॥

ತಮೋಯೋಗ್ಯ ಮಡಿದ ಸುಖವಾರ್ಧಿಯಲಿ ಬಾಳ । ಸಂಭ್ರಮಕೆ ಸರಿ
ಯಿಲ್ಲ ಗೋಕುಲದಿ ।
ಕಮಲನಯನ ಮುಕುಂದಗೋವಿಂದಕೃಪೆಯಿಂದ ಗೋಪತಿಗೋಪರು
ಹರುಷಹೊಂದಿ ॥
ವಿಮಲಚರಿತ ಶ್ರೀಪ್ರಸನ್ವೆಂಕಟಕೃಷ್ಣ । ಕಮನೀಯಗುಣಕಥನ ಕೇಳಿ ।
ಅಮರಾವತಿಯ ಜನರ ಸಮನಾಗಿ ಸುಖಿಪರು । ಶ್ರೀಮದ್ಧರಿಯ ಭಟರು
ಕೇಳಿ ॥ ೯ ॥

ಶಬ್ದಾರ್ಥ:—ತರಿ=ಕೊಲ್ಲು. ಅಭಿಜ್ಞ=ತನ್ನನ್ನು ಚೆನ್ನಾಗಿ ತಿಳಿದವನು. ಜಿಜ್ಞಾಸೆ=ಇಚ್ಛೆ. ನಾಕಜನ=ದೇವತೆಗಳು. ನಾಕಪ=ಇಂದ್ರ. ಖಪ=ಗರುಡ. ಪೆರ್ಮೆ=ದೊಡ್ಡಿಕೆ. ದಿವಭೋಗಿ=ಇಂದ್ರ. ಯಶಸು=ಕೀರ್ತಿ. ಚೈದ್ಯ=ಶಿಶುಪಾಲ. ಏಸೊಂದು=ಬಹಳ. ಧುರ್ಯ=ಮುಂದಾಳು. ಸುಮಹತಿ=ನಾರದನ ಮಹತಿಯೆಂಬ ವೀಣೆ. ಸಾಂಗತ್ಯವೃತ್ತವು. ನುಡಿಗಳು ೬೬೭.

---

೫೪.

ಶಂಕರಾಭರಣ ಏಕತಾಳ.

ವಾಸುದೇವನ ಅಡಿದಾವರೆಯ । ಆಶ್ರಿತಗೋವಳರು ।
ದ್ವೇಷಿ ಖಳಾಧಮ ವ್ಯೋಮಾಸುರನ । ಗಾಸಿಯ ದಾಟಿದರು ॥ ಪಲ್ಲ ॥

ಒಂದಿನ ಗೋವರ್ಧನಗಿರಿ ತಪ್ಪಲ । ಹೊಂದಿಲಿ ಗೋಗಳನು ।
ಇಂದಿರೆಯರಸನು ಚರಿಸುತ ಗೋವರ । ವೃಂದಸಹಿತ ತಾನು ॥
ಚಂದದಿಂದಲಿ ನಿಲಯನಕ್ರೀಡೆಯ । ಸುಂದರರಾಡಿದರು ।
ಅಂದದಿ ಬಾಲರು ಕೆಲವರು ಚೋರರು । ಎಂದು ಸೊಲ್ಲಿಸಿದರು ॥ ೧ ॥
ಬಾಲಕರನು ಮೇಷಾಯುತರ ಮಾಡಿ ಸು । ಲೀಲೆಯ ಮಂಡಿಸಲಿ ।
ಖೂಳವ್ಯೋಮಾಸುರ ಬಂದನು ಗೂಢಗೋ । ಪಾಲರ ವೇಷದಲಿ ॥
ಬಾಲರನ್ನೆಲ್ಲರನೊಯ್ದಿಟ್ಟನು ಮಹ । ಚ್ಛೈಲದ ದ್ರೋಣಿಯಲಿ !
ತೋಳನ ತೆರನವ ಮಾಡಲು ಅಂಜುತ ! ನಾಲುವರುಳಿದಿರಲಿ ॥ ೨ ॥
ಬಿಲದೊಳು ಸಿಕ್ಕಿದ ಗೋವಳರೆಲ್ಲರು । ಬಲು ಭಯವೈದಿದರು ।
ನಳಿನ ನಯನ ಗೋವಿಂದಾಯೆನ್ನುತ । ಸಲೆ ದುಃಖಹೊಂದಿದರು ॥
ಎಳೆಯರ ಆರ್ತಸ್ವರವನು ಕೇಳಿದ । ಖಳನ ಸ್ಥಿತಿಯನರಿದ ।
ತಿಳಿಯದಂತೆ ಸರ್ವಜ್ಞಶಿಖಾಮಣಿ । ಬಳಿಯಲಿ ನಿಂತಿದ್ದ ॥ ೩ ॥
ಕ್ರೂರಮಯಾತ್ಮನು ವ್ಯೋಮಾಸುರ ಬಲು । ದೂರದಿ ನಿಂತಿರಲು ।
ಶ್ರೀರಮಣನು ಕಂಡನು ಅವನಾಕೃತಿ । ಹಾರಿ ಹಿಡಿದ ಕೃಟಿಯೊಳು ॥
ವೀರಸಿಂಹನು ತೋಳನ ಜಗ್ಗಿದಹಾ । ಗಾರಾಜಿಸಿದನಾತಗೆ ।
ತೋರಿತು ಅವನಂಗವು ಪರ್ವತದೊಲು । ತೋರವು ಅತಿಬ್ಯಾಗೆ ॥ ೪ ॥
ಅನಂತ ಬಲಾತ್ಮಕ ಹಿಡಿದಂಚಲು ಅವ । ನಾನಾಯತ್ನದಲಿ ।
ದಾನವರಿಗೆ ಶಕ್ತಿಸಾಲದು ಶ್ರೀಹರಿ । ಅನಾಯಾಸದಲಿ ॥
ಹೀನನ ಕೊಂದೋಡಾಡಿದ ಸುರರ ಪ್ರ । ಸೂನ ಸುರಿವರಲ್ಲಿ ।
ಆನಂದದಲಿ ಗುಹಸ್ಥರ ತೆಗೆದನು । ಶ್ರೀ ನಾರಾಯನು ॥ ೫ ॥
ಸುಜನರು ಸುಮುನಿ ನಿಕರವು ಸ್ತುತಿಸಲೀ । ಭಜಕಜನ ಪ್ರಿಯನು ।
ವ್ರಜದಲಿ ಗಮಿಸಿದ ನಿತ್ಯಾನಂದನು । ಸ್ವಜನಾನಂದದನು ॥
ನಿಜಸುಖದಾಯಕ ನಿರ್ಜರನಾಯಕ । ಕುಜನ ನಿಕರಹರನು ।
ದ್ವಿಜ ಗೋರಕ್ಷಕ ದಾಮೋದರ ಶ್ರೀ । ರಜಲಧಿಮಂದಿರನು ॥ ೬ ॥
ಪ್ರಸನ್ನಚರಿತ ಸುಪ್ರಸನ್ನಲೋಚನ ನಿತ್ಯ । ಪ್ರಸನ್ನವರಾಭಯದ ।
ಪ್ರಸನ್ನ ಗುಣಾಕರ ಪ್ರಸನ್ನ ಸನ್ಮಂದಿರ । ಪ್ರಸನ್ನಸೌಂದರ್ಯಸಾರ ॥ ೭ ॥

ಪ್ರಸನ್ನವದನಸ್ಮಿತ ಪ್ರಸನ್ನರದನ ಶ್ರೀ | ಪ್ರಸನ್ನವೆಂಕಟಕೃಷ್ಣ ।
ಪ್ರಸನ್ನ ಶ್ರೀಪವ ಪ್ರಸನ್ನೀಕರಿಸಿವರಿಗೆ । ಪ್ರಸನ್ನ ಜನವರಿಷ್ಠಾ ॥೭॥

ಶಬ್ದಾರ್ಥ:—ನೀಲಾಯನ=ಒಂದು ಆಟದ ಹೆಸರು. ಒಂದು ಸ್ಥಳದಲ್ಲಿ ಹೋಗಿರುವದು. ಕೃಟ=ಕ್ಷಣ. ಅಂಚಲು=ಕೆಡುಹ ಕೆಇಳ ಒತ್ತಲು. ಪ್ರಸೂನ=ಪುಷ್ಪ.

ವಿ. ಸಂ.:—ಕೆಲವರು ಮೇಕೆಗಳಾಗುತ್ತಿದ್ದರು. ಕೆಲವರು ಕಳ್ಳರಾಗಿ ಅವರನ್ನು ಕದಿಯುತ್ತಿದರು. ಕೆಲವರವರನ್ನು ಹಿಡಿತರುತ್ತಿದ್ದರು. ಹೀಗೆ ಕಥಾಭಾಗ. ಸಾಂಗತ್ಯವೃತ್ತ.

ನುಡಿಗಳು ೬೭೪,

---

೫೫

ರಾಗ ತೋಡಿ. ಏಕತಾಳ.

ಹರಿಭಟರಿಗೆ ಲವ ಭಯವಿಲ್ಲ । ಶ್ರೀ । ಹರಿಸ್ಮರಣೆಗೆ ಸಮ ಧರ್ಮವಿಲ್ಲ !
ಹರಿಕರುಣೆಗೆ ಪಾತ್ರನೆ ಸುಜ್ಞ । ಶ್ರೀ। ಹರಿಯೊಪ್ಪದವನೆ ಬಹು ಪಶುಪ್ರ
॥ ಪಲ್ಲ ॥

ವ್ರಜಕೆ ತೆರಳಿಸ ಕಂಸನ ಮತವಿ । ಒಂದು । ರಜನಿಯೊಳಿದ್ದ ಕ್ರೂರ ಗೃಹ
ಹೊಂದಿ ॥

ಸುಜನೇಶ್ವರ ಶ್ರೀಕೃಷ್ಣಪಾದ । ಸಂ । ನಿಜಧ್ಯಾಸದಿ ಸ್ಮರಣೆಯಲಿದ್ದ ॥೧॥

ರವಿಗರ್ಘ್ಯದ ಕರ್ಮವ ಮಾಡಿ। ಶುಭ । ಹವಿರ್ಗಾಹುತಿ ವಿಧಿಯಲಿ ನೀಡಿ॥
ಜವದಿ ರಥಕೆ ಹಯಗಳ ಹೂಡಿ । ಮಾ । ಧವದರುಶನಕೆ ಶಕುನ ನೋಡಿ
॥ ೨ ॥

ಪಂಥವಿಡಿದು ಅಂಬುಜಾಂಬಕನ ।ಗುಣ । ಚಿಂತನೆಯಲಿ ಮಾಡುತ ಧ್ಯಾನ॥
ಎಂಥ ಸುಕೃತ ಎನಗುದಿಸಿತೊ । ಭೂ । ಕಾಂತ ಕಂಸಗೆ ಬುದ್ಧಿ ಪ್ರಕಟ
ಸಿತೋ ॥ ೩ ॥

ವಿಷಯಾಸಕ್ತಿಯ ಶೂದ್ರನು ಹ್ಯಾಗೆ । ಶ್ರುತಿ । ವಿಷಯನಲ್ಲವು ಭುವಿಯಲಿ
ಹಾಗೆ ॥

ವಿಷಮವಿಷಯ ಬಯಸುವ ನನಗೆ । ಶ್ರೀ । ಬಿಸಜಾಕ್ಷ ಕೃಪೆಯಾಯಿತು
ಎನಗೆ । ೪ ।

ಗೋಕುಲಕೆ ಹೋಗುವೆ ನಾನಿಂದೆ । ಮನೋ । ವ್ಯಾಕುಲವನು ಹರಿಕೃಪೆ
ಯಿಂದೆ ॥
ನೂಕುವ ಭಾಗ್ಯವು ಬಂತೆನಗೆ । ಹರಿ । ಶ್ರೀಕರಚರಣವಪ್ಪುವೆ ಬ್ಯಾಗೆ
॥ ೫ ॥
ಎನ್ನ ಜನ್ಮಕೆ ಫಲ ತೋರುತಿದೆ । ನಾ । ಧನ್ಯನಾಗುವೆ ದರುಶನದಿಂದೆ ॥
ಚಿನ್ಮಯಾತ್ಮನ ಮೂರ್ತಿ ದೂರದಲಿ । ಕಂಡು । ಸನ್ನಮಿಸುವೆ ಘನಹ
ರುಷದಲಿ ॥ ೬ ॥
ಕಾಲನದಿಯ ದಾಟುವೆ ಹರಿಯ । ಅಂಘ್ರಿ । ಮೂಲವನ್ನಾಶ್ರಯಿಸಿ
ತ್ವರಿಯಾ ॥
ಪಾಲಗಡಲೊಡೆಯನ ಕೃಪೆಯಿಂದ । ಸೃತಿ । ಜಾಲಬಲೆಯ ದಾಟುವೆ
ನೆಂದ ॥ ೭ ॥
ಮುನಿಜನನುತಪಾದಾಂಬುಜವ । ವಂ । ದನೆಯ ಮಾಡ್ಯಪ್ಪುವೆ ಘನ
ದೇವ ।
ಮನಸಿನ ಬಯಕೆ ಪೂರಿಸಿಕೊಂಬೆ । ಇಂದು । ಅನಿಮಿಷಪೂಜ್ಯನಾಕೃತಿ
ಕಾಂಬೆ ॥ ೮ ॥
ಶ್ರೀಭಗವನ್ ಖಳಮಥನ ಹರೆ । ಇಂ । ದೆ ಬಂದೆ ಖಳಕಂಸನಟ್ಟಿದರೆ ।
ಈ ಭಾಗ್ಯ ಮಂದಾಧಿಕಾರಿಗೆ । ಆ । ಲಾಭವು ಸುಲಭ ದೊರೆಯಿತೆನಗೆ॥೯॥
ಪೂರ್ವೇತರರು ಅಂಬುಜಭವ । ವಿಪ । ಶರ್ವೇಂದ್ರಾದ್ಯರು ನಖಮಂಡ-
ಲವ ॥
ಸರ್ವದಾ ಅರ್ಚಿಸುವರು ಬಿಡದೆ । ಕೃಷ್ಣ । ಸರ್ವೇಶ್ವರನ ಹೊಂದಿದೆ-
ಯಿಂದೆ ॥ ೦ ॥
ಗೋಗಳ ಕಾಯ್ವ ಗೋವರ ಬೆರಸಿ । ಸಲೆ । ಈ ಗೋಪೆರ ರಜಗಂಧವ
ಧರಿಸಿ ॥
ಈಗೊಪ್ಪುತಿದೆ ತವೋರು ಹತೆ । ಬಂ । ದೀಗ ಕಾಂಬೆನು ನಿನ್ನ ಕಣ್ಣಾ-
ರೆ ॥ ೧೧ ॥

ಹೊಳೆವ ಕಪೋಲನಾಸಭ್ರೂಲತಾ । ಶುಭ । ಎಳೆನಗೆ ಅರುಣಾಂಬುಜ
ನೇತ್ರ ॥
ಲಲಿತ ಗುಡಾಳಕಯುತವಕ್ತ್ರ । ಬಲು । ಚಲುವ ನೋಡುವವೆನ್ನಯ
ನೇತ್ರ ॥ ೧೨ ॥

ಮೃಗಗಣ ಪ್ರದಕ್ಷಿಣೆಯಾಗುತಿವೆ । ಮುಂದೆ । ಬಗೆಬಗೆ ಶಕುನಾಗು
ತಿವೆ ॥
ಜಗದೊಲ್ಲಭನ ಕಾಂಬುವೆ ಭವ್ಯ । ಪದ । ಯುಗಳ ಧೂಳಿಗಳಲ್ಲಿ ಲುಂಠಿ
ಸುವೆ ॥ ೧೩ ॥

ವಂದಿಸಿ ಪುನಃಪುನಃ ಸ್ತುತಿಸುವೆ ನಾ । ವ । ಸುಂಧರೆಲಿ ಮಾನಿಸರೊಲ್
ತೋರುವನ ॥
ವೃಂದಾರಕರಿಪುಕುಲಹರನ । ಆ । ನಂದ ಸ್ವೇಚ್ಛೈಕಲೀಲಾವತಾರನ
॥ ೧೪ ॥

ಅನಂತಲಾವಣ್ಯವಾರಿಧಿಯು । ಈಗೆ । ಮಾನವಪತಿ ತೋರುವ
ಬಗೆಯು ॥
ನಾ ನೋಡುವ ಪುಣ್ಯದ ಫಲವು । ಇಂ । ದೀ ನಂದನ ಸುತನ ದರುಶ
ನವು ॥ ೧೫ ॥

ಕೃಷ್ಣಕರುಣಾವಲೋಕನವು । ಶೀಘ್ರ । ನಷ್ಟಾಗುವದುಗ್ರತರತಮವು ॥
ಕೃಷ್ಣ ಸ್ವತಂತ್ರ ಸ್ವಮಾಯೆಯಲಿ । ವಿಶ್ವ । ಹುಟ್ಟಿಸಿ ಸಕಲ ತತ್ವಗಳಲ್ಲಿ
॥ ೧೬ ॥

ಪ್ರಾಣಾದ್ಯಮರರ ಸಹ ಪೋಗುವ । ತಾ । ನಾನಂತ ಜಂತು ಜಡದೊ
ಳಿರುವಾ ॥
ಅನಂತ ವಿಚಿತ್ರ ರೂಪದಲಿರುವ । ಹರಿ । ತಾನೆ ನಿಯಂತನು ಹೊರೆವ
॥ ೧೭ ॥

ಪಕ್ಷಿಮೃಗಗಳ ದಿವ್ಯೋಚ್ಚರವು । ಕಮ । ಲಾಕ್ಷನ ದರ್ಶನ ಸೂಚಿ
ಪವು ॥

ಈ ಕ್ಷೋಣಿ ಪವಿತ್ರ ಕರ್ಮಗುಣನಾಮ । ಸಂ । ಕ್ಷಿಪ ಧರ್ಮಪೂರ
ಣಕಾಮಾ ॥ ೧೮ ॥
ದೇವಾದಿ ಜೀವೌಘವು ಹರಿಯಾ । ಚಿದ್ । ಭಾವದಿ ಕೀರ್ತಿ ಮಾಡುತ
ತ್ವರಿಯಾ ॥
ಪಾವನವಾಗುವದನವರತ । ಆ । ದೇವನೆ ಸಾತ್ವಪ್ರಾದುರ್ಭೂತ ॥೧೯॥
ಈತನೆ ಗೋಪ್ತನ ಹೊಂದಿಹನು । ಮ । ತ್ತೀತನೆ ಧರ್ಮಗೋಪ್ತಾರನ
ಹನು ॥
ಈಶ ನಿರ್ಜರರಿಗೆ ಸುಖದಾತಾ । ಜಗ । ನ್ನಾಥ ಮಂಗಲಗುಣವಿ
ಖ್ಯಾತಾ ॥ ೨೦ ॥
ಈತನ ಗುಣ ಸುರರ್ ಪಾಡುವರು । ಅಜ । ವಾತರುದ್ರೇಂದ್ರಾದಿಕ
ಬುಧರು ॥
ಈತನ ನಿತ್ಯಸ್ಥಾನವು ತ್ರಯವು । ಮತ್ತೆ । ನಾಥರಿಲ್ಲವು ಶ್ರುತಿಯನು
ಭವವು ॥ ೨೧ ॥
ಮಹೋತ್ಸವ ಎನ್ನಕ್ಷಿಗೆ ಇಂದು । ಮುಂದೆ । ಮಹದ್ಭಾಗ್ಯ ಇಂದೀಪ್ಸಿತ
ವಾಗಿಹುದು ॥
ಮಹತ್ ಸ್ವಪ್ರಕಾಶಾಂಕಿತರೂಪ । ನಾ । ನೀಹೊತ್ತೆ ಕಾಂಬೆ ಭಗವತ್ಸ್ವ-
ರೂಪ ॥ ೨೨ ॥
ಶ್ರೀಪಾದಕಮಲಗಳಿಗೆರಗುವೆನೆ । ನಮ್ಮ । ಶ್ರೀಪತಿ ಕೈ ತಲೆಮೇಲಿಡುವನೆ॥
ಜಾ ಪ್ರಿಯನೆಂದೆನ್ನ ಮನ್ನಿಸುವನೆ । ಸು । ತಾಪಸರ್ಗೀವಾಭಯಕರ
ವೀವನೆ ॥ ೨೩ ॥
ನಾಯಾಶ್ರಿತಕಾಲರಂಹಸಾಂತಕ ।ಹರಿ। ಸುಯೋಗಿಜನಕಭಯದಾಯಕ॥
ಶ್ರೀಯುಂಬೆಗಿಂಬಾಗಿಹ ತೋಳುಗಳಿಂ । ಇತ್ತೆ । ಬಾಯೆಂದಪ್ಪುವನೊ ಮನ್ನ
ಣೆಯಿಂ ॥ ೨೪ ॥
ಸಮರ್ಹಣಾಂಬರ ಬಲಿಯನೀಡುವ ।ಮನೋ। ರಮವಾಕ್ಯದಿಂದೆನ್ನ ತೋಷಿ
ಸುವ ॥

ರಮೆಯ ಸಂಸ್ಪರ್ಶ ಸೌರಭ್ಯ ಭುಜದಿಂದ । ನಿತ್ಯ । ಮಮ ಸ್ವಾಮಿಯಪ್ಪುವ ಪ್ರೇಮಪುಂಜದಿಂ ॥ ೨೫ ॥

ಕಂಸನವನೆಂದೆನ್ನದಾಪಿಸನೆ ।ಪರಮ। ಹಂಸೇಶ್ವರ ಕೃಪೆಯ ಮಾಡುವನೆ ॥
ತಾಂ ಸರ್ವಗೋಪ್ಯಾಂತರ್ಬಹಿರ್ವ್ಯಾಪ್ತ । ಇಂದು । ಸಂಶಯವಿಲ್ಲ ಕಾಂಬೆ ಯಥಾರ್ಥ ॥ ೨೬ ॥

ತನ್ನಂಘ್ರಿಕಮಲಕೆ ವಂದಿಸಲು ।ಇವ। ನನ್ನವನೆಂದೊಲಿವ ಕೃಪಾಳು ॥
ತನ್ನಸ್ಮಿತೇಕ್ಷಣದಲಿ ಹೊರೆವ ।ಸ। ಚ್ಚಿನ್ಮಯಮೂರ್ತಿ ಮುಂದಕೆ ಕರೆವ ॥ ೨೭ ॥

ಅನಾದಿ ಧ್ವಸ್ತಕಿಲ್ಬಿಷದೇವ ।ತಾ। ನಾನಂತ ಕೌಟುಂಬಿ ನನ್ನ ಕಾವಾ ॥
ಅನನ್ಯದೈವಾತ್ಮಿಯಜನಕೆ ।ಹರಿ। ತಾನೆ ಸರ್ವೋತ್ತಮೋತ್ತಮ ಸುಖಕೆ ॥ ೨೮ ॥

ಪೀನಭುಜಗಳಿಂದಪ್ಪುವನು ।ಮು। ನ್ನೇನು ಪುಣ್ಯವನು ಮಾಡಿದೆನು ॥
ಏನುರ್ಜಿತಕಾಲ ಸಂಧಿಸಿತೋ । ಶ್ರೀ । ಮಾನಾಥನ ರೂಪದೊರೆಯಿತೋ ॥ ೨೯ ॥

ಅಂಜಲಿಪುಟದಿ ಸನ್ನಮಿಸುವೆನೆ । ಶ್ರೀ । ಕಂಜಾಕ್ಷ ಕೃತಾರ್ಥಿ ಬಾಯೆಂಬುವನೆ ॥
ಅಂಜದ ಅಕೃತಾತ್ಮನು ದುಷ್ಟ ।ಖಳ। ಭಂಜಕ ಸ್ವಜನೇಷ್ಟನು ಕೃಷ್ಣ ॥೩೦॥
ಪುಣ್ಯಾಮರದೈವ ಪದ್ಮನೇತ್ರ ।ಇಂ। ದೆನ್ನಪ್ಪಿದರೆ ಗಾತ್ರ ಪವಿತ್ರ ॥
ಇನ್ನು ಸಂಸೃತಿಭಯವೆನಗಿಲ್ಲ ।ಎನ್ನ। ಧನ್ಯನ ಮಾಡಿದ ಸಿರಿನಲ್ಲ ॥ ೩೧ ॥
ಬಂದೆ ಬಾ ಅಕ್ರೂರನೆನೆ ಜನ್ಮ ।ಹುಟ್ಟಿ। ಬಂದುದಕ್ಕೆ ಸಾರ್ಥಕ ಧರ್ಮ ॥
ಇಂದಿರೇಶೋರುಶ್ರವನ ಪಾದಾ ।ಮೊರೆ। ಹೊಂದಿದ ಮೇಲೆ ಇಲ್ಲವು ಖೇದ ॥ ೩೨ ॥
ಸ್ನಿಗ್ಧಾಳಕಾಬ್ಜಾಯತನೇತ್ರ ।ವೇದ। ವಾಗ್ಭೇಪಿಪ್ರಿಯಾಂಬುದಗಾತ್ರ ॥
ಸ್ರಗ್ಗಂಧಲೇಪಿತ ನೋಡದಿಹ ।ಜನ್ಮ। ಧಿಗ್ ಧಿಗ್ ಮನಿಸರೊಳವನಧಮ ॥ ೩೩ ॥

ಸುಹೃತ್ ತಮೋಪೇಕ್ಷೆ ದ್ವೇಷಗಳು ।ಇಲ್ಲ। ಶ್ರೀಹರಿಗೆ ಕಲ್ಪತರುವಿನೋಲು ॥
ಸುರ ನೃಪ ನರ ಯೋಗ್ಯತೆಯೊಳು ।ಫಲ। ಗರೆವುದು ಹಾಗೆ ಅದರೋಲು
॥ ೩೪ ॥

ಔಷಧಿವನಸ್ಪತಿಗಳ ಚಂದ್ರ ।ನಿತ್ಯ। ತೋಷಿಪಂತೆ ಯದುಕುಲಚಂದ್ರ ॥
ತೋಷಿಪನೋ ತೋಷಿಸನೋ ಶ್ರೀಬಾಲ ।ಉ। ದಾಸೀನ ಮಾಡನು ಜ್ಞಾನ
ಕುಶಲ ॥ ೩೫ ॥

ತನ್ನ ಹಸ್ತದಿಂದೆನ್ನ ಕೈವಿಡಿದು ।ಹರಿ। ಮನ್ನಿಸಿ ಮನೆ ಹೊಗುವನೆ ಇಂದು॥
ಉನ್ಮತ್ತಕಂಸನ ಕರ್ಮವನು ।ಕೃಷ್ಣ। ಚನ್ನಾಗಿ ಕೇಳ್ವನೆ ಪ್ರಶ್ನೆಯನು ॥೩೬॥

ಶ್ರೀಕಾಂತನಂಘ್ರಿಯ ರೇಣುಗಳು।ಸರ್ವ।ಲೋಕೇಶಮೌಳಿಗಾಭರಣಗಳು॥
ಈ ಕೌತುಕ ನೋಡಿ ಭೂಸತಿಗೆ ।ಅ। ನೇಕಾಭರಣಹೆಜ್ಜೆಗಳಿಗೆ ॥ ೩೭ ॥

ಅಂಕುಶಾಂಬುಜಯವಧ್ವಜವಜ್ರ ।ರೇ। ಖಾಂಕಿತವಾಗಿಹ ಭುವಿವ್ರಜ॥
ಪಂಕಜಸಂಭವಭವರ ಶಿರ ।ಗಳು। ಸೋಂಕಿದವೆಂದನಕ್ರೂರ ॥ ೩೮ ॥

ಅಹೋ ಮುಕುಂದಾಂಘ್ರಿಪಾಂಸುವೆಂದು ।ತಾ। ಮಹಿಗೆ ಬಿದ್ದಾನಂದಾಶ್ರು
ಬಿಂದು ॥
ಬಹು ಪ್ರೇಮಭರಿತ ದಾನಪತಿ । ಬಿದ್ದು । ಹೊರಳಿದ ಭಕ್ತಿಯಲಿ ಸುಮತಿ
॥ ೩೯ ॥

ಮಹಾತ್ಮ ರಾಮಾಚ್ಯುತರ ಕಂಡ । ಗೋ । ದೋಹನಕಾಲದಿ ಭಕ್ತ
ಶೌಂಡ ॥
ಸುಹೇಮಾಂಬರ ನೀಲಾಂಬರದ ।ಸ್ಮಿತ। ಸ್ನೇಹಾಪಾಂಗಾಂಬುಜಾಂಬಕರ
॥ ೪೦ ॥

ಅಪಿಚ ಶ್ಯಾಮಲಶ್ವೇತಾಂಗರ । ಯುಗ್ಮ । ಸುಪೀನ ಭುಜವುಳ್ಳ ಸುಂದ
ರರ ॥
ದೀಪಿತಾವೋಘಚಂದ್ರೋಪಮರ । ಬಾಲ । ದ್ವೀಪೇಭಪೂರ್ಣಕಳಾ
ಯುತರ ॥ ೪೧ ॥

ಸೌಗಂಧಮಾಲ್ಯೋರುರಾಜಿತರ । ಸರ್ವ । ಭೂಗಗನಕೆ ಸುಂದರ
ವರರ ।

ಯೋಗೈಶ್ವರ್ಯಲೀಲಾಪರರ । ಅ । ಮೌಘೌದಾರ್ಯಗುಣಾಕರರ ॥ ೪೨ ॥

ವಜ್ರಾಂಕುಶಾಂಬುಜಧ್ವಜಚಿಹ್ನಿತ । ಶುಭ । ಹೆಜ್ಜೆಟ್ಟು ಭೂ ಪಾವನವ ಮಾಡುತ ॥
ಸಜ್ಜೀವಿಗಳ ಪ್ರತಿಪಾಲರನು । ಖಳ । ದುರ್ಜೀವ ದೈತ್ಯರ ವಧಿಪರನು ॥ ೪೩ ॥

ದಯಾರ್ದ್ರನೇತ್ರಸ್ಮಿತವದನರನು । ಲೇಶ । ಭಯಾತಿರಿಕ್ತರ ಚಿದಾತ್ಮರನು ॥
ಶ್ರೀಯಾಂಚಿತ ವನ ಸ್ರಗ್ಧರರಾ । ಸರ್ವ । ಪ್ರೀಯುತವರೋತ್ತಮ ಹರಿ ಬಲರ ॥ ೪೪ ॥

ಸ್ನಾತರ ಶುಚಿವಸ್ತ್ರಾಭರಣಾಂಕರ । ನಿತ್ಯ । ಭೂತಪ್ರಧಾನಪುರುಷೋತ್ತಮರ॥
ಈ ತ್ರಿಜಗದ್ಧೇತುಗಳ ಹರ । ಅತಿ । ಪ್ರೀತಿಲಿ ಕಂಡನಕ್ರೂರ ಚತುರಾ ॥ ೪೫ ॥

ಆನಂದಬಾಷ್ಪದೊಳೀಕ್ಷಿಸಿದ । ಸಹ । ಸ್ನಾನನ ಶುಕ್ಲಕೇಶಾವೇಶದ ॥
ಆನಕದುಂದುಭಿಯ ಜೇಷ್ಠಸುತ । ಶ್ರೀ । ವೇಣುಗೋಪಾಲ ಸಾಕ್ಷಾದಚ್ಯುತ ॥ ೪೬ ॥

ನೀಲಶ್ವೇತಗಿರಿಯಂತೊಪ್ಪುತಿಹರ । ಕಂಡ । ಮೇಲೆ ಹಾರಿದ ತ್ಯಜಿಸುತ ತೇರ ॥
ಶ್ರೀಲೋಲಬಲರಿಗೆ ಪ್ರಣಮವನು । ಮಾಡಿ । ಏಳಲೊಲ್ಲನು ಅಶ್ರುತುಂಬಿ ಅವನು ॥ ೪೭ ॥

ನೀಲಾಂಗಬಲರಿಗೆ ದಂಡಪ್ರಣಮ । ಮಾಡಿ । ಕಾಲಮೇಲಿಟ್ಟ ತನ್ನ ಮಸ್ತಕವ ಪ್ರೇಮ ॥
ಆಲಿಂಗಿಸಿ ಚುಂಬಿಸಿದನು ಪದವ । ತಾ । ನೇಳಲೊಲ್ಲನು ಪ್ರೇಮ ತುಂಬಿದವ ॥ ೪೮ ॥

ಮೇಲಕ್ಕೆ ಏಳಲಾರನು ಮುಖವ । ತನ್ನ । ನಾಲಿಗೆಳೆದುಗದ್ಗದಾಗಿ ರುವ ।
ಹೇಳುತಾನಂದಬಾಷ್ಪವು ತುಂಬಿ । ಕಣ್ಣಾಲಿ । ಗಳೊರತೆಯಿಟ್ಟವು ಉಬ್ಬಿ ॥ ೪೯ ॥

ನಾ ನನ್ನದೆಂಬೆಚ್ಚರ ಮರೆದ । ನೈ । ಜಾನಂದವನು ಮನದಲಿ ಕರೆದ ॥
ಜ್ಞಾನಾಂಗರುಹ ಉಬ್ಬಿದವಾಗ । ತಾ । ನೇನುತ್ತರ ಕೊಡದ್ಹೋದಾಗ ॥ ೫೦ ॥

ಅಕ್ರೂರನ ಭಕ್ತಿಗೊಪ್ಪಿದನು । ಶ್ರೀ । ಚಕ್ರಧರಕರನಪ್ಪಿದನು ।
ಆಕ್ರಂದಿಸಿದೆ ಅಕ್ರೂರ ಬಾಯಿಂದ । ಸ್ಮರ । ಶಕ್ರೇಶಾರ್ಚಿತ ಶ್ರೀಪಾದಾ ॥ ೫೧ ॥

ಕೈಯಿಂದ ಕೈವಿಡಿದು ಮುಕ್ಕುಂದ । ತನ್ನ । ಗೇಹಕಗ್ರಜನ ಕೂಡಿ ॥ ಬಂದ ॥
ಪ್ರೀಯೋಕ್ತಿಪೀಯೂಷವನುಣಿಸಿದ ।ಬಾ। ನೀಯೆನ್ನ ತಾತನ ಸರಿಯೆಂದ ॥ ೫೨ ॥

ಆಸನವಿತ್ತನು ಸ್ವಾಗತವ । ಕೇಳಿ । ವಾಸುದೇವ ಸರ್ವಜ್ಞದೇವ ।
ಬಿಸಲ ಜಲದೊಳಂಘ್ರಿಯ ತೊಳೆದ । ಆ । ಯರ್ಘ ಸಂಕರಷಣ ಸಹಾ ರ್ಚಿಸಿದ ॥ ೫೩ ॥

ಬಹುಗುಣೋಪೇತಾನ್ನವ ರಚಿಸಿ । ಅತಿ । ಮಹಿಮ ಪ್ರೀಯೋಕ್ತಿ ಯಿಂದಲಿ ಉಣಿಸಿ ॥
ಬಹಳ ಕೃತಾರ್ಥನಾದನಕ್ರೂರನು । ಶ್ರೀ । ಅತಿಶಯನನ್ನ ಹೊಗಳಿದನು ॥ ೫೪ ॥

ಸೃಗ್ಗಂಧಮಾಲ್ಯಾಂಬರಾಸ್ಯವಾಸದಾ । ದಿವ್ಯ । ನಾಗವಲ್ಲಿದಳವ ಸೇವಿ ಸಿದ ॥
ಶ್ರೀಗೋವಿಂದ ಸೋಂಕಿದ ಪವಿತ್ರ । ಗಾತ್ರ । ಭಾಗವತೋತ್ತಮ ಅಕ್ರೂರ ಪಾತ್ರ ॥ ೫೫ ॥

ಸಕಲ ಭೋಗವ ಸತ್ಯಮತಗಳ । ಹರಿ । ಶ್ರೀಕೃಷ್ಣಾರ್ಪಣವೆಂದನಾ
ಕುಶಲ ॥
ಶುಕಮುನಿ ಪೇಳಿದ ನೃಪತಿಗೆ । ಈ । ಶ್ರೀ ಕೃಷ್ಣನ ಕಥಾಮೃತವ
ಅವಗೆ ॥ ೫೬ ॥
ಭಕುತಿಲಿ ಹೇಳಿಕೇಳಿದರಿಗೆ । ಭುಕ್ತಿ । ಮುಕುತಿ ಕೊಡುವ ಹರಿ ಬ್ಯಾಗೆ॥
ಭಕತವತ್ಸಲ ಪ್ರಸನ್ವೆಂಕಟ । ಪತಿ । ಭಕುತಿಯುಳ್ಳವನೆ ಧನ್ಯನು
ನಿತ್ಯ ॥ ೫೭ ॥

ಶಬ್ದಾರ್ಥ :— ಜವದಿ=ಬೇಗದಿಂದ. ಅಂಬಕ=ಕಣ್ಣು. ಬಿಸಜ=ಕಮಲ. ಸಂಸೃತಿ=ಸಂಸಾರ. ಗುಡಾಳಕ=ಸ್ನಿಗ್ಧವಾದ ಮುಂಗುರುಳುಗಳು. ಲುಂಠಿಸುವ=ಉರುಳುವ. ಈಪ್ಸಿತ=ಇಚ್ಛಿತ. ಸಮರ್ಹಣ=ಪೂಜಾ. ಕಿಲ್ಬಿಷ=ದೋಷ. ಊರುಶ್ರವ=ಶ್ರೀಕೃಷ್ಣ. ದಾನಪತಿ=ಅಕ್ರೂರ. ಆನಕದುಂದುಭಿ=ವಸುದೇವ. ನಾಗವಲ್ಲಿ=ವಿಳ್ಳೇದೆಲೆ. ಸಾಂಗತ್ಯ ವೃತ್ತ. ೬೩೧ ನುಡಿಗಳು.

---

## ೫೬

### ರಾಗ ವಸಂತ ಝಂಪೆ ತಾಳ.

ಶ್ರಿಯ ರಮಣ ಶ್ರೀ ಕೃಷ್ಣ ಪ್ರಿಯನಾದ ದಾನಪತಿ ।
ಜಯವು ಹರಿದಾಸರಿಗೆ ಭಯ ದ್ವೇಷಿಗಳಿಗೆ ॥ ಪಲ್ಲ ॥
ಜಗದ ಆದ್ಯಂತವೆಲ್ಲ ಬಲ್ಲ ಲಕ್ಷ್ಮೀಕಾಂತ । ಮಗುಳೆ ಕೇಳಿದನು ಭೋಜ–
ಪನ ವೃತ್ತಾಂತ ॥
ವಿಗಡ ಕೃತ್ಯವ ಹೇಳ್ದನಕ್ರೂರ ವಿಸ್ತೃತ । ಮುಗುಳು ನಗೆಯಲಿ ಕೇಳ್ದ
ಜಗದೇಕಶಾಸ್ತಾ ॥ ೧ ॥
ಸುಖದಿ ಮಲಗಿದ ದಾಂತ ಮಂಚದಲಿ ಅಕ್ರೂರ । ಸಕಲ ಲಭ್ಯವು
ಹರಿಯ ಪಾದಾಶ್ರಿತರಿಗೆ ॥
ಭಕುತಿ ಭಾಗ್ಯವು ಬಂಧು ಬೇಡರಿನ್ನೊಂದರ್ಥ । ಮುಕುತಿಗಧಿಕೆಂಬ
ಹರಿಭಕುತ ನಿಕುರುಂಬ ೨ ॥

ವೈರಾನುಬಂಧ ಯದುವಂಶದಲ್ಲಿದ್ದವನ । ಶೌರಿಯನು ಕೊಲ್ಲುವ ವಿಚಾ
ರದಲ್ಲಿದ್ದವನ ॥
ನಾರದನ ಮುಖದಿ ತನ್ನ ಜನ್ಮವನು ಕೇಳ್ದವನ । ಕೌರ್ಯೋಕ್ತಿಗಳನು
ಕೇಳ್ದನು ಸುಪ್ರಸನ್ನ ॥ ೩ ॥

ರಾಜಾಜ್ಞೆ ಹೇಳಿದನು ನಂದನಿಗೆ ಅಕ್ರೂರ । ಗೋಜೀವನಾಥ ಘೃತ
ಪಾಲದಧಿಭಾಂಡಗಳ ॥
ರಾಜಿಸುವ ಶಕಟಗಳ ತುಂಬಿ ಹೇರಿಸಿದನು । ರಾಜೀವಸಖನುದ
ಯಕೆ ಗೋವರಿಂದ ॥ ೪ ॥

ನಾವೀಗುಪಾಯನವನೊಯ್ಯು ಭೋಜೇಶ್ವರಗೆ । ಈವ ಮಧುರೆಯಲಿ
ಉತ್ಸವವನೀಕ್ಷಿಸುವ ॥
ಆವಾವ ದೇಶದಿಂ ಪ್ರೇಕ್ಷಕರು ಬಂದಿಹರು । ನಾವು ಭೋಜಪನಾಪ್ತ
ಬಂಧುಗಳುಯೆಂದ ॥ ೫ ॥

ವಿವಂಪಥ ಘೋಷಿಸಲು ಗೋಕುಲದಿ ಶೀಘ್ರದಲಿ । ಗೋಪಿಯರು
ವ್ಯಥಿಸಿದರು ಚಿತ್ತವ್ಯಗ್ರದಲಿ ॥
ಗೋವಿಂದ ರಾಮರನು ಮಧುರೆಗೊಯ್ಯುವೆನೆಂದು । ದಾವ ಅಕ್ರೂರ
ಗೋಷ್ಠಕೆ ಬಂದನೆಂದು ॥ ೬ ॥

ಎದೆಗೆ ವ್ಯಥೆತಾಗಿ ಮುಖಕಾಂತಿ ಆ ಕ್ಷಣ ಹೋಗಿ । ಸವನ ಮಕೂಲವ
ನೀಗಿ ಸಾಗಿ ದುಶ್ಚಿತರಾಗಿ ॥
ಬದಿಯ ಜನರನು ಕಾಣದೆ ಬಿಚ್ಚಿದ ತುರುಬು ನೋಡದೆ । ಸುದತೇರ
ಖಿಳರೆಲ್ಲ ಸೊಲ್ಮರೆವರೆಲ್ಲಾ ॥ ೭ ॥

ವಿಷಯ ಬಯಕೆಯ ಬಿಟ್ಟು ಕೃಷ್ಣಧ್ಯಾನವು ನಟ್ಟು । ಬಿಸಜನಯನನ
ಆಸ್ಯ ಸ್ನೇಹಸ್ಮಿತಹಾಸ್ಯ ॥
ಶಶಿಮುಖಿಯರ್ ನೆನೆನೆನೆದು ನೇತ್ರಬಾಷ್ಪವ ತಂದು । ಅಸಮ ವಿರಹಾಗ್ನಿ
ಯಲಿ ಬೆಂದು ಭ್ರಾಂತರಂದು ॥ ೮ ॥

ಹರಿಯ ಸರ್ವೋಕ್ತಿ ಸೌಂದರ್ಯ ಸಖ್ಯವು ಪ್ರೀತಿ । ವರೋದ್ದಾಮ
ಚರಿತೆಯನು ಸಲೆ ಸ್ಮರಿಸಿ ಸ್ಮರಿಸಿ ॥
ಸರಸಾಕ್ಷಿಯೊಳಶ್ರುಗರೆದು ಮೃಗಶಾವಾಕ್ಷೆರ್ । ಮರೆದು ತನುವನ್ನು
ಶೋಚಿಸಿ ಅಂದು ನೊಂದು ॥ ೯ ॥
ಎಲೆ ವಿಧಿಯೆ ಇದು ಸಲ್ಲ ನಿನ್ನಲ್ಲಿ ಕರುಣೆಲ್ಲ । ಗೆಳೆಯ ಹರಿಸಂಯೋಗ
ಮಾಡಿಸಿ ವಿಯೋಗ ॥
ಇಳೆಯೆಳೆಯರಾ ತೆರದಿ ಚೇಷ್ಟಿಸುವೆ ನೀನಿಂತೆ । ಸಲೆ ನಿನಗೆ ಉಚಿತೆ
ನಮ್ಮ ಶೋಕ ನಿನಗೊಳಿತೆ ॥ ೧೦ ॥
ಕುರುಳುಕುಟಿಲಾವೃತದ ವಕ್ತ್ರ ಅಂಬುಜನೇತ್ರ । ತರುಣಿಯರ ಹೃತ್ತಾಪ
ಪರಿಹರಿಪ ಶ್ರೀಪಾ ॥
ಪುರುಷೋತ್ತಮನು ಹೋಗೆ ಪ್ರಾಣನೀಗುವೆವೀಗೆ । ಸರಸಿರುಹಭವ
ನಿನಗೆ ಪುಣ್ಯಾಗ್ರಗಣ್ಯ ॥ ೧೧ ॥
ಅಕಟ ಕ್ರೂರಹೃದಯು ನಿನಗಕ್ರೂರಾಭಿದವೇಕೆ । ಸುಖದಿ ನಮ್ಮಯ
ಕಣ್ಗೆಗೋಚರನ ನಂದಜನ ॥
ಅಕರುಣೆಯೆ ನೀನೊಯ್ವೆ ಪ್ರಾಣನಾಥನ ಸೇವೆ । ನಿಖಿಳ ಸಖಿಯರಿಗೆಲ್ಲ
ದುರ್ಲಭಾಯ್ತಲ್ಲ ॥ ೧೨ ॥
ಸ್ವಜನ ಸದನವನು ಗಂಡರು ಮಕ್ಕಳಾರ್ಯರನು । ತ್ಯಜಿಸಿ ಮಧು
ಹರನ ದಾಸಿಯರಾಗಿ ಇಹೆವು ॥
ವ್ರಜಪನಣುಗನ ಆಸ್ಯಲೇಶಸೌಂದರ್ಯಹಾಸ । ರಜನಿಯಲಿ ಸಖಿ
ಯರಿಗೆ ತುಷ್ಟಿಯಹುದಾಗೆ ॥ ೧೩ ॥
ಹರಿಯ ಸುಹೃದ್ಭಂಗ ಕ್ಷಣಮಾತ್ರ ತಾಳದಿಹ । ತರುಣಿಯರು ಬಳಲು
ತಿರೆ ತೋರುವ ಮುರಾರಿ ॥
ಪರಮಕರುಣಾಪಾಂಗನೋಟದೆಮ್ಮಂತರಂಗ । ಹರುಷಸುಧೆಯೊಳ
ಗೆದ್ದಿ ಹೊರೆವನುದಯಾಬ್ಧಿ ॥ ೧೪ ॥
ನಗರದಬಲೆಯರು ಹಾಸಾಸ್ಯಲಕ್ಷ್ಯಾಂಕಿತರು । ಜಗತ್ಪತಿಯ ಕಂಡು
ಸೌಂದರ್ಯ ಸುಧೆಯುಂಡು ॥

ಮಿಗಿಲು ಹಸಿದಿಹ ನೇತ್ರಕ್ಹಬ್ಬವಪ್ಪುದು ಸತ್ಯ । ಸುಗುಣರಿಗೆ ಮುಕುಂ
ದಾಪಾಂಗದಿಂದೊಲಿದ ॥ ೧೫ ॥

ಮಡದಿಯರ ಭ್ರೂವಿಲಾಸಕೆ ಮೆಚ್ಚಿ ನೋಟದ ಹಾಸ । ಕಡಲೊಡೆಯು
ಕಾಂಬ ವಶವನು ಮಾಡಿಕೊಂಬ ॥
ಬಿಡರು ಮೃಗನೇತ್ರೆಯರು ಕೃಷ್ಣಭಾವುಕೆಯರು । ಬಡವರ ನಮ್ಮೆಡೆ
ಗೇಕೆ ಬಹನೆಂಬ ಬಯಕೆ ॥ ೧೬ ॥

ಮಹೋತ್ಸವವಾಗಿಹುದು ಮಧುರಾಪುರದ ಮಾರ್ಗದಲಿ । ಬಹನು
ಮುನಿಜನಧ್ಯೇಯ ಬ್ರಹ್ಮಸ್ಮರರಯ್ಯ ॥
ಬಹು ಜನರು ನೋಡುವರು ಪುಣ್ಯಫಲಕೆಣೆಯಿಲ್ಲ । ಶ್ರೀ ಹರಿಯು
ನಮಗೆ ದೂರಾದ ಸಿರಿನಲ್ಲಾ ॥ ೧೭ ॥

ದಾಶಾರ್ಹ ವೃಷ್ಣಿ ಸಾತ್ವತಾಂಧಕ ಭೋಜ ಜಾತಿಯರು । ವಿಸೇಸು
ಜನ್ಮ ಜನ್ಮಗಳ ಪುಣ್ಯಫಲಗೂಡಿ ॥
ಈಶನನು ಕಾಂಬುವರು ಇಂದು ನಿಜಸ್ನೇಹದಲಿ । ಈ ಸಚಿವನೇಕೆ ನಮ
ಗ್ವೈರಾದ ಸುಖಕೆ ॥ ೧೮ ॥

ಈ ಕ್ರೂರಕರ್ಮವನು ಮಾಡಿದನು ಗಡ ನಮ್ಮ । ಚಕ್ರಿಯ ವಿಯೋಗಿ
ಸಿದನೀಗ ಅತ್ಯಧರ್ಮ ॥
ಆಕ್ರಂದಿಸಿದವನಿಗೆ ಅಜ್ಞಲೋಕವು ಕರೆವು । ದಕ್ರೂರನೆಂಬ ವಾಕು ಸಾಕು
ಬಲು ಪೋಕು ॥ ೧೯ ॥

ಪ್ರಿಯಾತ್ ಪ್ರಿಯನ ಅಗಲಿಸಿದವನಿಗತಿಪಾಪ । ದಯಾರ್ದ್ರಹೃದಯ
ಶೂನ್ಯನಿಗೆ ಪಾಪ ॥
ಸ್ತ್ರೀಯರ ಸುದುಃಖವನು ನೋಡುವವನಿಗೆ ಪಾಪ । ಆಯಾಸ ಬಡಿಸೆ
ಬಾಹೋದವಗೆ ಪಾಪ ॥೨೦ ॥

ಬಂಡಿಯನು ಹೂಡುವರು ಗೋವಳರು ದುರ್ಮದರು । ಉಂಡುಟ್ಟು
ಸೊಕ್ಕಿಹರು ಸಚಿವನಿಲ್ಲಿ ಬರಲು ॥
ಹಿಂಡುಹಿರಿಯರು ಉಪೇಕ್ಷಿಪರು ದೈವಪತ್ರಿಕೂಲ । ಪುಂಡರೀಕಾಕ್ಷನ
ಒಲುಮೆ ಕೊರತೆಯನರಿತು ॥ ೨೧ ॥

ನಡೆಯಿರಸಿಯರಿರ ನಿವಾರಿಸುವ ಅಚ್ಯುತನ । ಸಡಿಯೇನು ಜನವಂಜಿಕೇಕೆ ವೃದ್ಧರವು ॥
ಕಡಲೊಡೆಯನಡಿಗಳಲಿ ವೃಥಭಕ್ತಿಯೆರಕವಿರೆ । ಬಿಡನು ವೇಣುಗೋಪಾಲ ಮಡದಿಯರನೆಲ್ಲ ॥ ೨೨ ॥

ನಿಮಿಷ ಕೃಷ್ಣಾಚ್ಯುತನ ವಿಯೋಗ ಸ್ಮರವೇಗ । ರಮೆಯರಸನನುಗ್ರ ಹವು ಕುಂದಾಯಿತೆಮಗೆ ।
ತವೊವ್ವೈರಿ ಅಸ್ತಂಗಿರಿಗೆ ಸಾಗೆ ಗೋಪಾಲ । ಚಮುಗೂಡಿ ಗೋಧೂಳಿ ಲಿಪ್ತಕುಂತಳನು ॥ ೨೩ ॥

ಕಮನೀಯವಕ್ತ್ರ ಧೇನುಗಳ ಮಧ್ಯದಿ ತೋರ್ವ । ಕಮಲಲೋಚನ ವೇಣು ವನ್ನು ನಾದಿಸುವ ॥
ರಮಣೀಯಪಾಂಗದಿಂ ರುಚಿರಸ್ಮಿತಹಾಸದಿಂ । ರಮಣಿಯರ ಮನೋರಥವ ಪೂರೈಪ ಯದುಪ ॥ ೨೪ ॥

ಚಿತ್ತಜನಯ್ಯನ ಮುಗುಳುನಗೆ ಸುಕಟಾಕ್ಷ । ನೇತ್ರಾಮೃತವನುಣದೆ ಇಹುದಾವ ಪಕ್ಷ ॥
ಹೆತ್ತವರ ಮರೆದೆವಾತನ ಸ್ನೇಹದಿಂಬಿನಲಿ । ನಿತ್ಯ ಕ್ಷಣಗಳ ನಾವು ಕಳೆವ ಬಗೆ ಹೇಗೆ ॥ ೨೫ ॥

ಹೀಗೆಂದು ಗೋಪಿಯರು ವಿರಹದಲಿ ಕಾತರರು । ಯೋಗೇಶರೀಶ್ವರಂಘ್ರಿ ಕಮಲಮಧುಪರು ॥
ನೀಗಿದರು ಲಜ್ಜೆಯನು ಮಾನಿನಿಕರದವೋಲು । ಶ್ರೀಗೋಪತಿಭುವನನಾಥನ ಸತಿಯರು ॥ ೨೬ ॥

ರೋದಿಸಿದರ್ ದೀನಸ್ವರರಸವಲರ್ದಿತರಾಗಿ । ಮಾಧುರಿಗೆ ಪ್ರಿಯತಮನು ಪೋಗಲಾಗಿ ॥
ಶ್ರೀಧಾಮ ದಾಮಸಖ ಕೃಷ್ಣ ಗೋಪತಿಯೆಂದು । ಈ ದೇಹ ಪ್ರಾಣೇಂದ್ರಿಯವು ನಿನ್ನದೆಂದು ॥ ೨೭ ॥

ಕೆಲದೆಯರಿಗೆ ದುಃಖರಾತ್ರಿ ಹೋಯಿತು ಅನಕ । ನಳಿನಸಖನುದಯ ಕ್ರಿಯೆಯಕ್ರೂರ ಮುಗಿಸಿ ॥

ಅಲಸದೆ ರಥಕೆ ತೇಜಿಯ ಹೂಡೆ ನಂದ ಭಂಡಿ । ಗಳಿಗೆ ಅನಡುಹಗಳನು
ಹೂಡಿ ಹೊರಿಸಿ ॥ ೨೮ ॥

ಅರಸಗೆ ಉಪಾಯನವ ಕೊಡುವ ಗವ್ಯಾಮೃತವ । ತರಿಸಿ ಕೊಡಗಳ
ನು ತುಂಬಿಸಿದ ಶಕಟಗಳ ॥

ಹರುಷಮಿಗಿಲಾಗಿ ಗೋವಳೆರು ಹೇರಿದರು ಸಲೆ । ಪಿರಿದು ದುಃಖಿತರಾದರ
ಬಲೇರಮ್ಮಿತ್ರರು ॥ ೨೯ ॥

ಮುಖದ ಕಳೆಗುಂದೈದಿ ಬಂದು ನಿಂತರು ಪ್ರಾಣ । ಸಖ ನಮ್ಮ ಕರೆದೊ
ಯ್ವನೆಂಬಾಸೆವಿಡಿದು ॥

ಸಖಿಯರತಿ ರೋದಿಸಲು ಸಂತೈಸಿದನು ವಾರ್ಷ್ಣಿ । ದುಃಖಿಸದಿರಿ ಶೀಘ್ರ
ಬಹೆನೆಂದನು ಮುಕುಂದಾ ॥ ೩೦ ॥

ರಥಧ್ವಜವು ಕಣ್ಗೆ ತೋರ್ವನಕಲಬಲೆಯರು ಮತ್ತೆ । ರಥರಜವು ಕಾಂಬ
ನಕ ಹೋಗಿ ಹಿಂದಿರುಗಿ ॥

ರತಿಪತಿಯ ಪಿತನಾಶೆ ನೈರಾಶ್ಯ ನಮಗೆಂದು ! ಅತಿ ಕ್ಲೇಶದಲಿ ಅಂದು
ಬಂದರ್ ಮನನೊಂದು ॥೩೧ ॥

ರಥಚರಣಧರನ ಲಾವಣ್ಯ ರೂಪ ಧ್ಯಾನ । ಮತಿಗೆ ನಿಲುಕಿಸುತ ಕಣ್ಣೀರ
ಮಳೆಗರೆವುತ ॥

ವ್ಯಥಿತ ಹೃದಯರು ತಿರುಗಿ ಬಂದರು ವ್ರಜಕ್ಕಾಗಿ । ಸತತ ಪ್ರಿಯನ
ಚೇಷ್ಟೆ ಸಲೆ ಸುಗುಣ ಗೋಷ್ಟಿ ॥ ೩೨ ॥

ಅತಿಮಂಜುಳಸ್ವರದಿ ಪಾಡುವರು ನೋಡುವರು । ಸತಿಯರು ತಮ್ಮ
ಹೃದಯ ಕಮಲದಲ್ಲಿಟ್ಟು ॥

ಇತರ ವಿಷಯ ಮರೆದು ಜರಿದು ಅಹಂಭಾವ । ಅತಿಕ್ರಮಿಸಿ ಮುಕುತರ
ಸ್ವಭಾವದಬಲೆಯರು ॥ ೩೩ ॥

ಒಪ್ಪಿದರು ಜೀವನ್ಮುಕ್ತ ಹರಿಭಕ್ತರು । ಇಪ್ಪರಲ್ಲ್ಯನವರತ ಹರಿಯ ಗುಣ
ಚಿಂತನೆಯ ।

ತಪ್ಪರರೆಗಳಿಗೆ ಭಗವಜ್ಜನರು ಸಜ್ಜನರು । ಶ್ರೀಪ್ರಿಯನ ಪ್ರಿಯರು ನೆನೆ
ವರಘಹರರು ॥ ೩೪ ॥

ರಥವ ದೂವಾಳಿಸಿದ ವಾಯುವೇಗದ್ಯಕ್ರೂರ । ಮತಿವಂತ ಹರಿಬಲರ
ಸಹ ಯಮುನೆಗೈದಿ ॥
ರಥ ನಿಲಿಸಿ ತರುಮೂಲದಿಳಿದರಚ್ಯುತಬಲರು । ಅತುಳ ನಿರ್ಮಲಜಲ
ಸೇವಿಸಿ ಕುಳಿತರು ॥ ೩೫ ॥

ರಥದಿ ಉಭಯತರಿರಲು ಸ್ನಾನಕ್ಕೈದಿದ ಬೇಗ । ಅತಿ ಅಘಮರ್ಷಣ
ಮಾಡಲದುಭೂತವಾ ॥
ಸತತ ನೋಡುವ ಬ್ರಹ್ಮಸನಾತನಭ್ಯಾಸದಲಿ । ಮತಿಗೆ ಹರಿಹಲಿ
ತೋರ್ದರಾಶ್ಚರ್ಯದಲಿ ॥ ೩೬ ॥

ಹೊರಗೆ ರಥದಲ್ಲಿದ್ದರೆಂತು ತೋರಿದರಿಲ್ಲಿ । ಪರಮ ಕೌತುಕವೆಂದು
ಮೇಲೆ ನೋಡಿದನು ॥
ಹರಿಬಲರ್ವ್ಯಥಾಸ್ಥಿತಿಯ ಕಂಡು ಸಲೆ ಮುಳುಗೆ ಅಘ । ಮರಷಣದಿ
ತೋರಿದರು ಪರಮಪಾವನರು ॥ ೩೭ ॥

ಸುರೋರಗರು ಸಿದ್ಧಚಾರಣರು ಕೈಮುಗಿದು ತಮ್ಮ । ಶಿರವ ಬಾಗಿಸಿ
ಬಹಳ ಸ್ತೋತ್ರಮಾಳ್ಪುದನು ॥
ಶಿರಸಫಣಸಹಸ್ರ ಶ್ವೇತಶೃಂಗಾಭಮಣಿ । ಕಿರಿಟಕುಂಡಲಕರ್ಣ ನೀಲಾಂ
ಬರನ್ನ ॥ ೩೮ ॥

ಶೀರದಾಸನದಲ್ಲಿ ಕುಳಿತಿರ್ದ ಶ್ಯಾಮಲನ । ವರಪೀತಾಂಬರ ಚತು
ರ್ಭುಜ ಅಬ್ಜಾಂಬಕನ ॥
ಚಿರರುಚಿರ ನಗೆಮೊಗನ ಪ್ರಸನ್ನಾವಲೋಕನನ । ಅರುಣಾಧರ ಸುಕ
ಪೋಲ ಸತ್ಕರ್ಣಯುಗನ ॥ ೩೯ ॥

ವರಭ್ರೂವಿಲಾಸನ್ನ ಕಂಬುಕಂಠಾನ್ವಿತನ । ಶಿರಿತ್ರಿವಳಿನಾಭಿಯ ಗಭೀರ
ಬ್ರಹದ್ಭುಜನ ॥
ಭರಿತಭುವನೋದರ ವಿಸ್ತರಪಕ್ಷ ಸುನಿತಂಬ । ಕರಭೋರು ದ್ವಯಜಾ
ನುಜಂಘಾನ್ವಿತನ ॥ ೪೦ ॥

ಅರುಣನಖಾಂಗುಲಿದೀಪ್ತಚರಣವಾರಿಜಯುಗಳ । ಸರಸಿಜಾಂಕುಶ
ವಜ್ರಧ್ವಜಯವಾಂಕಿತದ ॥

ಪರಮಪದತಳನ ಪಾವನಕರ ಜಗತ್ರಯುನ । ಸುರಮೌಸಿಹೃದಯು
ಪೀಠದಲಿ ರಾಜಿಪನ ॥ ೪೧ ॥

ಕಿರೀಟಕುಂಡಲಕಟಕವರಕೇಯೂರಾಮೋಘಪದಕ । ಚಿರರತ್ನಕಟಿ
ಸೂತ್ರ ಕೌಸ್ತುಭ ಬ್ರಹ್ಮಸೂತ್ರ ॥
ಸಿರಿವತ್ಸವೈಜಯಂತಿಹಾರನೂಪುರಮಾಲಾ । ಧರನ ಅರಿಶಂಖಗ
ದಾಂಬುಜಕರ ಸ್ವಸುಂದರನ ॥ ೪೨ ॥

ಅಜವಿಪಾಹಿಪಸುರಪಪೂಜಿಪಪದಾಬ್ಜ ಜಯು । ವಿಜಯ ನಂದಸು
ನಂದಪಾರ್ಷದಾನ್ವಿತನ ॥
ದ್ವಿಜಮುನಿಸುರಾಧ್ಯ ಪ್ರಲ್ಹಾದ ನಾರದರಾದಿ । ಸುಜನಮೋಹರಸೇವ್ಯ
ನಹನ ಗುಣ ಗಹನ ॥ ೪೩ ॥

ಸ್ವಯಶೋವಚನ ಕೀರ್ತ್ನೆಮಾಡುವನ ಮನ್ನಿಸುವ । ಶ್ರೀಯು ಪುಷ್ಟಿ
ಶಾಂತಿ ಮೊದಲಾದ ಶಕ್ತಿಯರು ॥
ಭಯಭಕ್ತಿಯಿಂದಿಹರು ಆಪನ್ನ ಭಾವುಕರು । ಶ್ರೀಯಃಪತಿಯ ಮಹಿ
ಮೆಯನು ಕಂಡನಕ್ರೂರ ॥ ೪೪ ॥

ಅಪರಿಮಿತ ಮಹಿಮೆಯನು ನೋಡಿ ವಿಸ್ಮಿತನಾದ । ಸುಪ್ರೇಮಲೋ
ಚನದಿ ಬಾಷ್ಪವನು ತಂದ ॥
ತಾ ಪರವಶದಿ ಅಂಗರುಹಪುಳಕಿತನಾಗಿ । ಶ್ರೀಪರಬ್ರಹ್ಮನ ಮಹತ್ವ
ವನು ತಿಳಿದ ॥ ೪೫ ॥

ಆತ್ಯಂತ ಭಕ್ತಿಯಲಿ ಗದ್ಗದೋಚ್ಚಾರದಲಿ । ವ್ಯಕ್ತವಾಗದು ಸ್ತೋತ್ರ
ಮಾಡುವೆನೆನ್ನಲು ॥
ಚಿತ್ತದ್ರವದಲಿ ನಮಿಸಿ ಧೈರ್ಯವನು ಮಾಡಿ ಹರಿ । ಸ್ತೋತ್ರಮಾಡಿದ
ಅಂಜಲಿಪುಟದಿ ನಿಂದು ॥ ೪೬ ॥

ದಿನದಿನದ ಸ್ನಾನದಲಿ ಅಹಿಪತಿಯು ಕಾಂಬನಿಂ । ದಿನದಿನದಿ ಆನಂತ
ಆಸನನ ಕಂಡಾ ॥
ಘನಹರುಷದಲಿ ಸ್ತೋತ್ರಮಾಡಲನುವಾದ ಚಿದ್ । ಗುಣವಾರ್ಧಿ ಆಶ್ರಿ
ತರ ಸುರಭೂರುಹನ್ನ ॥ ೪೭ ॥

ಪರದೇವತೆಯ ಕೊಲ್ಲಿಸುವನೆಂದು ಕರೆಸಿದನು । ಪರಮ ಪಾಪಾತ್ಮ
ಭೋಜಪ ಸಚಿವನಟ್ಟೆ ॥

ಪರಮಭಾಗವತರಿಗಧರ್ಮವೇ ಧರ್ಮವಹುದು । ವರ ದಾನಪತಿಗೊ
ಲಿದು ಹರಿತೋರ್ದನು ತನ್ನ ॥ ೪೮ ॥

ಪ್ರಸನ್ನವೆಂಕಟಪತಿಯ ಪಾದಾಶ್ರಿತಾಕ್ರೂರ । ವಿಷಮ ಪ್ರತಿಕಂಸನ
ಆಜ್ಞೆಯಲಿ ವ್ರಜಕೆ॥

ಬಿಸಜನಾಭನ ದರುಶನಕೆ ಬಂದು ಕಂಡ ಗಡ । ಅಸಮಮಹಿಮೆಯನು
ಭಾಗವತ ಶಿರೋರತ್ನ ॥ ೪೯ ॥

ಶಬ್ದಾರ್ಥಃ—ನಿಕುರುಂಬ=ಸಮೂಹ. ಉಪಾಯನ=ಕಾಣಿಕೆ. ಏವಂವಿಧ=ಈ ಪ್ರಕಾರ ವಾಗಿ. ಸೊಲ್=ಮಾತು. ಅನಡುಹಗಳು=ಎತ್ತುಗಳು. ರಥಚರಣ=ಚಕ್ರ. ದೂವಾಳಿಸು=ಮುಂದಕ್ಕೆ ಹೊಡೆ. ಅಘಮರ್ಷಣ=ಪಾಪನಾಶಕವಾದ ಒಂದು ಸೂಕ್ತ. ಯವ=ಕೈಯಲ್ಲಿಯ ಒಂದು ರೇಖೆಯ ಹೆಸರು (ಅನ್ನಸೂಚಕವಾದದ್ದು) ಅರೆ=ಚಕ್ರ. ಮೋಹರ=ಗುಂಪು.

ವಿ. ಸೂ. ಸುರೋರಗರು...... ಶರೀತದಾಸನನಲ್ಲಿ=ಅನೇಕ ಸುರೋರಗಾದ್ಯರಿಂದಸೇವಿತನಾದ ಆದಿಶೇಷನನ್ನು ಕಂಡನು. ಅವನಿಗೆ ದಿವ್ಯಕಿರೀಟ ಶೋಭಿತಗಳಾದ ಸಹಸ್ರ ಶಿರಗಳು. ಬಿಳಿಮೈ. ನೀಲವರ್ಣದ ಪಟ್ಟೆ ಮಡಿ ಇಂತಹ ದಿವ್ಯಾದ್ಭುತರೂಪದಿಂದ ಸುವರ್ಣಶಿಖರಗಳುಳ್ಳ ರಜತಪರ್ವತದಂತೆ ಶೋಭಿಸುತ್ತಿರುವ ಆದಿಶೇಷನ ಶರೀರದಲ್ಲಿ ಮೇಘಶ್ಯಾಮಲಮೂರ್ತಿಯಾದ ಪೀತಾಂಬರವನ್ನುಟ್ಟು ಮಲಗಿದ ಮೂರ್ತಿಯನ್ನು ಕಂಡನು. ಸಾಂಗತ್ಯವೃತ್ತವು. ನುಡಿಗಳು ೭೫೦.

---

೩೭.

ರಾಗ ಸೌಂಟಿ ತಾಳ ಝಂಪೆ.

ಪಿರಿದು ಸುಖ ಪೊಗಳೆ ಹರಿಯ ಮಹಿಮೆ । ನರ ।
ಹರಿಯ ದಾಸರಿಗೆ ಹರಿಯ ಒಲುಮೆ ॥
ಪರಮಭಾಗವತನಕ್ರೂರ । ಅಘ ।
ಮರ್ಷಣದಿ ಸ್ತುತಿಸಾಳ್ದ ವಿವರ ॥ ಪಲ್ಲ ॥
ಕಂಡನಾಶ್ಚರ್ಯಘನನೀರಿನಲಿ । ಭಕ್ತ । ಶೌಂಡ ಕರವೆರಡಂಜಲಿಯಲಿ ।
ಮಂಡೆಯನು ಬಾಗಿ ಒಕ್ತಿಯಲಿ । ಶ್ರೀ । ಪುಂಡರೀಕಾಕ್ಷನಿದಿರಿನಲಿ ॥ ೧ ॥

ಹೇಯಂಬುಜಾಕ್ಷ ನಮೋನಮಸ್ತೆ । ನಮೊ । ಈಯೆರಡೇಳು ಭುವನ ಪ್ರಭೋ ತೆ ॥
ಶ್ರೀಯಾದಿ ಲಕ್ಷ್ಮೀನಾರಾಯಣ । ತವನಾ । ಭಿಯ ಪದ್ಮದಲಿ ಪೆತ್ತ್ಯಜನ ॥ ೨ ॥

ನೀನೀಗ ಬೊಮ್ಮನೊಳಃ ಪೊಗುವೆ । ನಾ । ನಾನಂತ ಜಗವ ಪುಟ್ಟಸುವೆ
ಅನಾದಿಜೀವರ ಕರ್ಮವನು । ನೋಡಿ । ನೀನೇ ಗುಣತ್ರಯದಿ ಬಂಧಿಸುವೆ ॥ ೩ ॥

ಸರ್ವೇಂದ್ರಿಯಾರ್ಥದಧಿಕಾರ ।ಕೊಟ್ಟೆ। ಓರ್ವ ಮುಖ್ಯಪ್ರಾಣನಿಗೆ ಧೀರ।
ಸರ್ವಸುರರಾತನಿಚ್ಛೆಯಲಿ । ಇಟ್ಟೆ । ಸರ್ವೇಶ್ವರ ನಿನ್ನ ಆಜ್ಞೆಯಲಿ ॥ ೪ ॥

ನೀ ನಿಯಾಮಕ ಲಕುಮಿಯ ನಲ್ಲ । ನಿನ್ನಾ ।ಜ್ಞಾನುಸಾರ ಪ್ರವರ್ತಕರು ಎಲ್ಲ ॥
ಏನೇನು ಸ್ವಾತಂತ್ರ್ಯ ಸುರರ್ಗಿಲ್ಲಾ । ಜ್ಞಾ । ನಾನಂದ ಸ್ವೇಚ್ಛೈಕ ಲೀಲಾ ॥ ೫ ॥

ನೀನೆಲ್ಲರ ಹೃದ್ಗುಹದಲ್ಲಿರುವೆ । ನಿನ್ನ । ಕಾಣದೆಲ್ಲರು ಜಗದ್ಸ್ವರುವೆ ।
ನೀ ನಿನ್ನ ಮಾಯದಿ ಮೋಹಿಸುವೆ । ಹರಿ । ನೀನೇ ಅಜ್ಞಾನ ಕವಿಸುವೆ ॥ ೬ ॥

ಶುದ್ಧಾತ್ಮಯೋಗಿಗಳ್ ಯೋಗದಲಿ । ಅಸಿ । ರುದ್ಧ ಕಾಂಬರು ಪ್ರಸಾದದಲಿ ॥
ಆದ್ಯಾತ್ಮಭೂತದೈವದಲಿ । ಕೆಲರು । ವಿದ್ಯೋನ್ನತಿ ವಿವಿಧ ಯಜ್ಞದಲಿ ॥ ೭ ॥

ಇದ್ದು ನಿನ್ನನು ಪೂಜಿಸುವರು । ನಿನ । ಗಾದ್ಯಂತಕರ್ಮವನರ್ಪಿಪರು ॥
ಶುದ್ಧ ಜ್ಞಾನಿಗಳು ಜ್ಞಾನದಲಿ । ಯಜ್ಞ । ಪದ್ಧತಿವಿಧಿಯಲರ್ಚಿಪರು ॥ ೮ ॥

ನೀನೇಕರೂಪ ಬಹುರೂಪ । ತಿಳಿದು । ನಾನಾ ಪ್ರಕಾರದಿ ಭಜಿಪ ॥
ಜ್ಞಾನಿಗಳು ಬೇದಾಭೇದದಲಿ । ಅರ್ಚಿಪರು । ನಾನಾಚಾರಮಾರ್ಗ
ದಲಿ ॥ ೯ ॥

ವಾಚಾದಿಕರ್ಣಗಳಿಂದ । ವೇದ ! ವಾಚ್ಯನು ಪರಾತ್ಪರ ಮುಕುಂದ ॥
ಯೋಚನೆಗೆ ನಿಲುಕದಾನಂದ । ಎಂದು । ಸೂಚಿಪವು ಉಪನಿಷದ್ವೃಂದಾ
॥ ೧೦ ॥

ಹರಿ ನಿನ್ನ ಪೆಸರ ಸುರರ್ಗಿಟ್ಟೆ । ಸರ್ವ । ಸುರರ ಯೋಗ್ಯತೆ ಪದವಿ
ಕೊಟ್ಟೆ ॥
ಗಿರಿಜ ನದಿಗಳಂಬುಧಿ ಬೆರೆವ । ಪರಿ । ಸುರುಋಷಿಪಿತೃಗಳ್ ತರ್ಪ
ಣವ ॥ ೧೧ ॥

ನಿನಗೋಸುಗ ಜ್ಞಾನಿಗಳರ್ಪಿಪರು । ನಿನ್ನ । ವಿನಾ ಅರ್ಚನೆ ಅವಿಧಿ
ಯೆಂಬುವರು ॥
ಅನಿಮಿಷರು ನಿನ್ನ ಸೇವಕರು । ತಮ್ಮ । ಘನತೆಯೊಲ್ಲರು ಭಯೂನ್ವಿ
ತರು ॥ ೧೨ ॥

ಸತ್ವರಜಸ್ತಮ ಮೂರುಗುಣವು । ಜಗವ । ವಿಸ್ತರಿಸಿ ಒತ್ತಾತ್ಯಳು
ತಿಹವು ॥
ಎತ್ತೆತ್ತಲೋತಪ್ರೋತಾಗಿ ।ಆಬ್ರ। ಹ್ಮಸ್ತಂಭ ಪರಿಯಂತವಾಗಿ ॥ ೧೩ ॥

ನೀ ನಿಯಂತಾರ ಜಗಕೆಲ್ಲ । ಇಲ್ಲ ।ದೇನು ಕಾರಣ ವಿಶ್ವಕಿಲ್ಲ ॥
ನೀನಂತರ್ಬಾಹ್ಯಸ್ವತಂತ್ರ । ಆ । ಧೀನವು ನಿನ್ನದೇ ತಂತ್ರ ॥ ೧೪ ॥

ನೀನಗ್ನಿ ಮುಖದಿಂದ ಪಡೆದೆ । ನೀ ಪೃಥ್ವಿ । ಯನು ಅಂಘ್ರಿಯಿಂದ
ಪಡೆದೆ ॥
ನೀನಿನನ ನೇತ್ರದಿಂ ಪೆತ್ತೆ । ನಾಭಿ । ಯಿಂದ ಅಂತರಿಕ್ಷ ಹೊತ್ತೆ ॥ ೧೫ ॥

ರಕ್ಷಿಸಿದೆ ದಿವಿ ತಲೆಲಿಟ್ಟು । ಸಹ । ಸ್ರಾಕ್ಷಾದ್ಯರ್ ತೋಳಿಂಬಿಲಿಟ್ಟು ॥
ದಿಕ್ಷುಗಳ ಶ್ರೋತ್ರದಿ ಸೃಜಿಸಿದೆ । ನಿನ್ನ । ಕುಕ್ಷಿಯೊಳಬ್ಧಿಗಳ ತಾಳ್ದೆ
॥ ೧೬ ॥

ಹೇ ಮಾರುತನ ಪ್ರಾಣದಿಂದ । ಅಂಗ । ರೋಮಗಳಲಿ ವೃಕ್ಷವೃಂದ ॥
ನೀಮುತ್ತುಮಾಂಗರುಹಗಳಲಿ ।ಘನ। ಸ್ತೋಮವನು ಪಡೆದೆ ಕರುಣದಲಿ
॥ ೧೭ ॥

ನಖಪಂಕ್ತಿಯಿಂದದ್ರಿಗಳನು । ಪಕ್ಷ್ಮ। ನಿಕರದಿಂದಹಸ್ಸುರಾತ್ರಿಗಳನು॥
ಪ್ರಕಟಿಸಿ ದಕ್ಷಾದ್ಯರ ಶಿಶ್ನದಲಿ । ವೃಷ್ಣಿ । ವ್ಯಕುತ ಮಾಡಿದೆ ವೀರ್ಯ
ದಲಿ ॥ ೮ ॥

ಮರ್ತ್ಯಜನಕಾಪ್ಯಾಯುನವೆಂದು । ಏವಂ । ರೀತ್ಯಾ ಸೃಜಿಸಿದಾಪ್ತ
ಬಂಧೊ ॥
ನಿತ್ಯಾವ್ಯಯಾತ್ಮ ಪುರುಷೋತ್ಮ । ಜೀವ । ರುತ್ಪತ್ತಿಪಾಲನಪರಾತ್ಮಾ
॥ ೧೯ ॥

ಜಲಜಂತುಗಳ ಲಯುವು ಜಲದಿ । ಅತ್ತಿ । ಫಲದ್ಹುಳಕೆ ಲಯುವದೇ
ಫಲದಿ ॥
ನಳಿನಾಕ್ಷ ನಿನ್ನಲಿ ಹುಟ್ಟಿ । ಮ। ತ್ತಳಿದು ಹೋಹುದು ಸರ್ವಸೃಷ್ಟಿ
॥ ೨೦ ॥

ಅನಂತ ಬೊಮ್ಮರನು ಪಡೆವೆ । ಮ । ತ್ತಾನಂತಾಜಾಂಡವ ಹುಟ್ಟಿ
ಸುವೆ ॥
ನೀನೆ ಪಾಲಿಪೆ ಸಂಹರಿಸುವೆ । ನಿನ । ಗಾನಂದದಾಟವಿದು ಪ್ರಭುವೆ
॥ ೨೧ ॥

ಅನಂತ ಜಡಚೇತನಕ್ಕೆಲ್ಲ । ಮುಖ್ಯ । ನೀನಲ್ಲದನ್ಯಾಶ್ರಯಿಲ್ಲ ॥
ನೀನೇಕ ಅನಂತರೂಪ । ಜೀ । ವಾನೀಕಕೆ ದೂರನು ಸಮೀಪ ॥ ೨೨ ॥

ನಿನ್ನರ್ಚಕರಿಗಿತ್ತೆ ಮುಕ್ತಿ । ಸಲೆ । ನಿನ್ನದ್ವೇಷಿಗಳಿಗೆ ತಮವಿತ್ತೆ ॥
ನಿನ್ನಮೋಘಗುಣಕೀರ್ತಿ ಸುರರು । ಹೊಗಳಿ । ಧನ್ಯರಹರು ಮಹಾ-
ತ್ಮರು ॥ ೨೩ ॥

ಲಯುಜಲಧಿಗಾಮೋಘಮೀನ । ಶ್ರೀ । ಹಯವದನಾ ಮಧುಕೈಟಭ
ಮಥನಾ ॥

ಪಯೋನಿಧಿಮಂಥಕಕೂಪಾರ । ಸುರನಿ । ಚಯಸುಖದ ಮಂದರೋ
ದ್ಧಾರಾ ॥ ೨೪ ॥

ಸುಯಜ್ಞ ಭವ್ಯ ಮಹಾತ್ಮಾ। ಹೇಮ। ನಯನಹರ ಧೃತಭೂತಳಾತ್ಮಾ॥
ಭಯದೂರ ನರಮೃಗಸ್ವರೂಪ । ಲೋಕ । ತ್ರಯಕೀರ್ತಿತ ಸುಪ್ರ
ತಾಪಾ ॥ ೨೫ ॥

ವ್ಯಾಪ್ತಲೋಕದ್ವಯ ಸಚ್ಚರಣ । ಬಲಿ । ಗೋಪ್ತಯಾಚಿತ ಸದ್ವಿ
ತರಣ ॥

ದೀಪ್ತಕರಪರಶು ಧನುರ್ಧಾರ । ಮದ । ದೃಪ್ತನೃಪಕುಲಕುಜಕುಠಾರಾ
॥ ೨೬ ॥

ದಶರಥಾತ್ಮಜ ಸೀತಾರಮಣ । ಮತ್ತ । ದಶಶಿರಾರ್ದ ಹನುಮದಂಸಗ
ಮನ ॥

ಪ್ರಸೀದ ನಮೊ ನಮೋ ವಾಸುದೇವ । ಸಂಕ । ರುಷಣ ಶ್ರೀಪ್ರದ್ಯುಮ್ನ
ದೇವ ॥ ೨೭ ॥

ಪ್ರಸೀದ ನಮೋ ನಮೋ ಅನಿರುದ್ಧ । ಸು । ಪ್ರಸೀದ ಸಾತ್ವತ
ಕುಲಸುವೃದ್ಧಾ ॥
ಪ್ರಸೀದ ಶಶಿವಂಶಸುಪವಿತ್ರ । ಸು । ಪ್ರಸೀದ ಸಚ್ಚಿದಾನಂದ ಗಾತ್ರಾ
॥ ೨೮ ॥

ನಮೊ ನಮೊ ಸತ್ಸುಬುದ್ಧಿ ಬುದ್ಧ । ನಮೊ । ನಮೊ ದನುಜಮೋಹ
ನ ಪ್ರಸಿದ್ಧ ॥
ನಮೊ ನಮೋ ದುಷ್ಟಕುಲದಹನ ।ಪುನ। ರ್ನಮೊ ನಮೊ ಗಹನಾತ್ಪ
ಗಹನ ॥ ೨೯ ॥

ನೈಜೇಚ್ಛೆಲಾಳ್ವೆ ಸುರವೃಂದ । ನಾ । ನಾ ಜೀವರ ತವ ನಾಮದಿಂದ ॥
ತಾ ಜೀವಿಸಿ ಮೋಹಿಸಿ ವರ್ತಿಪುದು । ಮಹಾ । ಸೋಜಿಗದ ಲೀಲೆ ದೀನ
ಬಂಧು ॥ ೩೦ ॥

ಸತಿಸುತರು ಗೃಹ ಸ್ವಜನ ಕ್ಷೇತ್ರ । ಅರ್ಥ । ದತಿಭ್ರಾಂತಿ ಬಿಡದಿಹೆ ಅಸ್ವತಂತ್ರ ॥
ಮತಿಹೀನನಾಗಿ ಸ್ವಪ್ನಪಸು । ಈ । ಸೃತಿಯೆಂದು ತಿಳಿಯೆ ನಾನ ಧಮಾ ॥ ೩೧ ॥

ನೀನಿತ್ತ ಸುಖದುಃಖವಿನ್ನು । ತಿಳಿಯದೆ । ನಾನು ಕಾರಣನೆಂಬುವೆನು ॥
ನಾನಾಗಿ ಸುತ್ತಿಬಹೆ ಭವವ ।ಹರಿ। ನೀನೇವೆ ಮಾಡನುಗ್ರಹನ ॥ ೩೨ ॥

ದುಃಖಾನ್ವಯವನು ಸುಖ ಕಂಡೆ । ಭ್ರಾಂತಿ । ಲೆಕ್ಕದೋರದು ಮರೆಹು ಗೊಂಡೆ ॥
ಮೂರ್ಖವಿಪರೀತಮತಿ ಬೆರೆವೆ । ತವ । ಸಖ್ಯವನು ಮರೆವೆ ಜಗದ್ಗುರುವೆ ॥ ೩೩ ॥

ನಿನ್ನಾಶ್ರಯದಿ ಬದಿಯಲಿರುವೆ । ನಾ । ನನ್ಯರಾರಾಧನೆಯ ಮಾಡುವೆ ।
ಸನ್ನೀರ ಜರಿದು ಬಿಸಿಲದೊರೆಗೆ । ಓಡಿ । ಬನ್ನ ಬಡುವೆ ಭವಾಟವಿಯೊಳಗೆ ॥ ೩೪ ॥

ಕಾಮ್ಯಕರ್ಮದಲಿ ಉತ್ಸಾಹವು । ವಿಷ್ಣು । ಧರ್ಮದಲಿ ನನಗಿನ್ನು ಮರೆವು ॥
ಗ್ರಾಮ್ಯಸುಖದನುಭವಗಳಿಂದ । ನಿತ್ಯ । ನಿಮ್ಮಂಘ್ರಿಯನು ಮರೆದೆ ಮುಕ್ಕುಂದಾ ॥ ೩೫ ॥

ಕೃಪಣ ಬುದ್ಧಿಯಲಿ ನಾ ಕೆಟ್ಟೆ । ಭವ । ವಿಪಿನಾಟಣೆಗೆ ಒಡಂಬಟ್ಟೆ ॥
ಕಪಟ ಗೃಹಕ್ಷೇತ್ರ ಹೊಂದಿಹೆನು । ನಿತ್ಯ । ತೃಪುತ ತವ ಜನಕೆ ದೂರ ಹೆನು ॥ ೩೬ ॥

ಇಂದ್ರಿಯಗಳಿಗೆ ಸಹಾಯವಾಗಿ । ಮನ । ನಿಂದಿರದು ತವ ಚರಣಕೆ–ರಗ ॥
ದಂದುಗ ಬಡಿಸುವದುರ್ವಿಷಯ । ದೂ । ರ್ವಂದದಿ ಕಡೆಹಾಯಿಸು ಜೀಯ ॥ ೩೭ ॥

ನನ್ನ ಪ್ರಯತ್ನದಿ ನಿನ ಕಾಣೆ । ಹರಿಯೆ । ನಿನ್ನನುಗ್ರಹವಾದವಿನ್ನೆ !
ಧನ್ಯನಾನಹೆನು ಸುಪ್ರಸನ್ನ । ಸಿರಿ। ಸನ್ನುತ ಸುಜನರ ಜೀವನ್ನ ॥ ೩೮ ॥

ಮಹಾನುಭಾವರ್ಗೆ ಶ್ರೀಚರಣ । ಸಾಧ್ಯ । ವಹುದು ದುರ್ಲಭವು ಕರು
ಣಾರ್ಣ ॥

ಈ ಹೊತ್ತು ಅನುಗ್ರಹ ಪ್ರಸಾದ । ವಾಗಿ । ಬಾಹ್ಯಾಂತರ ಕಂಡೆನು
ಮುಕ್ಕುಂದ ॥ ೩೯ ॥

ಆರೊಡೆಯರಿಲ್ಲ ನಿನ್ನ ಬಿಟ್ಟು । ಪಾ । ದಾರವಿಂದಪತ್ರದ್ಯನ್ನಿಟ್ಟು ॥
ತಾರಿಸು ಭವಾಬ್ಧಿಯನು ಕೃಷ್ಣ । ನಿನ್ನ । ಸಾರಿದೆನು ವೃಷ್ಣಿಜವರಿಷ್ಠ
॥ ೪೦ ॥

ನವೊ ನವೊ ಅನಂತಶಕ್ತ । ನವೊ । ನವೊ ವಿಜ್ಞಾನಂದಗಾತ್ರಾ ॥
ನವೋ ಪ್ರಧಾನಪುಂಸೇಶ ಶ್ರೀಶಾ । ನವೋ । ನವೊ ವಾಸುದೇವ
ಪರೇಶ ॥ ೪೧ ॥

ನವೊ ನವೊ ಭೂಭಾರಹರಣ । ನವೊ । ನವೊ ಪ್ರಪನ್ನಜನರಿಗಾ
ಭರಣ ॥
ನವೊ ನವೊ ಪ್ರಮತ್ತಖಳಮಥನ । ನವೊ । ನವೊ ಪುಣ್ಯಾನಂತಗುಣ
ಕಥನ ॥ ೪೨ ॥

ಅಘಮರಷಣದಲಿಯುಕ್ರೂರ । ಕಂಡ । ನಿಗಮನುತಾನಂತನ ಧೀರ ॥
ಜಗದೇಕ ಪ್ರಸನ್ನ ವೆಂಕಟಪನ । ಲೀಲೆ । ಸೊಗಸಾಗಿ ಪೇಳುವದೇ
ಪುಣ್ಯ ॥ ೬೩ ॥

ಶಬ್ದಾರ್ಥ:—ಓತಪ್ರೋತಾಗಿ=ಎಲ್ಲ ಕಡೆಗೂ ಹಬ್ಬಿ. ಉತ್ತಮಾಂಗರುಹ =ತಲೆಗೂದಲು. ಪಕ್ಷ್ಮ=ರೆಪ್ಪೆಯ ಕೂದಲು. ಆಮ್ನಾಯನ=ಕಾಣಿಕೆ. ಅಕೂಪಾರ=ಆಮೆ. ದೃಪ್ತ=ಸೊಕ್ಕಿದ. ದಂದುಗ=ಕಷ್ಟ, ಚಿಂತೆ. ಸಾಂಗತ್ಯವೃತ್ತ. ೮೦೩ ನುಡಿಗಳು.

---

೫೮

ರಾಗ ಕಲ್ಯಾಣಿ — ಏಕ ತಾಳ.

ಶ್ರೀಕೃಷ್ಣಪಾದಸರೋರುಹ ಹೊಂದಿದ । ಏಕಾಂತಜನವಿಷಯಗಳಾ ॥
ಬೇಕೆನರು ಭಕ್ತಿ ಸಾಕೆನರು ಜ್ಞಾ । ನಾಕರರ್ಭವವಿರಹಿತರು ॥ ಪಲ್ಲ ॥

ದಾನೇಶ್ವರನಿಗೆ ನೀರಿನೊಳಗೆ ಭಗ । ವಾನ್ನಿಜ ದರುಶನವಿತ್ತು ॥
ಮಾನದಲ್ಯವನ ಸ್ತುತಿಯ ಕೇಳ್ಯೊಲಿದಂತ । ರ್ಧಾನವನೈದಿದ ಕರ್ತು ॥ ೧ ॥

ತೀರದಿ ಕುಳಿತು ನಿತ್ಯ ಸತ್ಕ್ರಿಯೆ ಮುಗಿಸಿದ । ಶ್ರೀಹೃಷೀಕೇಶ ಕೃಷ್ಣ ಪ್ರಿಯ ॥
ನೀರನುಳಿದು ನಡೆತಂದನು ತನ್ನಯ । ತೇರಿನೆಡೆಗೆ ಗಾಂದಿನೇಯ ॥ ೨ ॥

ನಾರಾಯಣರಿಬ್ಬರಿಗೆ ನಮ । ಸ್ಕಾರ ಮಾಡಿದ ಸಾಷ್ಟಾಂಗ ॥
ಭೂರಿಪ್ರೇಮದಿ ನಯನದಿ ಸುಖಬಾಷ್ಪದ । ವಾರಿಯ ರೋಮಪುಳಕಾಂಗ ॥ ೩ ॥

ಕರವೆರಡು ಮುಗಿದು ನಿಂತಿರೆ ಕೇಳಿದನೊಂದು । ಪರಿದೋರುವದು ನಿನ್ನ ವದನ ॥
ಅರಿದೇನನೀ ಕಂಡೆ ಅದ್ಭುತವನ್ನು । ನೀರಿನೊಳಗೆ ಪೇಳ್ವದನ ॥ ೪ ॥

ಧರೆಯಲಿ ಕಂಡಂತಾಶ್ಚರ್ಯಬಡುವೆ ವಿ–। ಸ್ತರಿಸೆನೆ ನುಡಿದನಾ ಸಚಿವಾ॥
ಹರಿ ನಿನ್ನ ಮಹಿಮೆಯಗಾಧವು ವಿಶ್ವಾಂ–। ತರಿಯ ನಮೋ ನಮೊ ದೇವಾ ॥ ೫ ॥

ಸ್ವಾಮಿ ಕೃಪಾನಿಧೆ ಅಘಮರ್ಷಣದಿ ಮ–। ಹಾಮಹಿಮೆಯ ತೋರಿಸಿದೆ ॥
ಭೂಮಿಲಿ ಕಂಡಂತೆ ಜ್ಞಾನಾನಂದಮಯ । ಶ್ರೀಮೂರ್ತಿಯ ಪ್ರಕಟಿಸಿದೆ ॥ ೬ ॥

ಶ್ರೀಮಾಯಾಪತಿ ಅಜಭವಸುರಮುನಿ । ಸ್ತೋಮಸನ್ನುತ ವಿಶ್ವಾತ್ಮಾ ॥
ನಾಮನುಜನು ಕಣ್ಮನದಣಿ ಕಂಡೆನು ಭಕ್ತ–।ಕಾಮಧೇನುವೆ ಅಂತರಾತ್ಮ॥ ೭ ॥

ಹೀಗೆಂದು ನಡಿಸಿದ ರಥವನು ಮಥುರೆಗೆ । ಬೇಗಚ್ಯುತಹಲಿಯೊಡನೆ ॥
ಆ ಗುಣನಿಧಿ ವಸುದೇವನ ತನಯನ । ಆಗಮನವನು ಕಂಡೊಡನೆ ॥ ೮ ॥

ಆಗ ತರು ಗ್ರಾಮಗ್ರಾಮದವರು ಬಂದು । ಬಾಗಿ ತಲೆಯ ಸ್ತೋತ್ರ ಮಾಡಿ ॥
ಸಾಗಿದರ್ನಗರಕೆ ಉಪವನದಲಿ ನಿಲ್ಲ–। ಲಾಗಿ ಜನರ ಪರಾಣ್ಮ ನೋಡಿ ॥ ೯ ॥

ನಂದಾದ್ಯರ ನಿಲಿಸಿದನು ಮುಕುಂದನು । ಗಾಂದಿನೇಯನ ಕೈಯಪಿಡಿದ ।
ಮಂದಹಾಸದಿ ನುಡಿದನು ಘನಪ್ರೇಮದಿ । ಇಂದಿರೆಯರಸ ಗೋವಿಂದ ॥ ೧೦ ॥

ಮುಂದೆ ನೀ ಮನೆಗೈದು ರಥಸಹ ಪಟ್ಟಣವ । ಚೆಂದವ ನೋಡುತ್ತ ಬಹೆವು ॥
ಎಂದ ಮಾತಿಗೆ ನುಡಿದನು ಅಕ್ರೂರನು । ತಂದೆ ಅಧೋಕ್ಷಜ ನೀವು ॥ ೧೧ ॥

ಇಂದೆನ್ನ ಬಿಡದಿರಿ ನಿಮ್ಮ ಪದಾಬ್ಜವ । ಹೊಂದಿದೆ ಎನ್ನ ಜೀವನ್ನ ॥
ಮುಂದೆ ನಾ ನಗರಕೆ ಮನೆಗೈದಿ ಮಾಡುವ । ದಂದುಗವೇನು ಪ್ರಸನ್ನ ॥ ೧೨ ॥

ಬಂದು ನನ್ನಾಲಯ ಪವಿತ್ರಮಾಡು ಗೋಪ । ವೃಂದದೊಡನೆ ಭಕ್ತ ಬಂಧೋ ॥
ವೃಂದಾರಕಋಷಿಪಿತೃನೃಪಕುಲಕಂಘ್ರಿ । ದ್ವಂದ್ವ ದುರ್ಲಭ ಗುಣ ಸಿಂಧೋ। ॥ ೧೩ ॥

ನಿನ್ನಂಘ್ರಿರಜ ಗೃಹಮೇಧಿಗಳ್ಗೆ ದುರ್ಲಭ । ನಿನ್ನಂಘ್ರಿ ಶೌರಿ ಪಿತೃಸುರರ ॥
ಧನ್ಯರ ಮಾಳ್ಪುದು ಬಲಿಯುವನಿಯು ಎಲ್ಲ । ನಿನ್ನಂಘ್ರಿ ಶ್ಲಾಘಿಸಿತು ಧೀರಾ ॥ ೧೪ ॥

ನಿನ್ನಂಘ್ರಿ ಸೋಂಕಿದ ಬಲಿಗುನ್ನತ ಭಾಗ್ಯ । ನಿನ್ನಂಘ್ರಿಯುಂಗುಷ್ಠ ಜಲಾ ॥
ಪನ್ನಗಭೂಷಣ ಧರಿಸಿದ ಮೂಜಗ-। ವನ್ನು ಪಾವನ್ನ ಮಾಳ್ಪನಲಾ ॥ ೧೫ ॥

ಶ್ರೀದೇವದೇವ ಜಗತ್ಪತೆ ಪುಣ್ಯಕೀರ್ತೆ । ಯಾದವಕುಲವರೌಳಿರತ್ನ ।
ಆದಿನಾರಾಯಣ ಲಕ್ಷ್ಮೀರಮಣ ನಿನ್ನ । ಪಾದಾಂಭೋರುಹದಾಶ್ರಿ
ತನ್ನ ॥ ೧೬ ॥

ಆದರಿಸದಿರಲನಾಥ ನನಗೆ ದಾರು । ಆಧಾರವಿಲ್ಲ ದಯಾಬ್ಧೀ ।
ನಾ ಧನ್ಯನಹೆನು ಬಾಮನೆಗೆನ್ನುತ । ಪಾದಕೊಂದಿಸೆ ಸ್ತುತಿಯಿಂದ
॥ ೧೭ ॥

ಗಾಂದಿನೇಯನ ಸ್ತೋತ್ರವ ಕೇಳಿ ಯದುಪತಿ । ಮಂದಹಾಸದಿ ಸುರ
ವೌಳಿ ॥

ಎಂದನು ತ್ವದ್ಗೃಹದಲಿ ಪೂಜೆಯು ಕೊಂಬೆ । ಕೊಂದು ಕಂಸನ ನಾಳಿ
ನಲಿ ॥ ೧೮ ॥

ಬಂದು ನಿಮ್ಮಲುಂಬೆ ಯಾದವಾನ್ವಯ ದ್ರೋಹಿ । ಯೆಂದ್ಯಮಪುರಕಟ್ಟು
ವೆನು ॥
ಇಂದುವಂಶದ ಸುಹೃದ್ಬಂಧು ನಿಕರಕಾ-। ನಂದಾಮೃತ-ವನುಣಿಸು
ವೆನು ॥ ೧೯ ॥

ದಿವಿಜ ಭೂದಿವಿಜರ ಕಂಟಕ ತೆಗೆವೆನು । ಭುವಿಯ ಭಾರವ ಕಳೆಯು
ವೆನು ॥
ಸವೆಯದ ಸುಖದಲಿ ಸಜ್ಜನರಿರಲೆಂನು । ಭುವನ ಆಧಾರ ನುಡಿದನು
॥ ೨೦ ॥

ಪ್ರವಚನ ಕೇಳಿ ಶ್ವಫಲ್ಕಿಯು ಕಿಂಚಿತ್ತು। ಅವಿಮನೋಪಮ ತೆರಳಿದನು॥
ತವಕದಿ ನಮಿಸಿ ಪರತ ಪೊಕ್ಕು ಕಂಸಗೆ । ವಿವರಿಸಿ ಸ್ವಗೃಹಕ್ಕೈದಿದನು
॥ ೨೧ ॥

ಹಿಂದಾಗಿ ರಾಮಮುಕುಂದರು ನಗರಕೆ । ಬಂದರು ಗೋಪಮೇಳದಲಿ ॥
ನಂದಗೋಪನ ಮಕ್ಕಳು ಕೃಷ್ಣರಾಮರು । ಬಂದಿಹ ವಾರ್ತೆ ಪುರದಲಿ
॥ ೨೨ ॥

ಸಂದಣಿಸಿತು ಚತುರ್ವೀಥಿಲಿ ಜನಪದ । ಕಂದುಗೊರಳನ ಧನು
ರ್ಯಾಗ ॥
ಹೊಂದಿರಲರ್ಥಿಯ ನೋಡುತಲಿದ್ದರು । ಮಂದರಧರಬಲರಾಗ ॥ ೨೩ ॥

ಈ ಭಾಗವತ ದಶಮಸ್ಕಂದದ ಕಥೆ । ಶೋಭಿತ ಪ್ರಾಕೃತಪದವ ॥
ಶ್ರೀಭಗವಜ್ಜನ ಪೊಗಳಲು ಇಹಪರ । ಭೋಗಬಯಕೆ ಕೃಷ್ಣ ನೀವ
॥ ೨೪ ॥

ತ್ರೈಭುವನೇಶ್ವರ ಪ್ರಸನ್ನವೆಂಕಟ ಪದ್ಮ । ನಾಭನ ಜ್ಞಾನ ವೈರಾಗ್ಯ ॥
ಲಾಭವು ಭಕುತಿಯು ಭಾಗ್ಯವು ಬರುವದು । ಶೋಭನ ಆಯುರಾರೋಗ್ಯ
॥ ೨೫ ॥

ಶಬ್ದಾರ್ಥ:— ಗಾಂದಿನೇಯ=ಗಾಂದಿನಿ ಎಂಬ ಕಾಶೀರಾಜಕುವರಿಯ ಮಗ ಅಕ್ರೂರ. ಶ್ವಫಲ್ಕಿ=ಶ್ವಫಲ್ಕನೆಂಬ ರಾಜನ ಮಗನಾದ ಅಕ್ರೂರ. ಕಂದುಗೊರಳ=ಶಿವ. ಸಾಂಗತ್ಯವೃತ್ತ. ೬೪೪ ನುಡಿಗಳು

---

೫೯

ರಾಗ ಸಾರಂಗ — ಏಕತಾಳ

ಬಿಲ್ಲ ಹಬ್ಬವ ನೋಡುತ್ತೈದಲು । ರಾಮಕೃಷ್ಣ । ರುಲ್ಹಾಸದಿ ಮಧುರೆ
ಯೊಳು ॥ ಪಲ್ಲ ॥
ಗೊಲ್ಲಗೆಳೆಯರ ಮೇಳದಲ್ಲಿ । ಚೆಲ್ವ ಅಪರಾಣ್ಹದಲ್ಲಿ ।
ಎಲ್ಲ ಜನರು ಸಂವಣಿಸೆ । ಮೆಲ್ಲನೆ ನಿವಾರಿಸೆ ॥ ಅನುಪಲ್ಲ ॥
ಸ್ಫಟಿಕ ಸದ್ಗೋಪುರಾವಳಿ ಹೇಮಕ । ವಾಟ ಆರುಪುಟ ತಾಮ್ರದಲಿ ॥
ಪಾಟಿಸು ಗಭೀರ ಪರಿಖಾ । ಕೋಟಿಕೊತ್ತಳಂಗಳಿಂದ ॥
ನೋಟಕರ್ಗೆ ಆಶ್ಚರ್ಯ । ವಿಟಪವುಪವನಗಳ ॥ ೧ ॥
ಸಾರಿಪ ದ್ವಿಜಾಳಿರವಗಳು ಅಲ್ಲಿಗಲ್ಲಿ । ಹಾಟಕ ತೋರಣ ಸಾಲುಗಳು॥
ನೀಟಾದ ಹರ್ಮ್ಯಗಳು ಶೃಂ । ಗಾಟಕ ಭವನ ಭಿತ್ತಿ ॥
ಕೋಟಿ ಕೃತ್ರಿಮ ವಿಹಂಗ । ನಾಟ್ಯಗಳಿಂದೊಪ್ಪುವ ॥ ೨ ॥

ಪ್ರಭೆಯುಲಿಪ್ಪ ವಜ್ರವೈಢೂರ್ಯ ನೀಲರತ್ನ । ನಿಬಿಡಾರುಣ ವಿದ್ರುಮಾವಳಿಯ ।
ಸುಬರುಹಿಶುಕಪಿಕೌಘ । ಶುಭರವ ಶ್ರವಣಗಳ್ಗೆ ।
ವಿಭವ ಸೌಖ್ಯ ಬೀರುತಿಪ್ಪ । ಸಭೆಗಳಿಂದ ರಾಜಿಪ ॥ ೩ ॥

ನರ್ತಿಪ ಮರಾಳಕುಲವು । ಅವಿರಳ ಸು । ಚಿತ್ರಪತಾಕಾ ಕೇತುಗಳು ॥
ಛತ್ರ ಮೆರೆವ ಸೀಗುರಿ । ಒತ್ತಿಡಿದ ವೀಥಿಗಂಧ ॥
ಸಿಕ್ತ ಆಪಣಂಗಳಲಿ । ವೊತ್ತ ಕುಸುಮರಾಶಿಯು ॥ ೪ ॥

ಅಂಕುರಶ್ರಾವಿಗಳು ದಧಿಜಲ । ಕದಡು ಪೂ । ರ್ಣಾಂಕ ಕುಂಭತೆಂಗು ತುಂಡುಲಾ ।
ಝೇಂಕರಿಪ ಮಧುಪದಾಮಾ । ಲಂಕೃತದ ರಂಭಾಪೂಗಾ ।
ದ್ಯಂಕಿತಚತ್ವರಿಗಳ । ಶಂಖ ಸೀರಪಾಣಿಗಳು ॥ ೫ ॥

ಆಮೋದಮಯಾಗರು ಧೂಪವು । ಗಂಧಕುಸುಮ । ದಾಮ ಅಪರಿಮಿತ ದೀಪವು ॥
ಹೇಮಮಣಿಮಂದಿರ ಸೌ । ದಾಮದಾ ಸಿಂಗರದ ದ್ವಾರ ।
ಸುಮನೋಹರವಾಗಿರೆ । ರಾಮಾಚ್ಯುತರು ತೋಷದಿ ॥ ೬ ॥

ವಸುದೇವಕುಮಾರಂಬ್ಬರು । ಬಂದರೆಂದು । ಶಶಿಮುಖಿಕೆರ್ಳಿ ಮನೆಯೊಳು ।
ಅಶನವ ಬಿಟ್ಟು ಕೃಷ್ಣ- । ನೆಸೆವ ಸೌಂದರ್ಯಕ್ಕೆ ಮೆಚ್ಚಿ ।
ಮಿಸುನಿಪ್ರಾಸಾದಾಗ್ರದಿ ಸಂ- । ತಸದಿ ನೋಡುತಿದ್ದರು ॥ ೭ ॥

ಗೃಹಾಪತ್ಯ ಬಿಟ್ಟು ಬಂದರು । ಭೂಷಣಗಳ । ದೇಹಕೆ ಹೊಂದದೆ ಬಂದರು ॥
ಬಾಹುಬಂದಿಯೊಂದೆ ವಲಯುಸು- । ಹೇಮಕುಂಡಲವೊಂದೆ ॥
ಆ ಹೆಂಗಳು ಧರಿಸಿ ಕೃಷ್ಣ । ಸ್ನೇಹಕೊದಗಿ ಬಂದರು ॥ ೮ ॥

ಒಂದೆ ಕಣ್ಣೆ ಕಜ್ಜಲಿಟ್ಟರು । ಹಾರಪದಕ । ಬಂಧಿಸಿ ಮಧ್ಯಕ್ಕೆ ಬಂದರು॥
ಹೊಂದಾಮುಗಳಂಘ್ರಿಗಿಟ್ಟು । ಒಂದೆ ಶ್ರುತಿಗೆ ಮೂಗುತಿಟ್ಟು ॥
ಇಂದು ಮುಖಿಯುರೆರೆಕೊಳುತ । ನಿಂದು ನಗುತ ಬಂದರು ॥ ೯ ॥

ಶಿಶುಗಳ್ನನ್ಮೆಯು ನೀಯದೆ । ತೊಟ್ಟಿಲೊಳು ರೋ- । ದಿಸುವ ಮಕ್ಕಳನು ತೂಗದೆ ॥
ಬಿಸಜನೇತ್ರನು ಚಿತ್ತವಪಹಾ- । ರಿಸಲು ಓಡಿ ಬಂದರು ।
ಕುಸುಮಶರನಟ್ಟುಳಿಯು ಸೈ । ರಿಸದೆ ಸಾರಂಗಾಕ್ಷಿಯ ॥ ೧೦ ॥

ಭ್ರಮಿಸಿ ಕಾಮಿನಿಯರ ತಂಡವನು । ವಾಸುದೇವ । ಕಮನೀಯ ರೂಪ ತೋರ್ದನು ॥
ರಮಣಿಯರು ಹರ್ಮ್ಯಾಗ್ರದಲ್ಲಿ । ರಮೆಯರಸನ ಕೃತಿಗೆ ಮೆಚ್ಚಿ ।
ಸುಮನಸಾನನ ನಟ್ಟು ಮೌನಿ- । ಚಮುದೊಲು ಪ್ಯೆಮತೆವರು ॥೧೧॥

ಹಸಿತವದನಾಪಾಂಗದಿಂದಲಿ । ನೋಡಿದನು । ಶಶಿಮುಖೀರ ಮದನನ ನಯ್ಯನು ॥
ಕುಸುಮಬಾಣನಂಬುಗಳು । ಅಸಿಯುರಿದೆಗೆ ನಾಂಟುತಿರಲು ॥
ನಸುನಗೆಯು ಸುಧೆಯುನೂಡಿ । ಅಸಮಸುಖವ ನಿತ್ತನು ॥ ೧೨ ॥

ದರ್ಪಕನ ದರ್ಪನಿಲ್ಲಿಸಿ । ಹರ್ಮ್ಯಾಗ್ರದೋ- । ಳಿಪ್ಪ ನಾರಿಯರ ಮನ್ನಿಸಿ ॥
ಒಪ್ಪಿದ ದ್ವಿಪೇಂದ್ರನಂತೆ । ಸರ್ಪತಲ್ಪ ಸಂಕರ್ಷಣರು ॥
ಸರ್ಪವೇಣಿಯರ್ಗಾನಂದಾ- । ನಲ್ಪ ವಾರ್ಧಿಲಿಟ್ಟರು ॥ ೧೩ ॥

ಕುಸುಮನೇತ್ರಿಯರ್ಹರಿಬಲರ ಮೇಲೆ । ಮಳೆಗರೆದರು । ಕುಸುಮಲಾಜಾಕ್ಷತೆಗಳಿಂದಲೆ ॥
ವಸುಧೆಸುರರು ಗಂಧಾಕ್ಷತೆ । ವಸನ ಸ್ರಗ್ಗಂಧೋಪಾಯನದಿ ॥
ಅಸುರಹರನ ಪೂಜಿಸಿದರು । ಅಸಮ ಭಕ್ತಿಯಿಂದಲಿ ॥ ೧೪ ॥

ಸುದತೆ ಗೋಪಿಯರ್ಮುನ್ನ ಮಾಡಿದ । ತಪದ ಫಲವು । ಪದುಮನಾಭನವದನಾಮೃತವನು ॥
ಉದಯಾಸ್ತದಲಿ ಸೇವಿಸರೆಂ- । ದ್ವದಿಸನಕ್ಕಾ ರಾಮಕೃಷ್ಣರ ॥
ಇದಿರಿಗೆ ಬಂದಹಂಕಾರ । ಮದಸೊಕ್ಕಿದ ರಜಕನು ॥ ೧೫ ॥

ಮಧುರೆಯರಸು ತೊಡುವ ಅಂಬರವ । ಹೇರಿಕೊಂಡು । ಬದಿಗೆ ಬಂದಿರೆ ಬೇಡಿದ ಕೃಷ್ಣ ॥

ಹೊದಿಕೆ ತಾರೈ ಉತ್ತಮೋತ್ತಮ । ಮೃದುತರದವೆನ್ನಲವನು ।
ಪದಿಸಿವನು ಗದಿಗಗ್ರಜನಿಗೆ । ಮದನೇರಿದ ಮೂಢನು ॥ ೧೬ ॥

ಬಣಗು ಭೃತ್ಯರಿಗೆ ನೃಪತಿಯು । ಉಡುವ ವಸ್ತ್ರ । ಕನಸಿನೊಳಗರಿ ಸಲ್ಲವೆ ॥
ವನಚರಾರು ಸೊಕ್ಕಿದಿರಿ । ಅಣುಬಾಲಿಶರ್ಮರಣಬಯಸಿ ॥
ನೆನೆದಿರೀ ಮಾತನ್ನು ರಾಜ । ನನುಗರ್ನಿಮ್ಮ ಕೊಲ್ಲುವರು ॥ ೧೭ ॥

ದೃಪ್ತನುಡಿಯನಾಡಬೇಡಿರೋ । ಬದುಕಿ ಹೋಗಿ । ಗೋಪ್ತರಿಲ್ಲ ನಿಮಗೆ ಎಂದನು ॥
ಸಪ್ತದ್ವಯಭುವನೇಶ್ವರನು । ಮತ್ತವನ ತಲೆಯಿಳುಹಿದನು ॥
ಹಸ್ತದಿಂದ ಕ್ಷಿಪ್ರದ್ಯವನ । ಭೃತ್ಯರೋಡಿ ಹೋದರು ॥ ೧೮ ॥

ಅವನಿಪನ ವಸ್ತ್ರವಪ್ಪನೂ । ಗೃಹೀತರು । ಸುವಸನವನುಟ್ಟು ತೊಟ್ಟರು ॥
ಸವೆಯದಷ್ಟು ಸೂರಿಬಿಟ್ಟು । ಗೋಪರಿಗೆಲ್ಲ ಕೊಟ್ಟರು ।
ಅವನಿಗ್ಹಾಸಿಬಿಟ್ಟು ನಗುತ । ಭುವನೇಶ್ವರರು ನಡೆದರು ॥ ೧೯ ॥

ಮುಂದೆ ಬರಲು ವೇಷಕಾರನು । ಯಾವಕನೊಬ್ಬ । ಬಂದು ಅಂಘ್ರಿದ್ವಯ ಕೆರಗಿದನು ॥
ಇಂದಿರೇಶರಾಮರಿಗೆ । ಸುಂದರಾವರಣ ಹೊದಿಸೆ ॥
ಕಂದರ್ಪಕೋಟಿಲಾವಣ್ಯರು । ಹೊಂದಿದರು ಚಿತ್ರವ ॥ ೨೦ ॥

ಅವರಂಗದ ಸೇವೆಮಾಡಿದ । ಯಾವಕನು । ಸವೆಯದಿಹಾನಂದ ಗಳಿಸಿದ ॥
ಇವರ ಪ್ರಭೆಯು ತುಂಬಿತಲ್ಲಿ । ಯುವಬಾಲೇಭದಂತಿದ್ದಾರು ॥
ನವನೀಲಸ್ವೇತಾದ್ರಿಯಂತೆ । ಅವನಿಯಲ್ಲಿ ತೋರ್ದರು ॥ ೨೧ ॥

ಮುಂದೆ ದಾಮಕರ್ತ ಸುದಾಮ । ರಾಮಕೃಷ್ಣರಿ । ಗ್ವಂದಿಸಿದ ಸಾಷ್ಟಾಂಗ ಪ್ರಣಾಮ ॥
ಒಂದೆ ನಿಷ್ಠೆಯಿಂದ ಸ್ತೋತ್ರ । ನಂದದಿಂದ ಮಾಳ್ಪನಾ ಸ- ॥
ನ್ಮಂದಿರದಿ ಪೂಜೆಗೊಂಡು । ಸುಂದರರು ಒಪ್ಪಿದರು ॥ ೨೨ ॥

ಇಂದೆನ್ನ ಜನ್ಮವೆ ಸಫಲವು । ಶ್ರೀನಾಥ ನೀವು । ಬಂದಿರಿ ನೂರೊಂದು ಕುಲವು ।

ಹೊಂದಿದವರು ಮುಕ್ತಿನಗರ । ಸಂದೇಹವಿಲ್ಲವು ಪಾಂಸು ॥
ಹೊಂದಲಾಗಿ ಗೃಹಪವಿತ್ರ ಮ- । ದಾಂಧಕರ್ಗಿಲ್ಲವು ॥ ೨೩ ॥

ನೀವಿಬ್ಬರು ವಿಶ್ವಕಾರಣರು । ಪ್ರಭುಗಳು ಜಗ । ತ್ಪಾವನರು ಅವತಾರಿಕರು ॥
ದೇವದ್ವಿಜಗೋವು ರಕ್ಷಿ । ಸುವ ಧರ್ಮದೀಕ್ಷೆಯಿಂದ ॥
ದೇವಾರಿಗಳನ್ನು ಸವರಿ । ಭೂವಿಭಾರ ಕಳೆದಿರಿ ॥ ೨೪ ॥

ನಿಮ್ಮಿಂದೆ ಧರ್ಮಕೆ ಕ್ಷೇಮವು । ಸರ್ವರಿಗೆ । ಕರ್ಮಾನುಸಾರದ ಫಲವು ॥
ನಿಮಗೆ ಶತ್ರುಮಿತ್ರರು । ಸಮಾನರು ಭುವನಜೀವರ್ ।
ತಮತಮ್ಮ ಯೋಗ್ಯತೆಯಂತೆ । ಕರ್ಮವ ಮಾಡ್ಯುಂಬರು ॥ ೨೫ ॥

ನಿಮ್ಮ ಭೃತ್ಯಭೃತ್ಯಭೃತ್ಯರ । ಪರಿಚಾರಕ ನಾ । ಸನ್ಮಾರ್ಗದಿ ಸಿಕ್ಕಿಸೆನ್ನನು ॥
ನಿಮ್ಮ ವೈಷ್ಣವ ಜನರ ಶುದ್ಧೋ- । ತ್ತಮರ ಸೇವೆಯುಲೆನ್ನಿಟ್ಟು ॥
ದುರ್ಮತಿಯ ಬಿಡಿಸಯ್ಯ ಶ್ರೀ । ರಮ್ಮೆಯುಳ ರಮಣನೆ ॥ ೨೬ ॥

ಪಾಹಿ ಪಾಹಿ ಪ್ರಸನ್ನೇಶ್ವರ । ಮುಕ್ತಾಮುಕ್ತ । ದೇಹಿಗಳಿಗೆ ನೀ ನಿಯಂತಾರ ॥
ಪಾಹಿ ಪಾಹಿ ನಿರ್ಜರರ ಸ । ಮೂಹವಂದ್ಯಾನಂದಸಿಂಧೊ ॥
ಪಾಹಿ ಪಾಹಿ ದೇಹಿಕಸಂ । ದೋಹಾಮರಭೂರುಹ ॥ ೨೭ ॥

ರಾಮಾಚ್ಯುತರ ಸ್ತೋತ್ರಮಾಡಿದ । ಬಕ್ತಿಯುಲಿ ಸು । ದಾನು ಗಂಧಾಕ್ಷತೆ ವಸ್ತ್ರದಿ ॥
ಪೂಮಾಲೆಯಿಂ ಪೂಜಿಸಿದ । ಶ್ರೀಮದ್ರಮಾರಮಣ ಮುಕ್ತಿ ।
ಧಾಮದಲ್ಲಿ ಅವನ ತನ್ನ । ದಾಮಕರ್ತನ ಮಾಡಿದ ॥ ೨೮ ॥

ಪ್ರಸನ್ನವೆಂಕಟಕೃಷ್ಣಭಕ್ತರು । ಸಂಸೃತಿಯ । ಗಸಣಿಗಂಜದಿಹ ಧೀರರು ॥
ಮಸಪ್ರಮುತಿಯ ಮತವರ್ತಿಗಳು । ದಶಮಸ್ಕಂಧಾಮೃತವಾರ್ಧಿಲಿ ॥
ನಿತಿ ದಿನ ಸ್ನಾನಪಾನ ಮಾಡಿ । ಎಸೆವ ಮುಕ್ತಿಗೈದುವರು ॥ ೨೯ ॥

ಶಬ್ದಾರ್ಥ:— ಅಪರಾಹ್ಣ=ಸಂಜೆ. ಪಾಟಿಸಿ=ಪಚಿಸಿ. ಪರಿಖ=ಕಂದಕ. ವಿಟಪ=ಗಿಡ. ದ್ವಿಜ=ಹಕ್ಕಿ, ಹಾಟಕ=ಬಂಗಾರ. ವಿದ್ರುಮ=ಹವಳ. ಮರಾಳ=ಹಂಸ. ಸೀಗುರಿ=ಛತ್ರವಿಶೇಷ.

ಆಪಣ=ಅಂಗಡಿ. ಪೊತ್ರ=ಸಮೂಹ. ರಂಭಾ=ಬಾಳೆಯ ಗಿಡ. ವಿಸುನಿ=ಬಾಗಾಗಿ. ಅಪತ್ಯ=ಮಕ್ಕಳು. ಸರ್ಪತಲ್ಪ=ಹಾವಿನ ಹಾಸಿಗೆಯುವ. ಕೃಷ್ಣ. ದಾವು=ಮಾಲೆ. ಗಸಣೆ=ತಿಕ್ಕಾಟ. ಸಾಂಗತ್ಯವಿಭೇದವು. ೮೭೭ ನುಡಿಗಳು

---

೬೦

ರಾಗಸುಧ್ಯಮಾವತಿ. — ಜಕ್ಕಣಿತಾಳ.

ಭಾಗ್ಯವನೇಣಿಸಿದರೆಣಿಕಿಲ್ಲ । ಕುಬ್ಜೆ । ಯೋಗ್ಯತೆ ವಾಸುದೇವ ತಾನೇ ಬಲ್ಲ ॥ ಪಲ್ಲ ॥

ಭೋಜೇಂದ್ರನಂಗಲೇಪಸೌರಭಿಗಂಧ । ಭಾಜನದೊಳು ತುಂಬಿಕೊಂಡು ಬಂದು ॥

ರಾಜಮಾರ್ಗದಿ ನಿಂತ ತ್ರಿವಕ್ರೆಯುಳ ನೋಡಿ। ರಾಜೀವಲೋಚನ ನಗುತ ಕೇಳಿದನು ॥ ೧ ॥

ಆರು ನೀ ನಿನ್ನ ಪತಿಯಾರು ಈ ದಿವ್ಯ । ಸೌರಭಿಗಂಧ ಯಾರಿಗೆ ಒಯ್ಯುವೆ ॥

ತಾರೆ ನಮ್ಮಂಗಕುತ್ತಮಗಂಧ ಇದರಿಂದ । ಮೇರೆಯಿಲ್ಲದ ಸುಖಬಡುವೆ ನೀಯೆಂದ ॥ ೨ ॥

ಸೌಂದರ್ಯಸಾರ ತವ ಸಮ್ಮತ ದಾಸಿನಾ । ಇಂದೆನ್ನ ನಾಮ ತ್ರಿವಕ್ರೆಯೆಂದು ॥

ಗಂಧಾನುಲೇಪಕರ್ತ್ರಿಯು ನಾನು ಕಂಸಗೆ । ಕಂದರ್ಪ ನಿನ್ನಿಂದಾರು ಪ್ರೀಯರೆಂದಳು ॥ ೩ ॥

ಚಿದ್ರೂಪ ಮಧುರ ಪೈಶಲ ಉಕ್ತಿಯಿಂ ಬಲ । ಭದ್ರಗೆ ತನಗೆ ಬೇಡಲು ಬ್ಯಾಗೆ ॥

ಭದ್ರಾಂಗೆಯಿತ್ತಳು ಭಕ್ತಿಭರಿತೆಯಾಗಿ । ಸದ್ರೂಪ ಲೇಪನದೆಸೆವ ಗೋವಿಂದ ॥ ೪ ॥

ಕುಂಕುಮ ಕೇಶರ ಕಸ್ತೂರಿ ಗಂಧವ। ಸಂಕರಷಣ ತಾನು ಕೂಡ್ಯಂಗಕ್ಕೆ।
ಅಂಕಿತರಾಗಿ ಒಪ್ಪಿದರು ಕುಬ್ಜೆಯು ಮೂರು । ಡೊಂಕ ತಿದ್ದಿದನು
ಮುರಾರ್ದ ಮುಕುಂದ ॥ ೫ ॥

ಪಂಕಜನಾಭನ ಪ್ರಸನ್ನತೆ ಯಾರಿಗೆ । ಶಂಕೆಯಿಲ್ಲದೆ ಸೌಖ್ಯವವರಿಗೆ ॥
ಡೊಂಕತಿದ್ದಿದುದೇನಚ್ಚರಿಯಲ್ಲಾವಿನ್ಯೆಯು । ಶಂಕೆ ನೀಗಿಸುವ ಸರ್ವೇಶ
ಸರ್ವೇಶ ॥ ೬ ॥

ಸಂದರುಶನಸ್ಪರ್ಶನ ದಾರಿಗುಂಟವ- । ರೆಂದಿಗೆ ಮುಕುತಿಗೈದುವರು
ಸತ್ಯ ॥
ಇಂದಿರೆಯರಸನ ಪಾದಾಬ್ಜಾಶ್ರಿತರಿಗೆ । ದಂದುಗದಾ ಭಯವೇಕೆ
ಚಿಂತ್ಯಾಕೆ ॥ ೭ ॥

ತ್ರಿವಕ್ರೆ ರುಚಿರವಕ್ತ್ರೆಯು ಕಾಲ್ಗಳಲ್ಲಿ ಶ್ರೀ । ತ್ರಿವಿಕ್ರಮ ಪದವನೊತ್ತಿ
ಇಟ್ಟು ॥
ದೇವೇಶ ದ್ವ್ಯಂಗುಲಿಪರಿಮಿತವೆತ್ತಿದ । ದೇವಿಯ ಚುಬುಕವೆತ್ತಿದ ಕೈಲಿ
॥ ೮ ॥

ವಕ್ರವು ರುಜುವಾಯಿತಬಲೆಗೆ ಆ ಕ್ಷಣ । ಶಕ್ರಾಂಗನೆಯಂತೆ ತೋರ್ದ
ಳಾಗೆ ।
ಕರ್ಕಸ ಕುಚಭಾರ ಕೃಶಮಧ್ಯದಿಂದೊಪ್ಪಿ । ಚಕ್ರಿಯ ಬಳಿಯೆ ನಿಂತಳು
ಲಜ್ಜೆಯಿಂದೆ ॥ ೯ ॥

ಶ್ರೀಕೃಷ್ಣಸ್ಪರ್ಶದಿ ಹೃಚ್ಛ್ರೀಯ ವರ್ಧಿಸೆ। ಆ ಕಾಂತೆ ಹರಿಯ ಉತ್ತರಿಯ
ವಸ್ತ್ರವ ॥
ಆಕಾಂಕ್ಷೆಯಿಂದ ಜಗ್ಗಿದಳ್ ಮಾತಾಡಿದಳ್। ಹೇ ಕಾಂತ ವೀರ ದೊರೆಯೆ
ಬಾ ಮನೆಗೆಂದು ॥ ೧೦ ॥

ಗುಣರೂಪಪೂರ್ಣ ನೀ ಕೇಳು ಪ್ರಾರ್ಥನೆ ದೀನ । ಜನದಯಾನಿಧೆಯೆನ್ನ
ಮನೆಗೆ ಬಂದು ॥
ಇನಿಗೋಲನಂಬ ಪ್ರೇರಿಸಿನೆ ನೀ ಪರಿಹಾರ । ವನು ಮಾಡು ಬಿಟ್ಟಿರ
ಲಾರೆ ನಿನ್ನೆಂದಳು ॥ ೧೧ ॥

ಮಾನಿನಿ ಹೀಗೆಂದರಣ್ಣನ ಮುಖನೋಡಿ। ಸಾನುಗ ಗೋವರ ನಗುತ ನೋಡಿ ॥
ಆ ನಾರಿಗೆಂದ ಮಂದಸ್ಮಿತೇಕ್ಷಣದಿ ಚಂ। ದ್ರಾನನೆ ಪೃಥು ಶ್ರೋಣಿ ಮಾತ ಕೇಳೆಂದ ॥ ೧೨ ॥

ವೃಂದಾರಕರ ಮನೊವ್ಯಥೆಯ ಬಿಡಿಸಿ ನಿನ್ನ। ಮಂದಿರಕೆ ಬಹೆ ನಡೆಯೆನ್ನುತ॥
ಹೊಂದಿದಮೃತವಾಕ್ಯದಿಂದ ಮನ್ನಿಸಿ ಗೋವ। ವೃಂದ ಸಹಿತ ಅಣ್ಣನೊಡ ನೈದೆ ಮುದದಿ ॥ ೧೩ ॥

ದೇವೇಶ್ವರರ ಪೂಜಿಸಿದರು ಸುಜನರು। ಭಾವಜ್ಞರು ಸ್ತೋತ್ರವಂದನೆಯಿಂ ॥
ಪವುರಜನರಿಗೆ ಕೇಳಿದನು ಧನುಷಸ್ಥಳ । ದಾವದೆನ್ನುತ ಸರ್ವಜ್ಞರು ನರ ರಂತೆ ॥ ೧೪ ॥

ಇವರ ಲಾವಣ್ಯಾಮೃತವುಂಡು ಬುಧರಕ್ಷಿ । ಎವೆಯಿಕ್ಕದಲೆ ಕವಿದು ನೋಡುತ ॥
ಸವಿಯುದ ಸುಖಬಡುತಿದ್ದರು ಪ್ರಸನ್ನವೆಂಕಟ। ಭವನ ರೌಹಿಣೆಯರು ಕಂಡರು ಧನುವ॥ ೧೫ ॥

ಶಬ್ದಾರ್ಥ:— ಭಾಜನ=ಪಾತ್ರೆ. ಪೈಕೀ=ಸ್ಪಷ್ಟ. ಚುಬುಕ=ಗದ್ದ. ಕೃಷ್ಣಪ್ರಿಯ= ಆನಂದ. ಪೃಥು=ದೊಡ್ಡ. ಸಾಗಕ್ಯವಿಭೇದವು. ಕಾಣಿನುಡಿಗಳು.

---

೭೧

**ರಾಗಪಹಾಡಿ. — ಅಷ್ಟತಾಳ.**

ಮುಕ್ಕಣ್ಣನ ವರಧನುವನು ಕಂಸನು। ಸೊಕ್ಕಿನ ಭಕ್ತಿಲಿ ಪೂಜೆಗಿಟ್ಟ ॥
ರಕ್ಕಸಾಂತಕ ಕೃಷ್ಣರಾಮರ ಕರೆಸಿರೆ। ಲೆಕ್ಕವೆ ಹುಲ್ಲು ಬಿಲ್ಲನು ಮುರಿವಾಟಾ ॥ ಪಲ್ಲ ॥

ಇಂದ್ರಚಾಪೋಪಮ ವಿಚಿತ್ರ ಧನುವನು । ಬಂದು ಕಂಡರು ರಾಮಕೃಷ್ಣ ರಾಗೆ ॥

ಗಂಧಮಾಲ್ಯಾಂಬರ ಧೂಪದೀಪಬಲಿ। ಯಿಂದರ್ಚನೆಗೊಂಡು ರಂಜಿಸಲು ॥ ೧ ॥

ತ್ವರಿಯದಿ ಬರುತಿರೆ ಹರಿರಾಮರಿಬ್ಬರಸು। ತರುವಿದರ್ ಮಾರ್ಗದಿ ಪರಿಚಾರರು ॥
ನೊರಜುಗಳಿಗೆ ಅಂಜಿ ಉರಿ ಹಿಂದಕಾಗ್ವದೆ। ಹರಿ ಹಿಡಿದನು ಎಡಗೈಯಲಿ ಬಿಲ್ಲ ॥ ೨ ॥

ಹೆದೆಯೇರಿಸಿದನು ವಿಶ್ವೈಕಶಾಸ್ತ್ರಾರ। ಮದಗಜೇಕ್ಷುದಂಡವ ಪಿಡಿದಂತೆ ॥
ಬದಿಯ ಕಾವಲಿನವರ್ಬೆದರಿ ಬೇಡೆನುತಿರೆ । ಪದುಮಾಕ್ಷ ಮಕ್ಕಳ ಲೀಲೆಯಂತೆ ॥ ೩ ॥

ಸಜ್ಜಿಸಿವನು ಸಕಲರು ಈಕ್ಷಿಸುತಿರೆ। ಭಜ್ಜಿಸಿದನು ಎರಡು ತುಂಡುಮಾಡಿ ॥
ಗರ್ಜಿಸಿತು ಛಟ್ ಛಟ್ ಸಿಡಿಲುಗಳವೋಲು। ನಿರ್ಜೀವರಂತೆ ಜನರ ಕಾಂತಿ ಹೋಗೆ ॥ ೪ ॥

ಗರ್ಜನೆಯಾಕಾಶಮಂಡಲ ತುಂಬಿತು। ದಿಗ್‌ಜಾಲವೆಲ್ಲವ ವ್ಯಾಪಿಸಿತು ॥
ಬೆಜ್ಜರವಡೆದನು ಕಂಸನು ಮೂರ್ಛೆಯೋಳ್ । ಜರ್ಝರಿತಾದನು ಧೈರ್ಯಗುಂದಿ ॥ ೫ ॥

ಕಾವಲಿದ್ದವರು ಕೋಪದಿ ರಾಮಕೃಷ್ಣರ। ನೀವು ಕಟ್ಟಿ ತಾವು ಕಟ್ಟೆಯೆಂಬ ॥
ಸೇವಕದುರ್ಮತಿಗಳನು ಧನುಶ್ಯಕಲದ್ವ । ಯುವನ್ನಿಡಿದು ಕುಟ್ಟಿದರ್ ಲೀಲೆಯಲಿ ॥ ೬ ॥

ಒರಳಿಗಿಕ್ಕಿದ ಧಾನ್ಯದಂತೆ ಹಿಟ್ಟುಹಿಟ್ಟು। ಘರಟ್ಟದ್ಹಾಗೆ ಮಾಡಿದರಾಕ್ಷಣ ॥
ದುರುಳ ಕಂಸನು ಮತ್ತೆ ಕಳುಹಿದ ಬಲವನು। ತರಿದು ತಿರುಗುತಿದ್ದರ್ ಪುರದೊಳಗೆ ॥ ೭ ॥

ರಾಜಿಸುತಿಪ್ಪರು ಪುರವ ಸಂಪದ ನೋಡಿ। ರಾಜವೀಧಿಲಿ ಗೋವಳರೊಳು ನಗುತ ॥
ಭ್ರಾಜತ್ಪರಾಕ್ರಮವನು ಕಂಡು ಸುಜನರು । ಈ ಜಗತ್ಪಾವನರಿವರೆಂದರು ॥ ೮ ॥

ಮೂಜಗದೊಳ್ ದೇವದನುಜರೊಳ್ ಕಾಣೆವೀ। ಸೋಜಿಗದ ಪರಾಕ್ರಮರ
ಸಮ ॥
ನೈಜಮಾನವರಲ್ಲ ಅಜಭವಸುರವಂದ್ಯ। ಈ ಜಗದಲಿ ಒಪ್ಪುತಿಹರೆಂದು ॥೯॥

ಗೋವಕ್ಕಳ ಸುಕೃತವ ನೋಡಿ ಆವಾಗ। ಜೀವನ್ಮುಕ್ತರಂತೆ ಸುಖಿಗಳಾಗಿ ॥
ಶ್ರೀವಾಸುದೇವನ ಸಮಾಶ್ರಿತರಾದರು । ದೇವಾಂಶರ್ ನರರರಲ್ಲವಿವರೆಂ
ದರು ॥ ೧೦ ॥

ಆ ವೇಳೆಯಲಿ ಭಾನು ಅಸ್ತಮಯವ ನೋಡಿ। ಶ್ರೀವಾಸುದೇವ ಬಲಗೋ
ವಳರು ॥
ತಾವು ಹೋದರು ತಮ್ಮ ಶಕಟವಿದ್ದಲ್ಲಿ ಜ । ಯವಂತರ್ ಧಾರ್ಮಿಕರ್
ದಯವಂತರು ॥ ೧೧ ॥

ತೊಳೆದು ಪಾದಾಬ್ಜವನುಂಡು ಕ್ಷೀರೋದನ । ಕಳೆದನಿಬವನು ಕಂಸನ
ಮತಿಯ ॥
ತಿಳಿದು ಬಲಮುರಹರರು ಸೌಖ್ಯದಲಾರಾತ್ರಿ। ಲಲಿತ ಸ್ವಾಪವ ಮಾಡಿದರು
ರಾಮಾಚ್ಯುತರು ॥ ೧೨ ॥

ಸತ್ಯಸಂಕಲ್ಪ ಶ್ರೀಕೃಷ್ಣಾಶ್ರಿತ। ಭೃತ್ಯಜನಾರ್ಥಪೂರಣ ಕಾರಣ ॥
ನಿತ್ಯ ನಿರ್ದೋಷ ಸಚ್ಚಾರಿತ್ರಾಂಬುಜನೇತ್ರ। ದೈತ್ಯಾಂತಕ ಪ್ರಸನ್ನವೆಂಕಟಾ
ದ್ರೀಶ ॥ ೧೩ ॥

ಶಬ್ದಾರ್ಥಃ— ಬೆಜ್ಜರ=ಬೆದರಿಕೆ. ಘರಟ್ಟ=ಬೀಸುವಕಲ್ಲು. ಸ್ವಾಪ=ನಿದ್ರೆ. ಸಾಂಗತ್ಯ
**ವಿಭಾಗದವು. ೯೦೫ ನುಡಿಗಳು.**

---

೭೨

**ರಾಗ. ಪಂತುವರಾಳಿ — ಅಷ್ಟತಾಳ.**

ರಾಮಕೃಷ್ಣರ ದ್ರೋಹದ ಫಲ ತತ್ಕಾಲ ಒದಗಿತು ।
ಕಾಮಸಾತ್ಮ ಕಂಸನಿಗುತ್ಪಾತ ತೋರಿತು ॥ ಪಲ್ಲ ॥

ಸುನದಿ ಯೋಚಿಸಿದನು ಬಿಡದ್ಯಾಮಿನಿ ಸಮಗ್ರವ ।
ಧನುವು ಮುರಿದ ಕ್ಲೇಶ ತನ್ನ ಜನರ ಹಿಂಸೆಯು॥
ನೆನೆದು ನೆನೆದು ರಾಮಕೃಷ್ಣರ ಘನವಿಕ್ರಮವನು ।
ಎಣಿಸಿ ದುರ್ಮತಿ ಭೀತಿವಿಡಿದು ಅನಿಮಿಷನವನು ॥ ೧ ॥

ತನುವಿನಲ್ಲಿ ತಲೆಯು ದೋರದು ಕನ್ನಡಿಯೊಳಗೆ ।
ದಿನಪಮಂಡಲವೆರಡು ತೋರಿದವನಿತರೊಳಗೆ ॥
ಮನಸಿನಲ್ಲಿ ನೊಂದು ಕುಳಿತು ನೋಡುತಿರಲಿಕ್ಕೆ ।
ಘನ ದುರ್ನಿಮಿತ್ತ ಕಂಡಂಜುತಿದ್ದನು ಕ್ಷಣಕೆ ಕ್ಷಣಕ್ಕೆ ॥ ೨ ॥

ದೇಹದ ನೆಳಲು ಛಿದ್ರಛಿದ್ರಾಗಿರೆ ಅಹರ್ನಿಶಿ ಕಿವಿಯಲಿ ।
ಇಹಂಥ ಪ್ರಾಣಘೋಷವಡಗಿ ಬಹಳ ಭಯದಲಿ ॥
ಮಹಿಜವೆಲ್ಲ ಸುವರ್ಣವಾಗಿ ಇಹುದು ಕಂಡನು ।
ಮಹಾಮದಾಂಧ ತನ್ನ ಹೆಜ್ಜೆಗಳ ಮಹಿಯಲಿ ಕಾಣನು ॥ ೩ ॥

ಬವಣೆಗಂಜಿ ಬೆದರ್ವ ಭ್ರಾಂತವಿವಶನಾಗುವಾ ।
ಜವನ ದಿಕ್ಕಿಗೆ ಕನಸಿನಲ್ಲಿ ಖರವನೇರೈಯ್ದುವಾ ॥
ಶವವನಪ್ಪುತ ಹೋಗುವ ಕಣಿಗಿಲ್ ಹೂವಿನ ಮಾಲೆಯನು ।
ಗ್ರೀವದೊಳಾಂತು ಹೂಸಿ ದಿಗಂಬರ ಸವಿವ ಬಿಸವನು ॥ ೪ ॥

ಈ ವಿಧವುತ್ಪಾತ ಜಾಗ್ರತೆ ಸ್ವಪ್ನ ವಿವರ ಕಂಡನು ।
ಕಾವಲಿಲ್ಲದ ಮೃತ್ಯುವ ನಿಶ್ಚಯಿಸಿ ಅವನು ಅಂಜಿದನು ॥
ಲವ ಯುಗಾಗಿ ರಾತ್ರಿಯ ನೂಕಿದ ಸವೆಯದ ಕಷ್ಟದಲಿ ।
ರವಿಯು ಉದಿತನಾದ ಬಳಿಕುತ್ಸವವು ಮನದಲಿ ॥ ೫ ॥

ಹವಣಿಸಿದನು ಮಲ್ಲರ ಕ್ರೀಡೆಗೆ ಲವಲವಿಕೆಯಲಿ ।
ಅವನಿಪತಿಯು ರಂಗವ ಮಂಡಿಸಿ ನವಮಂಚಗಳಲಿ ॥
ಶಿಬಿಯ ರಚಿಸಿ ತುತೂರಿಭೇರಿವಾದ್ಯವ ಘೋಷಿಸಿದ ।
ಟವಟವಿಸುವ ತುಂಗಮಂಟಪ ಸಿಂಗರಿಸಿದ ॥ ೬ ॥

ಸುತ್ತಲು ಪೂಮಾಲೆ ಪತಾಕೆ ತೋರಣ ಚಿತ್ರವಿಚಿತ್ರಗಳು ।
ಅತ್ಯಂತಾಲಂಕರಿಸಿದ ಮಂಚಗಳು ಎತ್ತೆತ್ತ ರಾಜಿಸಲು ॥

ಅರ್ಥಿಲಿ ದಿದೃಕ್ಷುಗಳು ಪೌರಜನ ಪೃಥ್ವೀಸುರರ್ ಸಮೂಹ ।
ಸತ್ವರ ಬಂದು ಬಂದು ತಮ್ಮ ಆಸನ ಹತ್ತಿ ನೋಡುತಲಿಹ ॥ ೭ ॥

ದೈದೀಪ್ಯತುಂಗಮಂಚದಲಿ ಭೋಜೇಂದ್ರನೈದಿ ಕುಳಿತ ಹೊಂದಿ ।
ಪ್ರಧಾನರಮಾತ್ಯರೊಡನೆ ಒಪ್ಪಿದ ಭೂಧರಮಂಡಲದಿ ॥
ಹೋದ ತೇಜಾಗ್ನಿಯಂತಿದ್ದನು ರಾಜೇಂದ್ರ ಶ್ರೀಧರನ ದ್ರೋಹದಿ ।
ಕೈದು ತಗಲಿದಂದದೆದೆದಿಗಿಲಿನಲಿ ನಾದಿದ ದುಶ್ಚಿತ್ತದಿ ॥ ೮ ॥

ರಂಗಕೈತಂದರು ದೃಪ್ತದಿ ಮಲ್ಲರು ಸಿಂಗರಿಸಿ ತಮ್ಮನು ।
ಸಂಗರದನುಗರು ಆಪ್ತರುಪಾಧ್ಯೇರು ಜಂಗುಳಿಗಟ್ಟೆಲ್ಲರು ॥
ಸಂಗೀತ ತುತ್ತೂರಿ ತಾಳ ಜಾಗಟೆ ಬಿರುದಂಗಳ ಚಾಣೂರಮುಷ್ಟಿಕಾ ।
ಹಿಂಗದೆ ಶಲ ತೋಸಲ ಕೂಟಾದ್ಯರ ಸಂಗಡಿಸಿ ಬಳಿಕ ॥ ೯ ॥

ಬಂದಿರೆ ವಾದ್ಯದ ಘೋಷದಲಿ ಮಷ್ಟಸಂದೋಹ ಒಪ್ಪಿತಲ್ಲಿ ।
ನಂದಗೋಪಾದ್ಯರುಪಾಯನವ ತಕೊಂಡು ಬಂದರು ರಾಜನಲ್ಲಿ ॥
ಮುಂದೆ ತಂದಿಟ್ಟರು ನೃಪಗೆ ನಮಿಸಿ ತಾವು ಹೊಂದಿದರ್ ಮಂಚಗಳ ।
ಚಂದದಿಂದುತ್ಸವವ ನೋಡುತ ಕುಳಿತರು ಬಂದು ಗೋವಳರ್ಮೇಳ
॥ ೧೦ ॥

ಶ್ರೀಕೃಷ್ಣ ಕೃಷ್ಣ ಸುಖಾರ್ಣವ ನಿರ್ಜರಾನೀಕಪ್ರತಿಪಾಲಕ ।
ಗೋಕುಲರಕ್ಷ ಗೋವಿಂದ ನಿರ್ದೋಷ ಗುಣಾಕರ ಮುಷ್ಟ್ಯಾರ್ದಕ ॥
ವೈಕುಂಠಮಂದಿರ ಸುಂದರ ವರಭುವನೈಕವ್ಯಾಪಕ ಮುರಾರೆ ।
ಶ್ರೀಕಾಂತ ಭೂಕಾಂತ ಏಕಾಂತ ಭಕ್ತಕೃಪಾಕರಾನಂತ ಹರೆ ॥ ೧೧ ॥

ಭೂಭಾರಹರಣ ನಿರ್ಜರಕ್ಷೇಮಕಾರಣ ಶೋಭನಸದ್ಗುಣಾರ್ಣವ ।
ತ್ರೈಭುವನಾಧಾರಾ ಪರಮಧರ್ಮೋದ್ಧರ ಲಾಭರಹಿತ ಉದಾರಾ ॥
ಗೋಭೂಸುರಾರ್ತಿಹಗೋಪವೇಷಧರ ಶ್ರೀಭೃತ ಸಕಲಾರ್ಥದಾ ।
ಭೂಭುಜಾರ್ಚಿತಪಾದ ಭಕ್ತವತ್ಸಲ ಹರೆ ಶ್ರೀಭಗವಜ್ಞಾನದಾತಾರಾ
॥ ೧೨ ॥

ಈ ಕಥಾಮೃತವನುಂಬುವ ಜಾಣಭಾಗ್ಯವು ಬೇಕೆಂದು ಬಯಸು
ವರು ।

ನಾಕಜನರ್ ಮುನಿಗಳು ನಿತ್ಯ ವಿರಕ್ತರು ಲೌಕಿಕೇಷಣರಿಕ್ತರು ॥
ಶ್ರೀಕರ ಪ್ರಸನ್ನವೆಂಕಟ ಕೃಷ್ಣನೊಲುಮೆಯಲಿ ವೈಕುಂಠಲಾಭವಕ್ಕು ।
ಏಕಾಂತಜನರೊಳು ವಾಸಬೇಕಾವರೆ ಅನೇಕಸಾಧನವಿನ್ಯಾಕೆ ॥ ೧೩ ॥

ಶಬ್ದಾರ್ಥ:—ಅನಿಮಿಷರು=ಎವೆಯಿಕ್ಕದೆ ನೋಡುವವರು. ಖರ=ಕತ್ತೆ. ಬಿಸ=ತಾವರೆಯ ದೇಟು. ಟವಟವಿಸು=ಮಿಂಚು. ದಿದೃಕ್ಷುಗಳು=ನೋಡಬಾಸೆಯುಳ್ಳವರು. ಭೂಭುಜ=ಅರಸು. ಲೌಕಿಕೇಷಣರಿಕ್ತರು=ಐಹಿಕಇಚ್ಛೆಯನ್ನು ತೊರೆದವರು. ಸಾಂಗತ್ಯವಿಭೇದವು. ನುಡಿಗಳು ೯೧೮.

---

೭೩.

ರಾಗ ಸಾರಂಗ ಝಂಪೆತಾಳ.

ಗಜಪಾಲ ಅಷ್ಟದಿಗ್ಗಜಪಾಲ । ಗಜವದನಜನಕಪಾಲ ॥
ಗಜರಿಪುವದನ ಹರಿಗೆ ಕುವಲಯಾಪೀಡಕನೊಬ್ಬ । ಗಜದನುನ ಘನವೆಯುವಗೆ ॥ ಪಲ್ಲ ॥

ಬಾಹ್ಯೋಪವನದಿ ಶಕಟಿಗಳ ಬಳಿ ಹರಿಬಲರು । ಅಹಸ್ಕರೋದಯದಲೆದ್ದು ।
ಸುಹಸ್ತ ಶೌಚ ಪೂಳ್ಪನಕ ಕೇಳಿವರು ಮತ್ತಮಲ್ಲರ । ಬಹಳ ದುಂ-ದುಭಿಘೋಷವ ॥
ಅಹನ್ನೀಕ ಮುಗಿಸಿ ನಡೆದರು ಶೀಘ್ರ ಭೋಜಪನ । ಗೇಹರಂಗದ್ವಾರದೆಡೆಗೆ ।
ಮಹಾಶೈಲದಂತೆ ತಮ್ಮ ನಿವೇಶಕೆ ಅಡ್ಡನಿಂ । ತಿಹುದು ಅಂಬಷ್ಟನಿಲಿಸೆ ॥ ೧ ॥

ಕಂಡು ಶ್ರೀಕೃಷ್ಣ ಪರಿಕರವ ಮಧ್ಯಕೆ ಸುತ್ತಿ । ಕೊಂಡು ಅಳಕವ ಕಟ್ಟಿದ ॥
ಶುಂಡಾಲವಂ ತೆಗೆಯೆ ಶೀಘ್ರ ಅಲಸದಲೆ ಉ-। ದ್ದಂಡತನವನು ತೋರದೆ ॥

ಡಿಂಡುಗೆಡಹುವೆ ನಿನ್ನ ಹಸ್ತಿಸಹ ಕಳುಹುವೆನು । ದಂಡಪಾಣಿಯು ನಗರಕೆ ॥
ಲೆಂಡತನ ಬೇಡ ನಿನ್ನಯು ಪಕ್ಷಪಾತ ಬಹ । ಹಿಂಡುವೀರರ ಸದೆವೆನು ॥ ೨ ॥

ಹೀಗೆನಲು ಕೋಪದಲಿ ಮಾವಟಿಗ ಗಜವನ್ನು । ಯೋಗಿಸಿವ ಕೃಷ್ಣೋಪರಿ ॥
ವೇಗದೈದಿತು ಪ್ರಳಯಕಾಲ ಕಾಲನ ರೂಪ ।ಹೋಗಿ ಶುಂಡಿಲಲಿ ಜಗ್ಗಿ–।
ಯೋಗೇಶ್ವರಾಚ್ಯುತನ ಹಿಡಿದರೆ ಜಗುಳಿ । ಬೇಗ ಅಧಮನ ವಂಚಿಸಿ ॥
ಆಗಡಗುತಿರಲಂಘ್ರಿಮೆಟ್ಟುಗಳ ತಪ್ಪಿಸಲು । ಮೂಗಿಲಾಘ್ರಾಣಿಸಿ ಗಜ ॥ ೩ ॥

ಮೇಗುಮೇಗ್ಯತ್ನಮಾಡಲು ದುಷ್ಟಶಾಸ್ತ್ರಾರ । ಬೇಗ ಪುಷ್ಕರ ತಪ್ಪಿಸಿ॥
ಆಗ ಪುಚ್ಛನ ಹಿಡಿದು ಜಗ್ಗಿಳೆವ ಭೂಮಿಮೇಲ್ । ಲಾಘವದಿ ಸ್ವತ್ತೈದು ಧನುವ ॥
ನಾಗಾರಿ ಅಹಿಯ ಲೀಲೆಯಲೊಯ್ದು ತಿರುತಿರುಹಿ । ದ್ವಾಗೆ ಅಪ್ರತಿಮಲ್ಲನು ಅ– ॥
ಮೋಘವಿಕ್ರಮ ಸವ್ಯದಕ್ಷಿಣಕೆ ಬಿಗಿದಾಡೆ। ನಾಗ ಭ್ರಾಂತಿಯನೈದಿತು ॥ ೪ ॥

ಭ್ರಾಮಣವ ಮಾಡಿದನು ಬಾಲಕರು ವತ್ಸವನು । ಭೂಮಿಯಲಿ ವಂಚಿಪಂತೆ ॥
ಶ್ರೀಮನೋಹರ ಹಸ್ತಿಮುಖದಿದಿರು ನಿಂತನು ಮ । ಹಾಮೃಗಾಧಿಪನ ತೆರದಿ ॥
ಆ ಮತ್ತಗಜವ ಬಡಿವನು ಕೈಲಿ ಭುವನನಿ । ಯಾಮಕನು ಚೆನ್ನಾಟದಿ॥
ತಾ ಮತ್ತೆ ಮುಟ್ಟಿ ಮುಟ್ಯೋಡಿದನು ಹಿಂದೆ ಗಜ । ಮುಂದೆ ಮುಂದಾಗೆ ಕೃಷ್ಣ ॥ ೫ ॥

ನಿಂತು ನಿಂತೋಡುವನು ತೋರ್ವನಡಗುವನೊಮ್ಮೆ। ದಂತೀಕರಕೆ ಸಿಲುಕಿದೊಲ್ ॥

ಭ್ರಾಂತಿ ಬಡಿಸುವ ಹಸ್ತಿ ಹಸ್ತಿಪಗೆ ಕ್ಷಣ ಕ್ಷಣಾ । ಚಿಂತ್ಯಾದ್ಭುತ ಕರ್ಮನು ॥
ಸಂತರ ಮನಕೆ ಖೇದ ತೋರುವುದು ಹರಿಗೆ ಜಯ । ಚಿಂತಿಪರು ಭಕ್ತರಾಗ- ॥
ನಂತ ಶಕ್ತ್ಯಾತ್ಮನ ಲೀಲೆಯಂ ಕಂಡು ಸುರ । ತಿಂಥಿಣಿಯು ಜಯ ಜಯವೆನೆ ॥ ೬ ॥

ಆಯಾಸಾವಂಶೆ ಬಿದ್ದೆದ್ದು ಓಡಿ ದೇವ- । ಮಾಯವು ತನಗೆ ತಿಳಿ ಯದೆ ।
ತಾಯ್ದೆದಿತಾಗಜವು ದಂತದಲಿ ಇಳೆಗಿರಿದು । ಹೋಯಿತೆಲ್ಲ ವಿಕ್ರ ಮವು ॥
ಶ್ರೀ ಯೊಶನ ಕಾಣದೆ ಮಹಾಮಾತ್ರ ಕ್ರೋ । ಧಾಯಮಾನದಿ ಬೆಂಬತ್ತಿ ॥
ನೋಯಿಸುವನೆಂದು ಓಡಿಸಿದ ಹರಿ ಬೆನ್ನತ್ತಿ । ವಾಯುವೇಗದಿ ಹಸ್ತಿಪ ॥ ೭ ॥

ಶ್ರೀಮದ್ರಮಾರಮಣ ನಿಂತನು ಕರಿಯ ಮುಂದೆ । ಬಾ ಮುಂದಕೆಂದು ಹಿಡಿದು ।
ಭ್ರಾಮಿಸುತ ಶುಂಡಾಲವಿಡಿದಪ್ಪಳಿಸೆ ತೀವ್ರ । ಭೂಮಿ ತಳದಲ್ಲಿ ನಗುತ ॥
ವೈಮಾನಿಕರು ಜಯ ಜಯ ಎನೆ ಕರಿಯ ಮೆಟ್ಟಿ । ಶ್ರೀಮನ್ನೃಸಿಂಹ ನಂತೆ ।
ಆ ಮತ್ತ ಗಜದ ದಂತಗಳೆರಡು ಕಿತ್ತಿ ಮ । ಹಾಮಾತ್ರನಂ ಜಡಿ ದನು ॥ ೮ ॥

ದಂತಿ ದಂತಿಪರಳಿದು ಬಿಸುಟು ನಡೆದನು ಒಂದು । ದಂತವಂಸದಲಿ ಧರಿಸಿ ।
ದಂತವೊಂದನು ಅಗ್ರಜಗೆ ಕೊಟ್ಟು ದುಷ್ಟಹರಾ- । ನಂತಶಕ್ತ್ಯಾತ್ಮ ಕೃಷ್ಣ ॥

ಕಾಂತಿಯಿಂದೊಪ್ಪಿದರು ರಾಮಾಚ್ಯುತರು ಮದದ । ದಂತಿರಕ್ತಬಿಂದು
ಸಿಡಿದು ।
ಎಂತು ನೀಲಾದ್ರಿ ರಜತಾದ್ರಿ ರಾಜಿಸುತಿಹವು । ಅಂತೆ ತೋರಿದರು
ಕಣ್ಗೆ ॥ ೯ ॥
ಸ್ವೇದಾಂಕಿತಾಸ್ಯಾಬ್ಜದತ್ಯಂತ ಸುಂದರರು । ಮೋದಸ್ಮಿತೇಕ್ಷಣದ
ವರು ।
ಐದಿದರು ರಂಗವನು ಆರಾರ ಯೋಗ್ಯತೆಯ । ಭೇದದಂತಲಿ ತೋ-
ರ್ದರು ॥
ಕಾದುರಿವ ಸಿಡಿಲಂತೆ ಮಲ್ಲರಿಗೆ ತೋರಿದರು । ಮೇದಿನಿಪರಂತೆ
ನರರ್ಗೆ ।
ಐದಂಬ ಸ್ತ್ರೀಯರಿಗೆ ಆಪ್ತ ಗೋಪಾಲರಿಗೆ । ಭೂಧರರ್ಗೆ ಶಾಸ್ತಾರ
ನೋಲ್ ॥ ೧೦ ॥
ಜನನಿ ಜನಕರ್ಗೆ ಅರ್ಭಕರ್ರಾಗ ಮೃತ್ಯು ಕಂ- । ಸನಿಗೆ ವೃಷ್ಣಿಗಳ
ಕಣ್ಗೆ ।
ಘನವರ್ಯರಂತೆ ಪರಾತ್ಪರರಂತೆ ತೋರಿದರು । ಮುನಿಜನಕೆ ರಂಗ
ದಲ್ಲಿ ॥ ೧೧ ॥
ಸವೆಯುದಹಂಕಾರವನು ಬಾಹ್ಯದಲಿ ತೋರುತಿಹ । ಭವಣೆಗಾಣನು
ಮುಂದಣ ।
ಲವಲವಿಕೆ ಮಾಡುತಿಹ ವ್ಯರ್ಥ ಉನ್ಮತ್ತ ನೀ । ಗಿವರ ಸಾಹಸಕೆ
ಕುದಿದನು ॥
ಪೀವರಭುಜ ಬಲಾಢ್ಯರು ವಿಚಿತ್ರ ವೇಷ । ಸುವಸನದಾಭರ
ಣರು ।
ದೇವೋತ್ತಮರು ರಂಗದಲಿ ಸಂಚರಿಸುತಿಹರು । ಪಾವನ ದೃಢಾ
ಕೃತಿಯಲಿ ॥ ೧೨ ॥
ನೋಡುವರ ಕಣ್ಮನಕೆ ಸುಧೆಯರಸತುಂಬಿ ಸು- । ಪ್ರೌಢಜನ
ಹರಿಯ ಸೌಂದರ್ಯ ।

ನೋಡಿ ಚಕ್ಷುಪುಟಗಳಿಂ ಪೀಯೂಷ ಪಾನವನು । ಮಾಡುವರು
ಮನದಣಿಯುದೆ ॥
ನೀಡಿ ನಾಲಿಗೆಯಿಂದ ಲಾವಣ್ಯಲೇಹನವ । ಮಾಡುವಂತಿಹ ಸುಜ
ನರು ।
ಗಾಢ ಘ್ರಾಣಿಸುತಿಹರು ಘ್ರಾಣದಿಂದಾಮೋದ । ಗಾಢಾಲಿಂಗಿಪರ್
ಬಾಹುಗಳಿಂ ॥ ೧೩ ॥
ಬಾಹ್ಯಾಂತರ ಪೂರ್ಣಾನನಾಬ್ಜವನು ನೋಡಿ ಜನ । ಮಹದಾಶ್ಚರ್ಯ
ಬಡುತಲಿ ।
ಸ್ನೇಹದಲಿ ಮಾತಾಡಿದರು ತಮ್ಮ ತಮ್ಮೊಳಗೆ । ಇಹ ಮಂಚದ
ತಾಣದಿ ॥
ಬಹಳ ವಿಕ್ರಮವನ್ನು ಕಂಡರು ಪ್ರತ್ಯಕ್ಷದಲಿ । ಆ ಹಿಂದೆ ಕೇಳಿ
ದಂತೆ ।
ರೂಹ ಚಾತುರ್ಯ ಔದಾರ್ಯ ಮಾಧುರ್ಯ ಸಲೆ । ಗಹನ
ಗಾಂಭೀರ್ಯವಂದು ॥ ೧೪ ॥
ಆದಿನಾರಾಯಣನಂಶರು ಈಗಲಿ । ಯಾದವ ಕುಲದಲಿ
ಜನಿಸಿ ॥
ಈ ದೇವಕಿ ಶೌರಿ ಪೂರ್ವದಲಿ ಮಾಡಿದ ಪು- । ಣ್ಯೋದಯವು
ಮಕ್ಕಳೆನಿಸಿ ॥
ಮೇದಿನಿಯು ಭಾರಿಳುಹಬೇಕೆಂದು ವ್ರಜದಲಿ ದಿ । ನೋದಿನೇ ಕ್ರೀಡೆ
ಯಾಡಿ ।
ಮೋದವಿತ್ತರು ಜನಕೆ ಚಾರು ಚಾರಿತ್ರ್ಯರಿವ । ರಾದರದಿ ಸುರರಿಗೆ
ಜಯ ॥ ೧೫ ॥
ಗೂಢಾತ್ಮರಿವರು ನಂದನ ಗೇಹದಲಿ ಬೆಳೆದು । ಮಾಡಿದರು ದುಷ್ಟ
ಹರಣ ।
ಪೀಡೆಪೂತನಿ ಚಕ್ರವಾತ ಕೇಶಿಯು ಗುಹ್ಯಕ । ಜೋಡಾರ್ಜುನಾದ್ಯ
ರನ್ನು ॥

ಕಾಡಿನೊಳು ಕಿಚ್ಚನುಂಗಿದ ಕೃಷ್ಣ ಅಹಿಮದ ವಿ- । ಭಾಡಿಸಿದ ಸುತ್ರಾಮನ ।
ಕೇಡಿನ ಮಳೆಗೆ ಗಿರಿಯನೇಳು ದಿನ ಕೈಲಿ ಎ- । ತ್ತ್ಯಾಡಿದುಳುಹಿದ ವ್ರಜವನು ॥ ೧೬ ॥

ಕೃಷ್ಣವದನಾಬ್ಜಸುಧೆ ಪಾನವನು ಇರುಳ್ಹಗಲು । ದೃಷ್ಟಿಂದ ಮಾಳ್ಪ ಬಲೆರ ।
ನಿಷ್ಠೆ ಜ್ಞಾನವನು ಕವಿಗಳು ಜಿವ್ಹೆಯಿಂದೆ ಯಿ- । ನ್ನೆಷ್ಟು ಹೇಳಲು ತೀರದು ॥
ಶಿಷ್ಟರ ಶ್ರವಣಕಮೃತಸಾರ ಮುಂದಕೆ ಸುವಿ- । ಶಿಷ್ಟ ಸುಖಭೋಜನ ಗಡ ।
ಕೃಷ್ಣಚಾರಿತ್ರ್ಯದ ವಿಚಿತ್ರವನು ಪೇಳ್ವ ಪರ । ಮೇಷ್ಟ್ಯಾದಿ ವಿಬುಧ ಸಮೂಹ ॥ ೧೭ ॥

ಗೋಪಾಲರೊಡಗೂಡಿ ಗೋವುಗಳ ಚರಿಸುವ । ಶ್ರೀಪತಿಯು ಗಿರಿ ವನದಲಿ ।
ಗೋಪಿಯರ ಮನ್ನಿಸುವ ವೇಣುನಾದದ ರಸದಿ । ವ್ಯಾಪಿಸುವ ಸುರರ ಶ್ರುತಿಗೆ ॥
ಈ ಪರಬ್ರಹ್ಮ ಹರಿರಾಮ ಸಾಮಾನ್ಯರೇ । ಗೋಪರೇ ಲೋಕೇ ಶರು ।
ಆ ಪ್ರಲಂಬನ ಮರ್ದಿಸಿದ ರಾಮ ತಡೆಯದೆ ಮ- । ಹಾ ಪರಾಕ್ರಮಿ ದುಷ್ಟರ ॥ ೧೮ ॥

ಈ ವಿಧದ ಕೀರ್ತ್ತಿಯನು ಮಾಡುವರು ಸುರರೆಲ್ಲ । ನಾವೇನು ಬಲ್ಲೆ ವೆನುತ ।
ಈ ವಾಕ್ಯ ನುಡಿವನಕ ಭೇರಿ ತುತ್ತೂರಿ । ಘೋಷ ತೀವಿತು ಬಿರಿದು ಮಲ್ಲರ ॥
ಶ್ರೀವರ ಪ್ರಸನ್ನವೆಂಕಟ ಕೃಷ್ಣ ಬಲರಾಮ ರಾ- । ಜೀವನೇತ್ರರು ವೀರರು ।

ಕೆ. ೯ವಿದರು ಒಪ್ಪಿದರು ಜಗಜಟ್ಟಿಗಳ ಕಂಡು । ಭಾವುಕರಿಗಲ್ಲಾ
ದವು ॥ ೧೯ ॥

ಶಬ್ದಾರ್ಥ:— ಐದಂಬ=ಕಾಮ. ಅಹಸ್ಕರ=ಸೂರ್ಯ. ಅಂಬಷ್ಠ=ಮಾವುತ. ದಂಡಪಾಣಿ=ಯಮ. ನಾಗಾರಿ=ಸಿಂಹ. ಸವ್ಯ=ಎಡ. ಲೇಹನ=ನೆಕ್ಕುವದು. ಸಾಂಗತ್ಯ ವಿಭೇದವು. ೬೨೭ ನುಡಿಗಳು.

---

೭೪

ರಾಗ ಮುಖಾರಿ—ಜಕ್ಕಣಿ ತಾಳ.

ಮಧುಕೈಟಭಮರ್ದಕನೊಳು ಚಾಣೂರ । ಮದ ಸೊಕ್ಕಿ ಕಾದುವೆ
ನೆಂದು ।
ವದಿಸಿದ ರಂಗದಿ ರಂಗನೊಡನೆ ತಾ । ಬದುಕ ಬಲ್ಲನೆ ಹೇ-
ಳೆಂದು ॥ ಪಲ್ಲ ॥

ಎಲೆ ಬಲರಾಮಾಚ್ಯುತ ನಂದಗೋಪನ । ಎಳೆಯರಿರಾ
ನೀವೆಂದು ।
ಇಳೆಯೊಳುವೀರಸಮ್ಮತರುದ್ಧಟರು । ಬಲು ಯುದ್ಧಕೌಶಲ
ರೆಂದು ॥

ಘಳಿಗೆ ಘಳಿಗೆಗೆ ಕೇಳುತಲಿದ್ದ ಭೋಜಪ । ಲಲಿತವುತ್ಸವನೋಳ್ಪ
ವ್ಯಾಜೆ ।
ಯಲಿ ಕರೆಸಿದನು ಇಬ್ಬರನೆಂದನು ಖಳ । ಕಲಿ ಚಾಣೂರ ಪಾಪ
ಭಾಜ ॥ ೧ ॥

ದೇಶಸ್ಥರೆಲ್ಲರು ನೆರೆದಿಹರಿಲ್ಲ್ಯವನೀ । ಶರು ನೃಪಪ್ರೀತಿ
ಗಾಗಿ ।
ಲೇಸು ಶ್ರೇಯಸು ಉಂಟು ನಿಮಗಿನ್ನು ನೃಪತಿಯು । ತೋಷಬಡಿಸಿ
ಸುಖಿಯಾಗಿ ॥

ಮೇಸುತಲಿರುತಿರೆ ವತ್ಸವ ವನದಲಿ । ಆ ಸಖ ಗೋವರ ಕೂಡಿ ಸ- ।
ದಾ ಸರ್ವದಾ ಮಲ್ಲಯುದ್ಧವ ಮಾಡಿದಿ । ರೀ ಸಮಯಕೆ ಅಂಜಬೇಡಿ ॥ ೨ ॥

ಪ್ರೀತಿಬಡಿಸಿ ರಾಜೇಂದ್ರನ ನಮ್ಮೊಳು । ನೀತಿಯುದ್ಧವ ಮಾಡಿ ತೋರಿ ॥
ಖ್ಯಾತರಾಗಿರಿ ಕೋವಿದತೆ ನೋಡಲೆಲ್ಲರು । ಚಾತುರ್ಯ ತೋರ್ಪೆವು ಮೀರಿ ॥

ಭೂತಪ್ರಸಾದಿಸುತೇವೆ ಭೋಜಪ । ದಾತನ ಆಜ್ಞೆಯು ವಹಿಸಿ ॥
ಭೂತಪ್ರಭು ಪೃಥ್ವೀನಾಥನು ಎಂದನು । ಮಾತಿಲಿ ಚಾಣೂರ ಕಥಿಸಿ ॥ ೩ ॥

ಚಾಣೂರನ ಕಥನವ ಕೇಳುತ ಕೃಷ್ಣ । ತಾ ನುಡಿದನು ಸ್ಮಿತವದನ ॥
ಧೇನುಚಾರಕರು ನಾವೇನು ಬಲ್ಲೆವು ವ್ರಜ । ಕಾನನಚರಬಾಲರ್ಕದನ ॥
ನೀನನುಗ್ರಹವ ಮಾಡಿದರೇವೆ ಯುದ್ಧಪ್ರ । ಮಾಣದಿ ಮಾಡಿ ನಿನ್ನೊಳು ॥
ಭೂನಾಥನ ಪ್ರೀತಿಯು ಪಡೆವೆವು ಬಲ । ಹೀನರು ಅತಿಬಾಲರುಗಳು ॥ ೪ ॥

ಬಲವಂತರ್ ನೀವು ಯಥೋಚಿತ ಯುದ್ಧವ । ಇಳೆಯರಸಗೆ ತೋರ್ಪೆವಾವು ॥
ಸಲೆ ಅತಿಕ್ರಮಿಸಿದರೇವೆ ಅಧರ್ಮವು । ತಿಳಿಯೈ ನಾವು ಹೇಳುವೆವು ॥
ಬಲನನುಜನು ಹೀಗೆಂಪರೆ ಚಾಣೂರ । ನಳಿನಾಕ್ಷಗೆ ತಾನೆಂದ ॥
ಎಲೆ ಬಲರಾಮಾಚ್ಯುತರಿರಾ ನೀವಿ । ನ್ನೇಕಿಶೋರರು ಹ್ಯಾಗೆಂದ ॥ ೫ ॥

ನಲುವಿಂದ ಲೀಲೆಯಲಿ ಕುವಲಯಪೀಡನ । ಅಳಿದಿರಿ ಮದಸೊಕ್ಕಿಯಿಹುದು ॥
ಗೆಲವುಂಟೆ ಕಾದಿದವರಿಗೆಂದಿಗೆ ಕೇಳಿ । ಇಳೆದಿವಿಯಲಿ ಸಟಯೆಂದ ॥

ಬಲನಿಗೆ ಮುಷ್ಟಿಕನೊಡನೀಗ ಯುದ್ಧವು । ಸಲೆ ಸಮರ್ಪಕ ನಿನ್ನೊ
ಳೆನಗೆ ॥
ಬಲವಂತಮಲ್ಲರನೇಕರು ನೀನೇಕ । ಗೆಲಬೇಕೆಂದ ಖಳನಾಗೆ ॥ ೬ ॥

ಈ ನೇಮವ ಚಾಣೂರ ಮಾಡಲು ಬಲ । ಬಾ ನೀನೆಂದು ಮುಷ್ಟಿಕನ॥
ಪಾಣಿಗೆ ಪಾಣಿ ಪಾದಕೆ ಪಾದಕೆ ಪಾದ ಹಚ್ಚುತ । ತಾನೊತ್ತ್ಯಾಡಿದ
ಜಾಣ ॥
ಜಾನುವಿಗೆ ಜಾನು ನೆತ್ತಿಗೆ ನೆತ್ತಿ ಅರಾತ್ನಿಗೆ । ಅನ್ಯೋನ್ಯ ಗೆಲುವ
ಇಚ್ಛೆಯಲಿ ॥
ಮಾನಪರಿಭ್ರಮಣವು ವಿಕ್ಷೇಪಣ । ನಾನಾಪರಿರಂಭದಲ್ಲಿ ॥ ೭ ॥

ಒನ್ನೊಮ್ಮೆ ಬೀಳಗೆಡಹ್ಯಾಡುವ ಸೌರಂಭ । ಒಮ್ಮುತ್ಸರ್ಪಣಾಪ
ಸರ್ಪಣ ॥
ಒಮ್ಮುತ್ಥಾಪನ ಸ್ಥಾಪನ ಚಾಲನವ ಮಾಡಿ । ಹಮ್ಮಿಲಿ ಗೆಲುವೆವೆಂ
ಬ್ಬವಣ ॥
ತಮ್ಮೊಳು ಗೆಲುವಿಚ್ಛೆಯಲಿ ಪರಸ್ಪರ । ಹಿಮ್ಮೆಟ್ಟದಲೆ ಒತ್ತ್ಯಾಡಿದರು ॥
ಹೆಮ್ಮದ್ದಾನೆಯು ತೆರದಲಿ ಯುದ್ಧದ । ಸೊಮ್ಮಿನ ಬಲ್ಲಿದರವರು ॥ ೮ ॥

ಜನರೆಂದರು ಬಾಲಕರಿಗೆ ಬಲ್ಲಿದ । ರನು ಸರಿನೋಡುವ ಕರ್ಮ ॥
ಘನ ಅನ್ಯಾಯವು ಎಂದರು ಸ್ನೇಹದೀ । ಜನಪತಿಗಿದು ಈಗಧರ್ಮ ॥
ನೆನೆವರೆ ಪಾಪದ ಸಭೆಯಿದು ಇಲ್ಲಿ ಸ । ಜ್ಜನರಿಗೆ ಸಲ್ಲ ನಿವಾಸ ॥
ತನುಗಿರಿಗ್ಳೋಲುವ ಮಲ್ಲರು ವಜ್ರರು । ಅಣು ಕೈಶೋರರು ದೋಷ
॥ ೯ ॥

ಅಪ್ರಾಪ್ತದ ಯೌವನರಿವರ್ ನೃಪತಿಯು । ಅಪ್ರಜ್ಞನತಿಘಾತುಕನು ॥
ಈಪ್ರಕಾರ್ ಕಿಲ್ಬಿಷ ಹೊಂದಿದ ಸಭೆಯನು । ಸುಪ್ರಜ್ಞರ್ ಬಿಡ
ಬೇಕಿದನು ॥
ಸುಪ್ರಮತ್ತ ಮಲ್ಲರು ಹರಿಬಲರ್ ಬಾಲರು । ಸುಪ್ರೇಕ್ಷಜನಕೆ ನೋಕ್ಷ
ದರು ॥

ಈ ಪ್ರತ್ಯಕ್ಷದಿ ನೋಡುವರ್ ಕಣ್ಗಳಿಗೆ ; ಅಪ್ರೌಢ ಕಂಸಗೆ ಹಿತರು
॥ ೧೦ ॥

ಕೃಷ್ಣಾಶ್ಯಾಬ್ಜವ ನೋಡುವರಕ್ಷಿಗೆ । ಹೃಷ್ಟವು ಪಾಪಕೆ ಲಯವು ॥
ಸಿಟ್ಟಲಿ ಚಾಣೂರನ ಕೃಷ್ಣಯುದ್ಧಕೆ ಕರೆ । ವಷ್ಟರೊಳು ಬಲನಿಗೆ
ಗೆಲುವು ॥

ಹೃಷ್ಟವಿಲ್ಲದ ಹಾಸ್ಯವದನದಿ ಈ ಬಲ । ಮುಷ್ಟಿಕನೊಳು ಕಾದುತಿಹ ॥
ಜಟ್ಟಿಗರರಸನ ದೃಷ್ಟಿ ತಾವಪ್ರಾಗಿವೆ । ಶಿಷ್ಟರು ನೋಡಿಯೆನುತಿಹ ॥೧೧॥

ರಾಮಾಚ್ಯುತರ ವಸತಿ ಗೋಕುಲದ । ಭೂಮಿಯು ಪುಣ್ಯವು ಪೊತ್ತ ॥
ಗೋಮತಿಗಳ ಸಹ ಚರಿಪರು ವನವನ । ಸ್ವಾಮಿ ಭುವನತ್ರಯ
ನಾಥ ॥

ಈ ಮನುಷ್ಯಾಕೃತಿ ಗೂಢರು ಈಶ್ವರ । ರು ಮನುಜರ ಮೋಹಿಪರು ॥
ಶ್ರೀಮಂತರು ಸಕಲಭುವನವ್ಯಾಪ್ತರು । ವೈಮಾನಿಕರ ಪಾಲಕರು
॥ ೧೨ ॥

ಪೌರಾಣಪುರುಷರು ಶ್ರೀವನಮಾ । ಲಾರಾಜಿಪರು ಸುಂದರರು ॥
ನಾರಾಯಣನರರಿವರು ಯಮುನೆಯ । ತೀರ ವನಾಂತದಲಿಹರು ॥
ಗೋರಕ್ಷಕರೊಡನೆ ಗೋಗಳ ಸಂ । ಚಾರಿಸುವರು ದಿನದಿನವಿ ॥
ಸೌರಭ ಕುಂಜದಿ ವೇಣುನಾದಿಸುವರು । ನಾರಿಗೋಪಿಯರ ಸಖ್ಯದಿ
॥ ೧೩ ॥

ಗೋಪೀಜನತರ್ಪವೆಂತೊ ಪೂರ್ವದ । ಗೋಪವೇಷದ ಶ್ರೀವರನ ॥
ಆಪಾದನಖದ ಸೌಂದರ್ಯಾಮೃತ । ವ ಪಾನಮಾಡುವರ್ ನಿಸಿದಿನ ॥
ಆಪವರ್ಗದ ಸುಖವನುಂಬರು ನೌನಿಜ । ನೋಪಮರು ಶುಚಿವ್ರತರು ॥
* * * * ॥ ೧೪ ॥

ವೈಕುಂಠಧಾಮನ ಕೀರ್ತಿಯ ವಿಸ್ತಾರ । ವಿಖ್ಯಾತಿಯ ಹೇಳುವರು ॥
ಆಕಳ ಕರೆಸುತ ತೂಗುತ ತೊಟ್ಟಿಲ । ತೋಕರ ನಿದ್ರೆಯ ಗೈಸುವರು॥

ಗೋಕನ್ನಿಕೆಯರ ಸುಕೃತವಿನ್ನೆಂತೊ । ಸಕಾಲದಧಿಮಥನದಲ್ಲಿ ॥
ಶ್ರೀಕೃಷ್ಣನ ಗುಣಕರ್ಮನಾಮಂಗಳ । ನೇಕಸ್ವರದಿ ಪಾಡುತಲಿ ॥ ೧೫ ॥

ನೈಕೇತನ ಸಮ್ಮಾರ್ಜನಕಾಲದಿ । ತ್ರೈಕಾಲ ಮಜ್ಜನದಲ್ಲಿ ॥
ಏಕಾಂತಜನಪ್ರಿಯನಂಘ್ರಿಕಮಲಗಳಾ । ಲೌಕಿಕಕೀರ್ತ್ತಿ ಹೇಳುವರು॥
ಶ್ರೀಕರ ಪುಣ್ಯವ್ರಜದ ಸ್ತ್ರೀಯರ ಸುಖ । ವು ಕವಿಗಳ ಕವನಕ್ಕೆ ॥
ಸಾಕೆನ್ನದು ಮತಿ ನಿಲುಕದು ಸ್ತೋತ್ರಕ್ಕೆ । ಶ್ರೀಕೃಷ್ಣನ ಶುಭಲೀಲೆ
॥ ೧೬ ॥

ಧನ್ಯರು ಪೆಣ್ಣಳು ಕ್ರಮವಿಕ್ರಮನ । ಚಿನ್ಮಯ ಗುಣಚಿಂತನೆಯ ।
ಕಣ್ಣೆವೆಯಿಕ್ಕದೆ ಕದಲದ ಭಕ್ತಿಯಿಂ । ತನ್ಮನಸ್ಕೆಯರು ಸತಿಯರು ॥
ಇನ್ನೊಂದವರಿಗೆ ಸಾಧನವೇತಕೆ । ಮಾನ್ಯರು ಸುರಲೋಕಕ್ಕೆ ।
ಚನ್ನೆರ ಚಲುವೆ ಯಶೋದೆಯ ಮೊಲೆಯುಂಡ । ಚಿನ್ನನ ದಯವಿರ
ಲಿಕ್ಕೆ ॥ ೧೭ ॥

ಗಾಯತ್ರಿಗಳ ಬೆರಸಿ ಪ್ರಾತಃಕಾಲದಿ । ಶ್ರೀಯದುಪತಿ ಪೋಗುವನು ।
ಸಾಯಂತನಿಯಲಿ ವೇಣುನಾದಿಸುತಲಿ । ಪ್ರೀಯಾತ್ಪ್ರೀಯನೈದಿ
ಬಹನು ॥

ಸ್ತ್ರೀಯರು ನಾದಕೆ ಮೋಹಿಸಿ ಬಹರು । ಶ್ರೀಯರಸನ ತುತಿಸಲಿಕ್ಕೆ ।
ದಯಾರ್ದ್ರದೃಷ್ಟಿಯಲಿ ನೋಡುವ ಹರಿ । ಮಾಯಾತೀತನು ಜಗಕೆ
॥ ೧೮ ॥

ಪ್ರಿಯೋಕ್ತಿಯ ನಾಡುವನು ಮುಗುಳುನಗೆ । ಪೀಯೂಷವನುಣಿಸು
ವನು ।
ತೋಯಜನೇತ್ರ ವಿಬುಧನಾರಿಯರಿಗಚ್ಚ । ರಿಯ ತೋರಿಸಿ ಮೋಹಿ
ಪನು ॥

ಈಯನುಸಂಧಾನದಿ ಸಭೆಯಲಿ ಸಾ । ಧ್ವೀಯರು ಭಾಷಿಸಲಾಗೆ ।
ಶ್ರೀಯದುಪತಿ ಖಳನನು ಸಂಹರಿಪ । ಉಪಾಯ ಮಾಡಿದನಾಗ ॥ ೯ ॥

ಆಗಚ್ಯುತನಿಗೆ ಕಲಿಚಾಣೂರನೊಳು । ಯೋಗಿಸಿತು ಮಹಾಯುದ್ಧ ।
ನೇಗಿಲಗ್ರೈಯಗೆ ಮುಷ್ಟಿಕಗೆ ಯು । ದ್ಧಾಗಲು ರಂಗದ ಮಧ್ಯ ॥

ಭೂಗಗನಸ್ಥರಿಗಚ್ಚರಿಯು ಮದ । ನಾಗಂಗಳ ಯುದ್ಧದಂತೆ ।
ಯೋಗೀಶೇಶ್ವರ ಚಾಣೂರನ ಮೈ । ತಾಗಿದನು ಸಿಡಿಲಂತೆ ॥ ೨೦ ॥

ವಜ್ರೋಪಮ ಶ್ರೀಯಚ್ಯುತಗಾತ್ರದಿ । ಜಜ್ಜಿಸಿಕೊಂಡ ಚಾಣೂರ ।
ಗರ್ಜಿಸಿ ಕೋಪದಿ ಗಗನಕೆ ಹಾರಿಬಂ । ದಬ್ಜಾಕ್ಷನೈದಿದಸಿದಿರಾ ॥
ದುರ್ಜಯಸೇನನ ಕರದಲಿ ಮುಷ್ಟಿಯಿಂ । ಭಜ್ಜಿಸೆ ರೋಷದಿ ಖಳನು
ನಿರ್ಜರರೊಡೆಯುಗೆ ನೋವಾಗುವದುಂಟೆ । ನಿರ್ಜೀವ ಖುಲ್ಲನು ಅವನು
॥ ೨೧ ॥

ಹರಿಯು ಸೃಜಾಹತ ಕರಿಯಂತೊಪ್ಪುತ । ದುರುಳನ ತೋಳ್ಗಳ ಹಿಡಿದ ।
ಗಿರಿಗಿರಿತಿರುಗಿಸಿ ಧರೆಗಪ್ಪಳಿಸಿದ । ಸುರರಿಪುಹರ ಗೋವಿಂದ ॥
ಸುರವರಚಾಪದೊಲ್ ಕಡೆದನು ಚಾಣೂರ । ತ್ವರಿಯುದಿ ಸೊಕ್ಕಿದ
ಮಂದ ।
ಎರಡನೆ ಮುಷ್ಟಿಕ ಮೊದಲೆ ಬಲನ ಗಟ್ಟಿ । ಸಿರಲು ಬಲನು ಕೋಪ
ದಿಂದ ೨೨ ॥

ಕರದಲಿ ಬಡಿದನು ಕೋಪದಿಂ ಮುಷ್ಟಿಕ । ಅರುಣ ಜಲವ ಕಾರುತಲಿ ।
ಹರಣವ ನೀಗೀವ ಉರುಳಿದ ಭುವಿಹೊಂದಿ । ತರುಗಾಳಿ ಬಡಿದಂದ
ದಲಿ ॥
ಮರಳಿ ಕೂಟಾಖ್ಯನು ಬರಲು ಬಡಿದ ವಾಮ । ಕರದಿಂದ ಬಾಲಲೀ
ಲೆಯಲಿ ।
ಉರುಬಲ ತೋಸಲ ಕಾಸಲ ಛಲರನು । ಚರಣದಿ ಕೆಡಹಿ ಶಿರಗಳ
॥ ೨೩ ॥

ತರಿದ ಕತ್ತರಿಸಿದ ಕರದಲಿ ತೃಟಿಯೊಳು । ಮುರಪೀತಾಂತಕ ಶೌರಿ ।
ಒರಗಲು ನಾಲ್ವರು ಪ್ರಮುಖರು ಮಲ್ಲರು । ನೊರಜು ಮಲ್ಲರು ಓಡಿ
ದರು ॥
ಹರಿಗೋವಳರೊಳುತ್ಸವದಲಿ ಕ್ರೀಡಿಸೆ । ಚರಣನೂಪುರ ಝಣತ್ಕರಿಸೆ ।
ಉರು ನಟಿಸಿದ ತುತ್ತುರಿ ತಾಳದ ರವ । ಪರಿಲಯನನು ಅನುಕರಿಸಿ
॥ ೨೪ ॥

ಶಿಷ್ಟರು ಕಂಡರಕ್ಲಿಷ್ಟರ ಕರ್ಮಕೆ । ತುಷ್ಟಿಸಿ ಸಾಧು ಸಾಧು ಎನುತ ।
ದುಷ್ಟಕಂಸನ ಸಂಬಂಧಿಗಳೆಲ್ಲರು । ಕಷ್ಟಿಸಿದರು ಬಳಲುತ ॥
ದೃಷ್ಟಿಯಲಿ ನೋಡಿದ ಭೋಜಪ ಮಲ್ಲರ । ನಷ್ಟರಾದರು ಓಡಿದರು ।
ಹೃಷ್ಟಿಗಳೆದು ನಿಲ್ಲಿಸಿದ ವಾದ್ಯಂಗಳ । ನಷ್ಟು ಜೇದಿಸಿ ಚಿತ್ರಭೀರು ॥ ೨೫ ॥

ನರಹರಿ ದ್ವೇಷಿಗಳಿಗೆ ಜಯಸ್ವಪ್ನವು । ದುರುವೃತ್ತನು ಭೋಜಪನು ।
ಹರಿದ್ವೇಷದ ಫಲವೊದಗಿತು ಎವೆಧಿಗಿಲ್ । ಗರೆದು ನಿಟ್ಟುಸಿರ ಬಿಡುವನು ॥
ಬರೆ ದಿಟ್ಟತನದಲಿ ದುರ್ಬುದ್ಧಿಯಲ್ಲಿಹ । ಸರಿದು ಹೋಗಿಹುದಾಯುಷ್ಯವು ।
ನೆರೆ ಉದ್ಧಟತನ ಬಿಡನು ಪಾಪಾತ್ಮನು । ಮರುಳಟ್ಟು ಮರುಗತಮನವು ॥ ೨೬ ॥

ಈ ದಿವ್ಯಾಮೃತ ಭಾಗವತ ದಶಮ । ಬಾದರಾಯಣಿ ಪೇಳಿದನು ।
ಆದರದಲಿ ಸಮಿತ್ಪಾಣಿಯು ಪರೀಕ್ಷಿತ । ಬೋಧಕೆ ತಲೆದೂಗಿದನು ॥
ಶ್ರೀಧವ ಪರಸನ್ನವೆಂಕಟಕೃಷ್ಣನ । ಗಾಧ ಲೀಲಾನ್ವಯ ಶ್ರವಣ ।
ಬೋಧಕರಿಗೆ ಬೋಧಿಸಿಕೊಂಡವರಿಗೆ । ಮೋದಾಬ್ಧಿ ಸ್ನಾನಪಾನ ॥೨೭॥

**ಶಬ್ದಾರ್ಥ:— ಅರಾತ್ನಿ=ಮೊಳಕೈ. ಪರಿರಂಭ=ತೆಕ್ಕೆಬೀಳುವದು. ವ್ರಾತ=ಸಮೂಹ. ನೈಕೇತನ=ಮನೆ. ಬೋಗಿಸಿತು=ಕೂಡಿತು. ಸೃಜಾಹತ=ಮಾಲೆಯಿಂದ ಹೊಡೆಯಲ್ಪಟ್ಟ. ಸಾಂಗತ್ಯ ವಿಧೇದವು. ೯೬೪ ನುಡಿಗಳು.**

---

೬೫

ರಾಗಸೌರಾಷ್ಟ್ರ. ಏಕತಾಳ.

ಜಾತಃ ಕಂಸವಧಾರ್ಥನು ಪಾತಕಹರ ಸಮರ್ಥ ।
ಪೂತಚಾರಿತ್ರ ಲಕ್ಷ್ಮೀಯನಾಥ ॥
ಘಾತಿಸಿದ ಕೌತುಕದಿ ಮಾತುಳನ ಭ್ರಾತರೊಡನೆ ।
ಆತತಾಯಿಯು ಭ್ರಾತೃಸಹ ನಾಥ ॥ ೧ ॥

ಭೋಜಪತಿ ತನ್ನ ಸೇವಕಜನಕೆ ಆಜ್ಞೆಯಿತ್ತ ।
ಗೋಜಂಗುಳಿಯು ಕಾವ ಅರ್ಭಕರೀ ।
ರಾಜಧಾನಿಯಿಂದ ನೂಕಿರೋ ಸತ್ವರ ॥ ೨ ॥

ನಂದಗೋಪನ ಗಟ್ಟಿ ಬಂಧಿಸಿರಿ ದುರ್ಮತಿಯನು ।
ಎಂದ ಕಂಸ ಪಾಪಿಯು ದುರಾತ್ಮಾ ॥
ತಂದೆ ಉಗ್ರಸೇನನವನ ಬಂಧುಸಹ ಗೋಪಾಲ ಪಕ್ಷ ।
ಹೊಂದಿದವರನೆಂದನು ಪಾಪಾತ್ಮಾ ॥ ೩ ॥

ಕೊಂದಬಿಸುಟ ಅಹಿತರನು ಯೆಂದು ಕಂಸ ಕತ್ಥಿಸೆ ।
ಇಂದಿರೇಶ ಕೇಳಿದವ್ಯಯಾತ್ಮಾ ॥
ನಿಂದರಂಗನ ಬಿಟ್ಟು ಹಾರ್ದ ಮುಂದಮತಿ ಭೋಜಪನು ।
ಹೊಂದಿದ ಮಂಚಕೆ ಪರಮಾತ್ಮಾ ॥ ೪ ॥

ಮೃತ್ಯು ಬಳಿಗೆ ಬಂದಿತೆಂದು ಕತ್ತಿವಿಡಿದು ಚರ್ಮಸಹ ।
ಸತ್ವರದಿ ಕಾದಲನುವಾದ ॥
ಅತ್ತಇತ್ತ ಎಡಬಲಕೆ ಸುತ್ತಾಡಿದ ಗಿಡಗನಂತು ।
ಸೃತ್ತ್ರನ ತೆಕ್ಕೆಯಲಿ ಹರಿ ಹಿಡಿದ ॥ ೫ ॥

ನಾಗನ್ನ ಕೊಂಡೋಡುವ ಗರುಡನ್ಹಾಗೆ ಕೇಶವನ ಲೀಲೆ ।
ಆಗೆ ಕೈಲಿ ಅವಚಿ ಅವನಿಯು [illegible]ೀಲೆ ॥
ಜೀಗುರುಳುಗೆಡಹಿದನು ಯೋಗಿನಾಥ ಅವನ ಮುಗುಟ ।
ನೀಗಿಸಿದನು ಕಬರಿವಿಡಿದನು ಕೃಷ್ಣ ॥ ೬ ॥

ಮಂಚದಿಂದ ರಂಗಭೂಮಿಗಿಂಚಿದ ಕೇಸರಿಯು ಮದ ।
ಅಂಚಿತ ಕರಿಯನು ಕೆಡಹಿದಂತೆ ॥
ಮುಂಚಿಸಿದ ಕಂಸನಸುವ ಪಂಚಬಾಣನಯ್ಯ ಕೃಷ್ಣ ।
ಪಂಚಮಹಾಪಾತಕಿಯಂತೆ ॥ ೭ ॥

ಅಸುರಹರನ ಭಾರವವಗೆ ವಿಶ್ವದಷ್ಟು ಭಾರವಾಗೆ ।
ಅಸುವ ನೀಗಿದನು ಶಿಕ್ಷೆಹೊಂದಿ

ವಸುಧೆಯಲ್ಲಿ ಬಿದ್ದವನ ಬಿಸಜನೇತ್ರ ಕಟ್ಟಿಎಳಿಸಿ ।
ಬಿಸುಡಿಸಿದ ಲೋಕನರ್ಯ ಜವದಿ ॥ ೮ ॥

ಖಳನು ಕೆಡೆದ ಬಳಿಕ ಜನದ ಕಳಕಳವು ಹೆಚ್ಚಿ ಹಾ ಹಾ ।
ಇಳೆಯ ಕಂಟಕವು ಹೊಯಿತೆಂದು ॥
ಗೆಲುಮುಖವು ಸುಜನರಿಗೆ ಅಳುಮುಖವು ದುರ್ಜನರಿಗೆ ।
ಖಳಕಂಸಗೆ ಹರಿಭಯ ಹೀಗೆಂದು ॥ ೯ ॥

ನಳಿನಾಕ್ಷನ ಭಯದ ಧ್ಯಾಸ ಬಲಿದಿಹುದು ಇರುಳು ಹಗಲು ।
ಜಲಪಾನದಿ ಉಣುತ ಉಡುತ ನಿಲುತ ॥
ಮಲಗಿ ಸ್ವಪ್ನದಲ್ಲಿ ಮಾತುಗಳನು ಆಡುವಲ್ಲಿ ಚಕ್ರ ।
ಜಲಜಧರನ ಮುಂದೆ ಕಾಂಬ ನಿರುತ ॥ ೧೦ ॥

ಬಲು ಪಟುತರಾಭ್ಯಾಸದ ಬಲದಿಂದ ಭೃಗುಮುನೀಂದ್ರ ।
ಲಲಿತಗತಿಗೈದಿದ ಮಹಾತ್ಮಾ ॥
ಸಲೆ ಹರಿಯ ವೈರಭಾವ ಬಲಿದ ಪಾಪಿ ಕಾಲನೇಮಿ ।
ನಿಲವೆ ತಮಸಕ್ಕೈದಿದ ದುರಾತ್ಮಾ ॥ ೧೧ ॥

ಅವನಿಪತಿ ಬೀಳಲಿಕ್ಕೆ ಅದನ ಬಂಧುಗಳೆಂಟು ಮಂದಿ ।
ಜವದಿ ಬರಲು ಬಲನು ಕೈಯಿಂದ ॥
ಜವನ ಮನೆಗೆ ಕೊಂದಟ್ಟಿದ ಲವದೊಳಗೆ ಪರಿಘದಿಂದ ।
ಸವರಿಸಿದ ಉಳಿದ ಖಳರ ವೃಂದ ॥ ೧೨ ॥

ಪಶುಗಳನು ಸಿಂಹಕೊಂದು ಎಸೆವಂತೆ ನ್ಯಗ್ರೋಧಕಂಕ ।
ರಸುವ ಕಳೆಯೆ ಸುರರು ಅಂಬರದಿ ॥
ಕುಸುಮವೃಷ್ಟಿಕರೆದರಾಗ ಅಸಮಾನ ತುಷ್ಟಿಯ ಹೊಂದಿ ।
ಲಸದ ದುಂದುಭಿ ಘೋಷಿಸಿದರ್ ಮುದದಿ ॥ ೧೩ ॥

ಅಜಭವೇಂದ್ರಾದ್ಯಖಿಳರು ಅಂಬುಜನಾಭನ ಸ್ತೋತ್ರಮಾಡಿ ।
ಸುಜನರು ತೋಷಾಬ್ಧಿಯಲೋಲಾಡೆ ॥
ತ್ರಿಜಗಾಧಾರ ಮುರಾರಿ ಕುಜನಕಾಂತಾರಕುಠಾರಿ ।
ಭಜಕರಭೀಷ್ಟೆಯ ಪೂರಣ ಮಾಡೆ ॥ ೧೪ ॥

ಕಂಸನಂಗನೇರು ಮತ್ತೆ ಧ್ವಂಸಿತಖಳಾಂಗನೇರು ।
ಹಿಂಸಿತ ಪತಿಗಳ ಬಳಿಗೆ ಬಂದು ॥
ಪಾಂಸುಗಳ ತಮ್ಮ ತಲೆಗೆ ಹೂಸಿ ಹೊಯ್ದುಕೊಂಡು ಮರುಗಿ ।
ಶಂಸಕರ ಮೇಲೆ ಹೊರಳಿ ನೊಂದು ॥ ೧೫ ॥

ನೆತ್ತಿಗಳ ಭುವಿಗೆ ಗಟ್ಟಿಸುತ್ತ ಬಹು ಶೋಕದಿಂದ ।
ಸತ್ತವರನ ಅಪ್ಪಿ ಗೋಳಿಡುತ ॥
ಅತ್ತರು ಸವೆಯದಶ್ರು ಒತ್ತಿಬರುತ ಕಂಗಳಿಂದ ।
ಸತ್ತೆವು ಕೆಟ್ಟೆವೆಂದು ಹೊರಳಾಡುತ ॥ ೧೬ ॥

ಪಿರಿದಾಗಿ ಸತಿಯರೆಲ್ಲ ಉರವ ಜಠರ ಬಡಿದುಕೊಂಡು ।
ದೊರೆಯೆ ಮರಳೆ ಮರಳೆ ದುಃಖರವ ಮರಳೆ ॥
ಕರುಣವಿಲ್ಲವೆ ನಮ್ಮಲ್ಲಿ ಅರಸೆ ಸುಮ್ಮನೇಕಿರುವೇ ।
ತೆರೆದು ಕಂಣ ಮಾತನಾಡು ತ್ವರಿಯೂ ॥ ೧೭ ॥

ಹಾ ಪತೆ ಪ್ರಿಯೋತ್ತಮನೆ ಕೋಪವೇಕೆ ತವ ವಿಯೋಗ ।
ದೀಪರಾವು ಭರ್ತೃಹೀನರಾಗಿ ॥
ದೀಪಿಸುತಿದೆ ಅವನಿಪತೆ ಧರ್ಮಜ್ಞ ಪ್ರಭೊ ।
ಈ ಪರಿಯವಜ್ಞೆ ನಮಗೇಕೆ ॥ ೧೮ ॥

ಅಪರಾಧವಿಲ್ಲದರ್ಗೆ ತಾಪವಿತ್ತು ಬಾಧಿಸಿದುದಕೆ ।
ಈ ಫಲವನುಂಡೆ ಕೈಯಮೇಲೆ ॥
ಪಾಪಬುದ್ಧಿಯಿಂದ ಕಾಲನ ಪಟ್ಟಣಕೆ ಐದಿಹೋದೆ ।
ಭೂಪನಾಗಿ ಪ್ರಾಣಿಗಳ ಮೇಲೆ ॥ ೧೯ ॥

ದಯವಿರಲು ಬೇಕು ನೀ ನಿರ್ದಯನಾಗಿ ಮಡಿದೆಯಲಾ ನಿ-।
ಶ್ಚಯವೈ ಜನನ ಮರಣ ದೇಹಿಗಳ್ಗೆ ॥
ಅಯ್ಯೋ ವ್ಯರ್ಥ ಸತ್ತೆಯಲಾ ತ್ವದೀಯ ಜನ್ಮ ಭೂತದ್ರೋಹ ।
ಮೈಯುಂಡು ಹೋದೆಯೆಲೊ ನರಕಕೀಗ ॥ ೨೦ ॥

ಜನಕಗೆ ದುಃಖವಿತ್ತ ನೃಪಗೆ ಕನಸಿನಲಿ ತೋರುವ ಸುಖ ।
ವೆನುತ ರೋದಿಸಲು ಶ್ರೀಕೃಷ್ಣ ॥
ಘನಕೃಪೆಯ ನುಡಿಗಳಿಂದ ವನಿತೆಯರ್ ಶೋಕ ನಿಲಿಸಿವನು ।
ಜನಕ ಜನನಿಯರ್ ಬಂಧ ಮೋಚಿಸಿದ ॥ ೨೧ ॥

ದಿನಕೆ ಹಿರಿಯರಿಗೆ ನಮಿಸಿ ವಿನಯವಾಕ್ಯಾಮೃತವನುಣಿಸೆ ।
ಜನನಿ ಜನಕ ಜನರೆಲ್ಲ ತಿಳಿದರು ॥
ತನಯರಿವರು ಭುವನೇಶರು ಮನುಜರಲ್ಲ ನಮ್ಮ ಮಕ್ಕ ।
ಳೆನುವ ಸ್ನೇಹವನ್ನೆ ಮರೆದರು ॥ ೨೨ ॥

ತನಯರನ್ನು ಅಪ್ಪಿದರು ಮನದಿ ಭಯವ ಹಿಡಿದು ಜಗ ।
ಜ್ಜನಕರೆಂದು ತಿಳಿದು ಮಾತನಾಡೆ ॥
ಸನಕಾದೀಡ್ಯ ತನ್ನ ಮಾಯವನು ತಳೆದು ಮೋಹಿಸಿದ ।
ವಿನಯಮತಿಯು ವಾಕ್ಯದಲ್ಲಿ ಹುಚ್ಚುಮಾಡಿ ॥ ೨೩ ॥

ಜನಪಿಡಂಬ ವಿಶ್ವಬಿಂಬ ತನಯರೆಂಬ ಹಂಬಲಿತ್ತಾ ।
ಘನಸ್ನೇಹವ ತೋರ್ದನು ಮುರಾದರ್ ॥
ಜನಕಜನನಿಯು ಧ್ಯಾನವು ಜನಿಸೆ ನೀವು ನೊಂದಿರಲ್ಲ ।
ಜನಿಸಿದಂದಿಗಿಂದಿಗೆಂದ ದಯಾಪ್ರ ॥ ೨೪ ॥

ವಂದಿಸಿದ ಬಲನಕೂಡಿ ತಂದೆತಾಯಿಗಳಡಿಗಳಿಗೆ ।
ಹೊಂದಿವಿನಯವಾಂತ ಸಾತ್ವತೇಶ ॥
ನಂದಜೋದ್ಭವೇಂದುಮೌಳಿವೀಂದ್ರಾಹೀಂದ್ರ ಇಂದ್ರಸ್ಮರ ।
ರಿಂದ ಮುಕ್ತಾಮುಕ್ತರ್ಗೀಶ ॥ ೨೫ ॥

ಅಂಬ ತಾತ ಎಂದು ತನ್ನ ಹಂಬಲವ ಹಚ್ಚಿಕೃಷ್ಣ ।
ಕುಂಭಿನಿಯ ಲೋಕಕ್ಕೆಲ್ಲ ದೇವ ॥
ಲಂಬಿಸಿದ ಸುಜ್ಞನಿಕರುಂಬಕೆ ತೋರಿತು ಈ ವಿ– ।
ಡಂಬು ಅಂಬುಜನೇತ್ರನ ಭಾವಾ ॥ ೨೬ ॥

ಕಷ್ಟಪಡಿಸಿದರಲ್ಲ ನಾವು ಹುಟ್ಟಿದಂದಿಂದೀಗೆ ನೀವು ।
ದುಷ್ಟಕಂಸ ನಷ್ಟವಾಗಿ ಹೋದ ॥
ಕಷ್ಟಬಡಿಸಿದನು ನಿಮ್ಮ ದಿಷ್ಟ್ಯಾ ಹತನಾದ ನಮ್ಮ ।
ಪುಟ್ಟ ಪೌಗಂಡ ಕೈಶೂರತನದಿ ॥ ೧೭ ॥
ಲೀಲೆಯ ನೋಡುವ ಭಾಗ್ಯ ವೇಳೆವೇಳೆ ತಂದೆತಾಯಿಗೆ ।
ಮೂಲಸುಕೃತದ ಫಲವೆಲ್ಲ ।
ಬಾಲರ್ನಾವು ಪರಾಧೀನದಿ ಕಾಲಗಳೆದೆವು ವನದಲ್ಲಿ ।
ಲಾಲಿಸಿಕೊಂಬುವ ಭಾಗ್ಯವಿಲ್ಲ ॥ ೧೮ ॥
ಸ್ವರ್ಗಸುಖವು ಜನನಿಜನಕರ್ಗೆ ಮಕ್ಕಳಾಟ ನೋಡಿ ।
ಹಿಗ್ಗುವದು ಪೂರ್ವ ಪುಣ್ಯಫಲವು ॥
ಅಗ್ರಜನ್ನ ಕೂಡಿ ವನದಿಯನರ್ಘ್ಯವಾಟವಾಡಿದೆವು ।
ದೃಗ್ಗಳಿಂದ ಕಾಣಲಿಲ್ಲ ನೀವು ॥ ೧೯ ॥
ಪಾಲುಬೆಂಣೆ ಇಕ್ಕಿ ಆಭರಣಗಳಿಟ್ಟು ಬರುವಂತಂಬೆ-।
ಗಾಲಿಕ್ಕಿಸಿ ವಲ್ಗುವಾಕ್ಯ ಕೇಳಿ ॥
ಲಾಲಾಂಕಿತವದನರದನ ಸಾಲು ನೋಡಿ ಮುದ್ದುಕೊಡುವ ।
ಬಾಲೆ ಧನ್ಯಳು ಪುಣ್ಯ ಸುಶೀಲೆ ॥ ೨೦ ॥
ಇಂಥ ತಾಯಿ ತಂದೆಗಳಿಗೆ ಅಂತ್ಯಕಾಲ ವಾರ್ಧಕ್ಯದಿ ।
ಸಂತೋಷದಲಿಟ್ಟವನೆ ಪುತ್ರ ॥
ಸಂತಮಹಂತರೊಳತ್ಯಂತ ಪೂಜ್ಯನಹನವನು ।
ಚಿಂತಿಸಿದರ್ ನಾವು ಹುಟ್ಟಿ ವ್ಯರ್ಥ ॥ ೨೧ ॥
ಪಿತೃವರ್ಗೆ ಬಹು ಸುಖವಿತ್ತವನೆ ಜೀವನ್ಮುಕ್ತ ।
ಚಿತ್ತಖೇದಮಾಳ್ಪ ಜೀವತ್ಪ್ರೇತ ॥
ಹತ್ತೆಂಟು ಸಾವಿರ ವರುಷ ತುತ್ತಿಟ್ಟು ಸ್ವಮಾಂಸವನುಂಬ ।
ಓತ್ತೇಳುತ ನಿರಯದಲ್ಲಿ ದಂಭ ॥ ೨೨ ॥
ವೃದ್ಧಾಪ್ಯಕಾಲದಿ ಪಿತೃವೃದ್ಧರನ್ನು ಗುರುಗಳನ್ನು ।
ಸಾಧ್ವಿಪತ್ನಿ ಶಿಶುಗಳ ವಿಪ್ರರನ್ನು ॥

ಇನ್ನಿಷ್ಟು ಪ್ರಪನ್ನರನ್ನು ಹೊದ್ದಿದವರ ಸಾಕದಿಪ್ಪ ।
ಬುದ್ಧಿಹೀನ ಸೇರುವನು ನರಕವನು ॥ ೩೩ ॥

ಭೋಜಪನುಪದ್ರವಕ್ಕೆ ಪೂಜಿಸಲಿಲ್ಲ ನಿಮ್ಮನು ।
ಈ ಜನ್ಮ ವ್ಯರ್ಥವಾಯಿತಯ್ಯ ॥
ಆ ಜನನಿಜನಕರಿಗೆ ತೇಜೋಮಯ ಕ್ಷಮಿಸಿರೆಂದ ।
ರಾಜೀವಜಜನಕಾ ಮುಗಿದ ಕೈಯ ॥ ೩೪ ॥

ನಿಮ್ಮ ಶುಶ್ರೂಷಣವ ಮಾಡಿ ಒಮ್ಮೆ ತುಷ್ಟಿ ಬಡಿಸಲಿಲ್ಲ ।
ನಮ್ಮಸ್ವಾತಂತ್ರ್ಯವಿಲ್ಲದೆ ಅಂದು ॥
ನಮ್ಮ ಧರ್ಮ ಕ್ಷಮಿಸಿರೆಂದು ಅಮ್ಮ ದೇವಕಿ ವಸುದೇವನಿಗೆ ।
ನಮ್ಮಿಸಿದ ಕೃಷ್ಣ ಅಗ್ರಜನಿಂದ ॥ ೩೫ ॥

ವಿಧಿಭವೇಶ ವಿಶ್ವಾಂತರ್ಯ ವದಿಸಿದ ಮನುಷ್ಯಜನರು ।
ವದಿಸಿದಂತೆ ತಾಯಿತಂದೆಗಳಿಗೆ ॥
ಸದಮಲ ಮಾಯಾದಳೆದು ಮೋಹಿಸಿದ ದೇವಕಿಗೆ ।
ಮುದವಿತ್ತಂಕದಲ್ಲಿ ಕುಳಿತ ಬ್ಯಾಗೆ ॥ ೩೬ ॥

ತೋಷಾಬ್ಧಿಯಲಿ ಮುಳುಗಿದರು ಶೈಶುಲೀಲೆಯ ಮಕ್ಕಳಪ್ಪಿ ।
ಮೂಸಿನೋಡಿದರು ಮಸ್ತಕವನು ॥
ಸೂಸಿದರು ಅಶ್ರುಸ್ನೇಹಪಾಶದಿಂದ ಬಾಷ್ಪಕಂಠ–।
ಭಾಷೆ ಗದ್ಗದದಂತೆ ಮೋಹಿಸಿದರು ॥ ೩೭ ॥

ಅಶ್ರುಧಾರೆ ಸಿಂಚಿಸುತ್ತ ಆ ಶೌರಿ ದೇವಕಿದೇವಿ ।
ಶಾಶ್ವತ ಮಕ್ಕಳೆಂದು ತಿಳಿದರು ॥
ವಾಸುದೇವ ಬಲರಾಮರು ಕೂಸುಗಳಂತೊಂದಿಸಿದರು ।
ವಿಶ್ವವಂದ್ಯರ್ ವಿಶ್ವಕೆ ಮೋಹಕರು ॥ ೩೮ ॥

ದುಷ್ಟಮಥನ ಪುಣ್ಯಕಥನ ಶಿಷ್ಟಪಾಲ ಶ್ರೀಭೂಲೋಲ ।
ಕೃಷ್ಣಬಲರು ಉಗ್ರಸೇನನಿಗೆ ॥

ತುಷ್ಟಿಯಿಂದ ವಂದಿಸಲು ಅಷ್ಟು ಜನಕಾಶ್ಚರ್ಯ ।
ದೃಷ್ಟಿಗಾಗೆ ಸೃಷ್ಟಿಕರ್ತರಾಗೆ ॥ ೩೯ ॥

ಈ ಸತ್ಕಥೆಯ ಪೇಳಿದನು ವ್ಯಾಸಸೂನು ನೃಪವರಗೆ ।
ಶ್ರೀಶನೊಲುಮೆ ಆಶು ಲಾಭವಾಗೆ ॥
ಪ್ರಸನ್ವೆಂಕಟದಾಸರಿಗೆ ಲೇಸು ಲೇಸು ಲೇಸು ಸರ್ವ– ।
ದಾ ಸುಖವು ಹೇಳಿ ಕೇಳಿದವರಿಗೆ ॥ ೪೦ ॥

ಶಬ್ದಾರ್ಥಃ— ಅತತಾಯಿ=ವೈರಿ. (ಕೊಳ್ಳಿಕೊಡುವವ, ವಿಷಕೊಡುವವ, ನಿರಪರಾಧಿಗಳ ಮೇಲೆ ಶಸ್ತ್ರವೆತ್ತಿದವ, ಪರಧನವನ್ನಪಹರಿಸುವವ, ಪರಸ್ತ್ರೀಯನ್ನಪಹರಿಸುವವ, ಅನ್ಯರ ಕ್ಷೇತ್ರವನ್ನಪಹರಿಸುವವ ಇವರು ಆರು ಜನರು ಆತತಾಯಿಗಳು ) ಚರ್ಮ=ಥಾಲು. ಪರಿಘ=ಚಕ್ರ. ಕುಂಭಿನೀ=ಭೂಮಿ. ನಿಕುರುಂಬ=ಸಮೂಹ. ವಲ್ಗು=ಮನೋಹರವಾದ, ಲಾಲ=ಲಾಲಾರಸ. ಸಾಂಗತ್ಯವಿಭೇದವು. ೧೦೦೪ ನುಡಿಗಳು.

---

## ೬೬

### ರಾಗ ಶಂಕರಾಭರಣ ಅಟ್ಟತಾಳ.

ಅಮ್ಮಮ್ಮಚ್ಚರಿಯು ವಿಚಿತ್ರ ಚರಿತ್ರ
ಧರ್ಮರಕ್ಷಕ ಭಕ್ತಸಮೂಹಮಿತ್ರ ॥ ಪಲ್ಲ ॥

ಬ್ರಹ್ಮರುದ್ರೇಂದ್ರಾದಿ ಸುಮ್ಮನಸರಿಗೆಲ್ಲ । ಉಮ್ಮಯು ಪದವೀವ ರಮ್ಮೇಶನು ॥
ತಮ್ಮ ಮುತ್ತಯ್ಯಗೆ ಹೆಮ್ಮೆಯನಿತ್ತನು । ತಾ ಮತ್ತೆ ದೌತ್ಯವ ಕರ್ಮ ವಹಿಸಿದ ॥ ೧ ॥

ಉರ್ವಿಮಂಡಲಕರಸನ ಮಾಡಿ ಪಟ್ಟವಿ । ತ್ತೂರ್ವಿಪಾಲಕರು ಕಪ್ಪವನೀವಂತೆ ॥
ಸರ್ವೇಶ್ವರ ಕೃಷ್ಣ ಸರ್ವರಿಗಾಜ್ಞಾಪಿಸಿದ । ಗರ್ವಖಂಡಿಸಿವನು ಗರ್ವದ ಖಳರ ॥ ೨ ॥

ಪೂರ್ವದಿ ಯಾಯಾತಿಯು ಶಾಪದಿಂ ಯದುವಂಶ । ಕರ್ಹತೆಯಿಲ್ಲವಸು
ತನಕೆಂದು ॥
ಸರ್ವಜ್ಞತ್ವ ವ್ಯಕ್ತವಾಡಿದ ಮುರಹರ । ನಿರ್ವಚನೀಯ ಸಮರ್ಥ ಪ
ರಾರ್ಥ ॥ ೩ ॥
ಹೀಗೆ ನೇಮಿಸಿ ಪವನಂಗೆ ಯೋಗಿಸಿ ಶತ । ಯಾಗಗೆ ಆಜ್ಞೆ ನಿರೋಪಿ
ಸುತ ॥
ಬೇಗನೆ ತರಿಸಿದ ಸುಧರ್ಮ ಸಭೆಯ ನಿ । ಯೋಗಿಸಿ ನೃಪಶಾಸನವಿತ್ತ
ಜ್ಞನಿಗೆ ॥ ೪ ॥
ಪಾತಕಿ ಕಂಸನ ಭಯದಿಂದೋಡಿಹೋದ । ಪೂತ ಜೀವರ ಯಾದವರ
ನ್ನೆಲ್ಲ ॥
ಆತುರದಿ ಕರೆಸಿದ ದೀನವತ್ಸಲ ಕೃಷ್ಣ । ಪ್ರೀತಿಯಲಿ ಸ್ವಸ್ಥಾನಪಲ್ಲಿಟ್ಟ
ನವರ ॥ ೫ ॥
ದಾಶಾರ್ಹ ವೃಷ್ಣಿ ಅಂಧಕ ಮಧು ಕುಕ್ಕುರ । ರು ಸಾತ್ವತರು ಕುಲ
ಬಂದುಗಳು ॥
ದೇಶಾಂತರದಿ ಬಳಲಿ ಕರಸಿ ತಂದವರ । ವಾಸುದೇವ ಸೌಖ್ಯದಲಿಟ್ಟ
ಬಹಳ ॥ ೬ ॥
ಶ್ರೀಶನ ನೇಮದಿ ಸೌಖ್ಯವ ಕಂಡು ಶ । ಯ್ಯಾಸನ ಮೃಷ್ಟಾನ್ನಪಾನದಲಿ ।
ಈಶನಾಸ್ಯಾಬ್ಜಪೀಯೂಷವದಾವಾಗ । ಆಸ್ವಾದಿಸಿದರು ಜೀವನ್ಮುಕ್ತರ
ರವರು ॥ ೭ ॥
ಸಂಸೃತಿಭಯವೇಕೆ ದ್ವೇಷಿಗಳಾತಂಕ । ಲೇಶ ಕಾಣಲಿಲ್ಲ ಸ್ವಪ್ನದಲ್ಲಿ ॥
ತೋಷವೆಗ್ಗಳ ದಿನದಿನದಲಿ ಕೃಷ್ಣ ಸಂ । ಭಾಷಣೆ ಸಹವಾಸ ಅಪವ
ರ್ಗವಾಸಾ ॥ ೮ ॥
ಅನಂತಗುಣಸಾಮ ಪೂರ್ಣನು ಮುಕ್ತೇಶ । ತಾ ನಾಲಿಗೆಯಲಿ ನಿಂತು
ನುಡಿಸಿದನು ॥
ಪ್ರಾಣೇಶಪ್ರೇರಣೆಯ ಪ್ರಾಕೃತ ಪದ । ಜ್ಞಾನಿಗಳಿಗೆ ಸಮ್ಮತ ಖಳರಿ
ಗಲ್ಲ ॥ ೯ ॥

ಈ ದಶಮುಸ್ಕಂದ ಭಾಗವತ ಪೂರ್ವಾರ್ಧವು । ಮೇದಿನಿಯಲಿ ಹೇಳಕೇಳ್ದರ್ಗೆ ॥
ಯಾದವಕುಲರತ್ನ ಸರ್ವ ಪುರುಷಾರ್ಥವ । ಸಾಧಿಸಿಕೊಡುವ ಸತ್ಯವು ನಿತ್ಯ ॥ ೧೦ ॥

ಪ್ರಸನ್ನಚಾರಿತ್ರ ಪ್ರಸನ್ನಶೋಭನವಕ್ತ್ರ । ಪ್ರಸನ್ನಾಪಾಂಗನೇತ್ರ ಪ್ರಸನ್ನಗಾತ್ರ ॥
ಪ್ರಸನ್ನವೆಂಕಟಕೃಷ್ಣ ಪ್ರಸನ್ನನಾದರೆ ನಿತ್ಯ । ಪ್ರಸನ್ನತರೋಕ್ತಿ ಬಾಹವು ಭಕ್ತಜನಕೆ ॥ ೧೧ ॥

ಶಬ್ದಾರ್ಥ:—ಉಮ್ಮಯ=ಶ್ರೇಷ್ಠ. ಹೆಮ್ಮೆ=ಪ್ರಭುತ್ವ. ಬಳಲೆ=ಕಷ್ಟಿಸಲು. ಸಾಂಗತ್ಯ ವಿಭೇದವು. ೧೦೧೫ ನುಡಿಗಳು.

---

೬೬

ರಾಗ ಮಾಳವಶ್ರೀ — ಅಟ್ಟತಾಳ

ಜಯ ಜಯ ರಂಗಾಗೆ ಜಯ ದೇವೋತ್ತುಂಗಗೆ ॥
ಜಯ ಯದುಪುಂಗ್ವಾಗೆ ಜಯ ಶ್ರೀಸಂಗಗೆ ॥ ಪಲ್ಲ ॥

ಹೊದ್ದಿ ಯದುಕುಲ ಸಾರ್ದು ಗೋಕುಲ । ಶುದ್ಧತಾಯಿ ಮೊಲೆ ಮೆದ್ದ ॥
ಪೇರ್ದ ಬಕಿಯನು ಬಿದ್ದ ಶಕಟನ । ಉದ್ಧಟನಿಲನ ಮರ್ದ ॥
ಮುದ್ದು ವದನದಿ ತೋರ್ದ ಭುವನವ । ಸಿದ್ಧಗೋರಸ ಕದ್ದ ॥
ವರ್ಧಿಸಿದ ಬಲಭದ್ರನೊಡನೆ ಅ । ಲ್ಲಿದ್ದ ನಿತ್ಯ ಪ್ರವೃದ್ಧ ॥ ೧ ॥

ಗೋಪಿ ಯಶೊದೆಗೆ ಗೋಪನಂದಗೆ ಮ । ಹಾಪರಮಲೀಲೆ ತೋರ್ಪ ।
ಗೋಪಜನರಿಗೆ ಗೋಪಿಕೆಯರಿಗೆ । ಶ್ರೀಪತಿಸಖನು ಅಪ್ಪಾ ॥
ಶಾಪದಲಿ ತರುರೂಪರಾದ ಧನ । ದಾಪುತ್ರರ ಉದ್ಧರಿಪ ।
ಸುಪವಿತ್ರ ರೋಮಕೂಪದಿ ವೃಕ್ಷಜ । ಮೂಪವಂ ಪೆತ್ತಾಧಿಪ ॥ ೨ ॥

ವೃಂದಾವನದಲಿ ನಂದರಾಜನ । ಬಂಧುಗಳ ಸಹ ನಿಂದಾ ॥
ಚಂದದಲಿ ವತ್ಸವೃಂದ ಕಾಯಿದ । ಬಂದ ವತ್ಸಬಕ ಕೊಂದ ॥
ಮಂದಧೇನುಕನ ಛಿಂದಿಸಿದ ಸಖ । ರಿಂದ ತಾಳ್ ಪಣ್ಣು ತಿಂದ ।
ಅಂದದಲಿ ಗೋವರ್ ತಂದ ಬರ್ಹಪೂಗ । ಳಿಂದ ಪೂಜಿತಗಂಧಾ ॥೩॥

ಶ್ರೀಶ ನರನಟವೇಷ ಗೋಗಣ । ಪೋಷಕಾನಂದ ಕೋಶ ।
ಆಶೀವಿಷನತಿ ಕ್ಲೇಶಬಡಿಸಿ ಸು । ತೋಷವಿತ್ತ ಗತಾಯುಸ ॥
ವಶನಾದಂದದಿ ಯೋಷಿಜನರ ಮೋಹಿಸಿ ಕಾಮುಜ್ವರನಾಶ ।
ಗ್ರಾಸಮಾಡಿ ಹುತಾಶನನ ಗೋಪ । ಗೋಸಮೂಹ ರಕ್ಷಕೇಶ ॥೪॥

ಲಂಡ ಪ್ರಲಂಬನ ದಂಡಿಸಿದ ಪುರ । ಮಂಡಲೇಡ್ಯ ಯದುಶೌಂಡ ।
ಹಿಂಡು ಗೋವರ್ಸಹ ಉಂಡು ಯಾಜಿಗಳ । ಹೆಂಡರನು ತಂಡತಂಡ ॥
ಚಂಡಿಕಾರ್ಚಕ ಮಿಂಡೆರ್ ವಸನೆತ್ತಿ । ಕೊಂಡು ಮರವೇರ್ದ ಪುಂಡ ।
ಖಂಡಲನ ಮದ ಖಂಡಿಸಿದ ಗಿರಿ । ಚಂಡು ಮಾಡಿದ ಪ್ರಚಂಡ ॥೫॥

ಇಂದಿರೇಶ ಸುಧಾಸಾಂದ್ರವೇಣುಸ್ವನ । ದಿಂದ ಗೋವೇರೆಲ್ಲರ ತಂದ ।
ಚಂದ್ರನುದಯದಿ ಚಂದ್ರಮುಖಿಯರು । ಕಂದರ್ಪನ ಶರದಿಂದ ॥
ನೊಂದು ಮೋಹಿಸಲಂದು ರಾಸಕ್ರೀಡೆ । ಹೊಂದಿಸಿದ ಪೂರ್ಣಾನಂದ ।
ಎಂದಿಗೆಂದಿಗೆ ಹೊಂದ ಸ್ಪೃಹ ಶ್ರೀಮು । ಕುಂದ ಸಚ್ಚಿದಾನಂದ ॥೬॥

ತಂದೆಯನು ನುಂಗಬಂದಜಗರಗೆ । ನಂದವಿತ್ತ ಗೋವಿಂದ ।
ಚಂದ್ರಿಕೆಯೊಳು ಮದಾಂಧ ಶಖಂಚೂಡ । ಇಂದುಮುಖಿಯರೊ
ಯ್ಬಂದ ॥
ಅಂದವ ಶೀಳಿ ಮಂದಗಮನೆರ । ಚಂದದ ವೇಣೂಗೀತೆಯಿಂದ ।
ನಂದಿಸಿದ ಚಿದಾನಂದ ಕೇಶಿ ವ್ಯೋಮರ್ । ಛಿಂದಿಸಿದ ಸುಖಸಾಂದ್ರ
॥ ೭ ॥

ನಾರದೇಡ್ಯನಕ್ರೂರಮತದಲಿ । ತೇರನೇರಿ ಮಥುರಾ ।
ಪೌರಕೈದಿದ ಧೀರ ದಾಮುಮನೋ । ಹಾರ ತ್ರಿವಕ್ರೋದ್ಧಾರಾ ॥

ಘೋರಧನುಷವಿದಾರ ಗಜಚಾ । ಣೂರ ಮಲ್ಲಸಂಹಾರಾ ॥
ಕ್ರೂರಕಂಸಕುದಾರ ವಸುಧಾ । ಭಾರಹರ ಯದುವೀರ ॥ ೮ ॥

ಹೆತ್ತವರ ಆಪತ್ತುಹರ ತನ್ನ । ಮುತ್ತನಿಗೆ ಪದವಿತ್ತ ।
ಮತ್ತೆ ಯಾದವವೊತ್ತಕತಿಸುಖ । ದಾತ ಘನಸಮರ್ಥ ॥
ಇತ್ತ ನಂದನ ಹಟ್ಟಿಗಟ್ಟಿದ । ಉತ್ತವೋದ್ಧವಕರ್ತ ।
ಪಾರ್ಥ ಕುಶಲಕೆ ಹಸ್ತಿನಗರಕೆ । ಅತ್ತಕ್ರೂರಗಾಜ್ಞೆಯನಿತ್ತ ॥ ೯ ॥

ಕ್ರೂರ ಯವನಸಂಹಾರ ಮುಚುಕುಂದೋ । ದ್ಧಾರ ದ್ವಾರಕಮಂದಿರ ।
ಧಾರುಣಿಯ ನೃಪವೀರರನು ಗೆದ್ದು । ಭೂರಿದ್ರವ್ಯಾಪಹಾರ ॥
ನಾರಕಮುರಾದಿ ಚೋರರ್ ಬಡಿದ್ಯೊಂತ । ಕಾರಿ ನಿಜಗರ್ಪಕಾರಿ ।
ವೀರಿ ವೃಷ್ಟಸಾಸಿರ ನೂರೆಂಟು । ನಾರೇರಾಳ್ದ ಗಂಭೀರ ॥ ೧೦ ॥

ಪಾರಿಜಾತ ಸತ್ಯಾ ರಮಣಿಗಿತ್ತು । ಭೂರಿನೇತ್ರನುದಹರ ।
ಘೋರ ನೃಗಪಾಪಹಾರ ಸ್ಯಮಂತವ । ಕ್ರೂರಗಿತ್ತ ಉದಾರಾ ॥
ಹಾರುವರಿಗೆ ಕವಾರರನು ಕೊಟ್ಟ । ಕಾರುಣಿಕ ಸುಖಸಾರಾ ।
ವಾರಿಜೋದ್ಭವ ಕೌರವರಹರ । ವಾರಾದ್ಯಖಿಳಾಧಾರಾ ॥ ೧೧ ॥

ದಂತವಕ್ರ ಪೌಂಡ್ರಕಾಂತಕ ಖಳ । ಧ್ವಾಂತಭಾನುಪ್ರಕಾಶಾಂತ ।
ಕುಂತಿಪುತ್ರರತ್ಯಂತಸಂರಕ್ಷಕ । ಚಿಂತ್ಯಶಕ್ತ್ಯಾನಂತಾ ॥
ಕಾಂತ ರಾಜಸೂಯಾಂತ ಪೂಜ್ಯ ಸ್ವ । ತಂತ್ರ ಮೋಕ್ಷಸುಪಂಥ ।
ಭ್ರಾಂತಚೈದ್ಯನಿಕೃಂತ ಸಂತತ । ದಾಂತ ವಿಶ್ವನಿಯಂತಾ ॥ ೧೨ ॥

ಹೀನಕೌರವ ಕ್ಷೀಣಕಾರಣ । ಕ್ಷೋಣಿಭರಘ್ನ ಪ್ರವೀಣ ।
ಜ್ಞಾನಾನಂದಬಲಾನ್ಯೂನ ಆನಾದ್ಯಸ । ಮಾನವರ್ಧಿತದೀನ ॥
ಮೌನಿಜನಪ್ರಿಯ ಧ್ಯಾನಪ್ರಿಯ ಸತ್ । ಗಾನಪ್ರಿಯ ಪೂರಣ ।
ಧೇನುಗಿರಿಪತಿ ವೇಣುಗೋಪ ಪ್ರ । ಸನ್ನವೆಂಕಟ ಕಾರಣ ॥ ೧೩ ॥

ಶಬ್ದಾರ್ಥ: — ಮೆದ್ದ=ಉಂಡ. ಬಕೀ=ಪೂತನಾ. ಬರ್ಹ=ನವಿಲುಗರಿ. ಆಶೀವಿಷ=ಹಾವು. ಮಿಂಡೆಯರ್=ತರುಣಸ್ತ್ರೀಯರು. ಹೊಂತಕಾರಿ=ಮೋಸಗಾರ. ಚೈದ್ಯ=ಶಿಶುಪಾಲ. ಸಾಂಗತ್ಯವಿಭೇದವು. ೧೦೨೮ ನುಡಿಗಳು.




॥ ಶ್ರೀ ಮಧ್ವೇಶಾರ್ಪಣಮಸ್ತು ॥

# ತಿದ್ದುಪಡಿ.

| ಪುಟ. | ಪಙ್ತಿ. | ಅಶುದ್ಧ. | ಶುದ್ಧ. |
|---|---|---|---|
| ೩ | ೧ | ಗ್ರುಹತ್ರಯು | ಗೃಹತ್ರಯು |
| ೩ | ೭ | ಪೀಯೂಷ | ಪೀಯುಷ |
| ೪ | ೬ | ಘಸ್ನ | ಘನ್ನ |
| ೫ | ೭ | ಧರ್ಮೋದರಣ | ಧರ್ಮೋದ್ಧರಣ |
| ೫ | ೧೦ | ಶೃತಿ | ಶ್ರುತಿ |
| ೫ | ೨೧ | ರೋಧಿಸೆ | ರೋದಿಸೆ |
| ೭ | ೬ | ದೆಶೆಶೆಯಿಂ | ದೆಸೆಯಿಂ |
| ೭ | ೧೬ | ಅಭಿಧಾನ | ಅಬಿಧಾನ |
| ೯ | ೯ | ಉದಿಸೆಸೆ | ಉದಿಸೆ |
| ೧೭ | ೨೨ | ಚಮುರರೇ | ಚದುರೇ |
| ೧೮ | ೧೯ | ದೃಹಿಣ | ದ್ರುಹಿಣ |
| ೨೬ | ೧೭ | ಅಪ್ಪುವಳು | ಅಪ್ಪುವರು |
| ೨೭ | ೧೬ | ವಾರ್ದಿ | ವಾರ್ಧಿ |
| ೩೫ | ೪ | ವಿಷಿಸ್ಟಿ | ವಿಷ್ಟಿಸಿ |
| ೩೯ | ೧೫ | ಸಮ್ಮನೆ | ಸುಮ್ಮನೆ |
| ೪೩ | ೧೬ | ಮೆಲತಿದ್ದ | ಮೆಲುತಿದ್ದ |
| ೪೫ | ೬ | ವೃಜ | ವ್ರಜ |
| ೫೨ | ೧೪ | ಮಿಕ್ಕದೆ | ಯಿಕ್ಕದೆ |
| ೫೪ | ೨೩ | ಬೆದರಹುಲಿ | ಬೆದರುಹುಲ್ಲೆ |
| ೫೬ | ೧೧ | ದೀಶ್ವನು | ಧೀಶ್ವರನು |
| ೬೨ | ೨ | ಕಟ್ಟಿಸಿದನು. | ಕಷ್ಟಿಸಿದನು. |
| ೬೨ | ೧೫ | ಕೃಷ್ಟ | ಕೃಷ್ಣ |
| ೬೬ | ೧೭ | ನಸುವೆಳೆ | ನಸುಯೆಳೆ |
| ೬೮ | ೧೨ | ಕಂಧರನ | ಕುಧರನ |
| ೭೦ | ೧ | ಸ್ಪಷ್ಟ | ಸ್ಪ್ರುಷ್ಟ |

| ಪುಟ. | ಪಂಕ್ತಿ. | ಅಶುದ್ಧ. | ಶುದ್ಧ. |
|---|---|---|---|
| ೮೦ | ೬ | ಗ್ರಹಮೇಧಿ | ಗೃಹಮೇಧಿ |
| ೯೩ | ೮ | ಸರ್ವರಿಂದೆಂದರ ಸುತ | ಸರ್ವರಿಂದೆಂದರಸುತ |
| ೯೬ | ೧೬ | ಕೇಳ | ಕೇಳು |
| ೧೦೧ | ೩ | ಮನವು | ಮನ |
| ೧೦೧ | ೨೦ | ಗಣೆಯುನ | ಗಣೆಯನು |
| ೧೦೨ | ೧ | ಅಸೆ | ಅಸಿ |
| ೧೦೨ | ೨೧ | ಶಾಂಡಾ | ಶೌಂಡ |
| ೧೦೮ | ೭ | ಪರೆಯುರ | ನೀರೆಯುರ |
| ೧೦೯ | ೬ | ಬಟ್ಟಲೇಯುಲ್ | ಬಿಟ್ಟಲೇಯುಲ್ |
| ೧೦೯ | ೧೫ | ಮೆಟ್ಟಿದಾಕೆ | ಮೆಚ್ಚಿದಾಕೆ |
| ೧೧೪ | ೭ | ವೃಂದಾರಕೇಷ್ಟ | ವೃಂದಾರಕೇಪ್ಸ |
| ೧೧೮ | ೩ | ನಂದವಿದ | ನಂದವಿದ್ದ |
| ೧೧೮ | ೮ | ಹೇಮೆ | ಹೇಮ |
| ೧೧೮ | ೧೩ | ಮೆರೆದು | ಮರೆದು |
| ೧೧೮ | ೨೦ | ಕೋವಿದರಾಣಿ | ಕೋವಿದರಾಗಿ |
| ೧೨೮ | ೨೫ | ಹುಲು | ಹುಲ್ಲು |
| ೧೧೯ | ೧ | ಮೆಂಡಲಿದ್ದವು | ಮುಂಡಲಿದ್ದವು |
| ೧೨೦ | ೧೩ | ಹೈಮೆ | ಹೈಮ |
| ೧೨೦ | ೧೭ | ಸಿದ್ದ | ಸಿದ್ಧ |
| ೧೨೦ | ೧೮ | ಸ್ಥಿರೈಶ್ವೈರ್ಯ | ಸ್ಥಿರೈಶ್ವರ್ಯ |
| ೧೨೦ | ೨೧ | ಸುಪಕ್ಷಿ | ಸುಪಕ್ಷ |
| ೧೨೦ | ೨೫ | ಪಣ್ಣಳಿಗೆ | ಪೆಣ್ಗಳಿಗೆ |
| ೧೨೨ | ೮ | ತಮ | ತಮ್ಮ |
| ೧೨೨ | ೧೫ | ಸುಹೃಜನ | ಸುಹೃಜ್ಜನ |
| ೧೨೬ | ೫ | ಕಾದುಕರಿಗೆ | ಕಾರುಕರಿಗೆ |

| ಪುಟ | ಪಙ್ಕ್ತಿ | ಅಶುದ್ಧ | ಶುದ್ಧ |
|---|---|---|---|
| ೧೨೯ | ೬ | ಕೃಷ | ಕೃಷ್ಣ |
| ೧೨೯ | ೮ | ಕ್ರುದ | ಕ್ಷುದ್ರ |
| ೧೨೯ | ೧೩ | ಅಳುಗಳೆನ್ನ | ಆಳುಗಳೆನ್ನ |
| ೧೩೦ | ೨ | ಸಿದ್ಯಸಿ | ಸಿದ್ಧ್ಯಸಿ |
| ೧೩೦ | ೧೨ | ಗ್ರಹ | ಗೃಹ |
| ೧೩೧ | ೧೪ | ಅಬ್ಧಿಶಯುದ | ಅಬ್ಧಿಶಯುನ |
| ೧೩೨ | ೮ | ಭಾಗವತೋಶ್ರಮ | ಭಾಗವತೋತ್ತಮ |
| ೧೩೩ | ೨೪ | ಶುಂಖ | ಶಂಖ |
| ೧೩೪ | ೨೫ | ಗುಣವೆತ್ತಿ ಕರವ | ಗುಣವ್ಯತಿಕರವ |
| ೧೩೬ | ೨೩ | ನಾರಾಯುನು | ನಾರಃಯಣನು |
| ೧೩೭ | ೪ | ಕೆಣಳ | ಕೆಳಗೆ |
| ೧೪೦ | ೪ | ಗೋಪ್ತಾರನಹನು | ಗೋಪ್ತಾರನಿಹನು |
| ೧೪೪ | ಕೊನೆಯದು | ಭಾಗವತ್ತೋತ್ತಮ | ಭಾಗವತೋತ್ತಮ |
| ೧೪೫ | ,, | ಬಂಧು | ಒಂದು |
| ೧೪೮ | ೩ | ಬಡವರ | ಬಡವರು |
| ೧೪೯ | ೯ | ಯೋಗೇಶರೀ | ಯೋಗೇಶ್ವರೀ |
| ೧೫೩ | ಕೊನೆಯದು | ಬಕ್ತಿಯುಲಿ | ಭಕ್ತಿಯುಲಿ |
| ೧೫೬ | ೨ | ಸ್ತೊಮುವನು | ಸ್ತೋಮುವನು |
| ೧೬೩ | ೧೧ | ಮಧುರೆ | ಮಥುರೆ |
| ೧೬೪ | ೭ | ತುಂಡುಲಾ | ತಂಡುಲಾ |
| ೧೭೨ | ೧ | ಕಾಣಿವೀ | ಕಾಣೆವೀ |
| ೧೭೩ | ೩ | ನರರರಲ್ಲ | ನರರಲ್ಲ |
| ೧೭೫ | ೧೧ | ಕುವಲಯುಪೀ ಪೀಡಕ | ಕುವಲಯುಪೀಡಕ |
| ೧೮೨ | ೨೧ | ನೀವಿ । ನ್ನೆ× | ನೀವಿ । ನ್ನೆಳೆ |
| ೧೮೩ | ೫ | ಪಾದಕೆ ಪಾದಕೆ | ಪಾದಕೆ |

| ಪುಟ. | ಪಂಕ್ತಿ. | ಅಶುದ್ಧ. | ಶುದ್ಧ. |
| --- | --- | --- | --- |
| ೧೮೬ | ೧೦ | ಕಡೆದನು | ಕೆಡೆದನು |
| ೧೮೬ | ೧೫ | ನೀಗೀದ | ನೀಗಿದ |
| ೧೮೬ | ೨೩ | ರುಣತ್ಕರಿಸಿ | ಝುಣತ್ಕರಿಸೆ |
| ೧೮೭ | ೧೪ | ಶ್ರಿಧವ | ಶ್ರೀಧವ |
| ೧೯೫ | ೨೦ | ದ್ವೈಷಿ | ದ್ವೇಷಿ |
| ೧೯೭ | ೨೩ | ಮಧುರಾ | ಮಥುರಾ |

# ಕರ್ಮವೀರ ಪುಸ್ತಕಾಲಯ

## ಧಾರವಾಡ

### ಕೌಜಲಗಿಯವರು ಸಿದ್ಧಪಡಿಸಿದ

### ಬೇರೆ ಪುಸ್ತಕಗಳು

೧. **ಶ್ರೀ. ಪ್ರಸನ್ನವೆಂಕಟದಾಸರ ಕೀರ್ತನೆಗಳು :—**
ಪ್ರಸಿದ್ಧವಾಗದಿದ್ದವು. ಅರ್ಥಸಹಿತವಾಗಿವೆ. ಆರ್ತಭ
ತತ್ತ್ವೋಪದೇಶ ಮೊದಲಾದ ಭಾಗಗಳು ಎದೆಯರ ಸು
ಬೆಲೆ

೨. **ಶ್ರೀ. ಪ್ರಸನ್ನವೆಂಕಟದಾಸರ ಕೀರ್ತನೆಗಳು**
೨, ೩, ೪ ಭಾಗಗಳು ಅಚ್ಚಿನಲ್ಲಿವೆ.

೩. **ಪತಿವ್ರತೆಯ ಪ್ರಭಾವ:**—ಪತಿವ್ರತೆಯ ಮೇ ಏ
ಒಂದು ಕಾಲ್ಪನಿಕ ಕಾದಂಬರಿಯು. ಬೆ

(ಅಂಚೆವೆಚ್ಚ ಬೇರೆ.)

---

ಇದಲ್ಲದೆ ನಮ್ಮ ಪುಸ್ತಕಾಲಯದಲ್ಲಿ ಮಂತ್ರ, ಸ
ಕಾಲೋಪಯೋಗಿ ಪುಸ್ತಕಗಳು ಯೋಗ್ಯಬೆಲೆಗೆ ಸಿಗುವವು.

---

ಜೋಶಿ ಮಾಧವರಾಯರಿಂದ ಕರ್ನಾಟಕ ಪ್ರಿಂಟಿಂಗ ವರ್ಕ್ಸ ಧಾರವಾಡ
ಹುಕ್ಕೇರಿಕರ ರಾಮರಾಯರಿಂದ
ಕರ್ಮವೀರ ಪುಸ್ತಕಾಲಯದಲ್ಲಿ ಪ್ರಸಿದ್ಧವಾಯಿತು.